# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ಆಚಾರ್ಯ, ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು

ಮುಖಚಿತ್ರ : ಹುಯ್ಯೋ ಹುಯ್ಯೋ ಮಳೆರಾಯ !

ವರ್ಣಚಿತ್ರ : ಮಲ್ಲಿಕಾರ್ಜುನ ಡಿ. ಜಿ.

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ದೆಹಲಿಯ ಖ್ಯಾತ ಮತ್ತು ಹಿರಿಯ ಪತ್ರಕರ್ತ ಎಂ. ಬಿ. ಲಾಲ್ 'ಹೊಸತು'ಗೆ ಒಂದು ಪತ್ರ ಬರೆದಿದ್ದಾರೆ. ವಿಷಯ : ಕರ್ನಾಟಕದ ಚುನಾವಣಾ ಫಲಿತಾಂಶದ ವಿಶ್ಲೇಷಣೆ. ಅವರ ಪ್ರಕಾರ ಕಾಂಗ್ರೆಸ್ಸಿನ ಸೋಲು ಬೆಂಗಳೂರು ನಗರವನ್ನು ಮಾಹಿತಿ ತಂತ್ರಜ್ಞಾನದ ಕೇಂದ್ರವನ್ನಾಗಿಸಿ, ಅಭಿವೃದ್ಧಿಯ ಅಂತರಾರ್ಥವನ್ನು ತಿರುಗು-ಮುರುಗು ಮಾಡಿರುವುದರ ವಿರೋಧದ ಸಂಕೇತವಾಗಿದೆ. ಜಾಗತೀಕರಣವನ್ನು ಜನ ತಿರಸ್ಕರಿಸಿದ್ದಾರೆ, ಏಕೆಂದರೆ ಅದರ ಅವಗುಣಗಳ ನೇರ ಅನುಭವವು ಜನರನ್ನು ತಟ್ಟಿದೆ. ಗ್ರಾಮೀಣ ಪ್ರದೇಶಗಳನ್ನು ಅಲಕ್ಷಿಸಿ ನಗರಗಳನ್ನು ಬೆಳೆಸುತ್ತಾ ಹೋಗುವ ಪ್ರಕ್ರಿಯೆಯನ್ನು ಜನರು ಮೂದಲಿಸಿದ್ದಾರೆ, ಅದಕ್ಕೆ ಪ್ರತಿರೋಧ ಒಡ್ಡಿದ್ದಾರೆ. ಭಾರತೀಯ ಜನತಾ ಪಕ್ಷದ ಗೆಲುವು ಮತೀಯತೆಯ ಗೆಲುವಲ್ಲ, ಬದಲಾಗಿ, ಅದು ಸಣ್ಣ ವ್ಯಾಪಾರಿಗಳ ಹಾಗೂ ಉದ್ಯಮಿಗಳ ಗೆಲುವು. ಮತೀಯತೆ ಮತ್ತು ಜಾತ್ಯತೀತತೆ ಎಂಬ ಧ್ರುವಗಳ ಆಧಾರದ ಮೇಲೆ ಚುನಾವಣಾ ಫಲಿತಾಂಶವನ್ನು ಅರ್ಥೈಸುವುದು ಸರಿಯಲ್ಲ.

– ಕರ್ನಾಟಕದ ಜನ ಮತಾಂಧತೆಯ ಪರವಾಗಿ ಮತ ಚಲಾಯಿಸಿಲ್ಲ ಎಂಬ ಮಾತನ್ನು ಒಪ್ಪಬಹುದು. ಅದಕ್ಕೆ ಎರಡು ಕಾರಣಗಳಿವೆ : (ಅ) ಪಕ್ಷಾಂತರವು ಈಗ ಎಷ್ಟು ಸಲೀಸಾಗಿದೆಯೆಂದರೆ ಭಾಜಪ ಸಹ ತನ್ನ ಕಟ್ಟಾ ಮಡಿವಂತಿಕೆಯನ್ನು ಸ್ವಲ್ಪಮಟ್ಟಿಗಾದರೂ ಕಳೆದುಕೊಂಡಿದೆ. ಶಾಸಕರಾಗಲು ಹಣ ಮತ್ತು ಜಾತಿ ಬಲ ಆದ್ಯತೆ ಪಡೆದುಕೊಂಡು ಮತಾಂಧತೆಯ ಸಿದ್ಧಾಂತ ಸ್ವಲ್ಪ ಹಿಂದಕ್ಕೆ ಸರಿದಿದೆ. ಭಾಜಪ ಶಾಸಕರಿಗೆ ಈಗ ಇಬ್ಬರು ಯಜಮಾನರು; ಬಳ್ಳಾರಿ ಜಿಲ್ಲೆಯ ಅಕ್ರಮ ಮತ್ತು ಸಕ್ರಮ ಗಣಿಗಾರಿಕೆಯ ಕೋಟ್ಯಾಧೀಶ್ವರರು ಹಾಗೂ ನಾಗಪುರದ ಆರೆಸ್ಸೆಸ್ ಜಾಲದ ಸ್ಥಳೀಯ ನೈತಿಕ ಅಧ್ವರ್ಯುಗಳು. ಸುದರ್ಶನ ಚಕ್ರಕ್ಕಿಂತಲೂ ಜನಾರ್ದನ ಕಬ್ಬಿಣದ ಅದುರಿಗೆ ಹೆಚ್ಚು ಪ್ರಾಬಲ್ಯವೆಂಬುದು ಪಕ್ಷಾಂತರ ಮಾಡುವುದರಲ್ಲಿ ಸಿದ್ಧಹಸ್ತರಾದವರಿಗೆ ತಿಳಿದಿರುತ್ತದೆ. ಅಂದರೆ 'ಹೀನಸುಳಿ'ಯ ಕಲೆ ಅಳಿಸಿಹೋಗಿದೆ ಎಂದರ್ಥವಲ್ಲ.

ಮಾಹಿತಿ ತಂತ್ರಜ್ಞಾನದ ಕೇಂದ್ರಗಳ ಲಾಭಕ್ಕಾಗಿ ಬೆಂಗಳೂರಿನ ಜನಸಾಮಾನ್ಯರ ಹಣ, ಶ್ರಮ, ಸೌಲಭ್ಯ ಮುಂತಾದುವನ್ನು ದೋಚುವುದರಲ್ಲಿ ಭಾಜಪವು ಕಾಂಗ್ರೆಸ್ಸಿಗಿಂತ ಹಿಂದೇನೂ ಇಲ್ಲ. ನಾರಾಯಣಮೂರ್ತಿಗಳಂತಹವರಿಗೆ ರಾಜಮರ್ಯಾದೆ ಯಥಾಪ್ರಕಾರ ಇರುತ್ತದೆ. ಅವರಿಗೆ ರಸ್ತೆ, ವಾಹನ, ಭೂಮಿ, ಸಿಂಹಾಸನ, ಎಲ್ಲವೂ ನಾಗರಿಕರ ತೆರಿಗೆಯಿಂದ ಸರಬರಾಜು ಮಾಡಲಾಗುತ್ತದೆ. ವಿಶೇಷ ಆರ್ಥಿಕ ವಲಯವನ್ನು ಭಾಜಪ ವಿರೋಧಿಸಿಲ್ಲ ಮತ್ತು ಜಾಗತೀಕರಣದ ವಿಸ್ತರಣೆಯನ್ನು ತಳ್ಳಿಹಾಕಿಲ್ಲ. ''ಗುಜರಾತು ಮಾದರಿ''ಯಲ್ಲಿ ಇದು ತತ್ವಶಃ ಅಡಕವಾಗಿದೆ. ಹಾಗಾದರೆ ಭಾಜಪದ ಗೆಲುವನ್ನು ಹೇಗೆ ವ್ಯಾಖ್ಯಾನಿಸಬೇಕು ? ಅದಕ್ಕೆ ಉತ್ತರ ಸರಳವಾಗಿದೆ. ಬಹುಮತಕ್ಕೆ ಅಗತ್ಯವಿದ್ದ ಸಂಖ್ಯೆಯನ್ನು ಮುಟ್ಟಲು 'ಸ್ವತಂತ್ರ ಅಭ್ಯರ್ಥಿ'ಗಳನ್ನು ಆಶ್ರಯಿಸಿದ್ದು ತಿಳಿದ ವಿಷಯ. ರಾಜ್ಯಪಾಲರ ಮುಂದೆ ಅವರನ್ನು ದೈಹಿಕವಾಗಿ ಮತ್ತು ಜೀವಂತವಾಗಿ ಹಾಜರುಪಡಿಸಲು ಕರೆದುಕೊಂಡು ಹೋಗುವ ಕೆಲಸ ಮಾಡಿದವರು ಭಾಜಪದ ಅಧ್ಯಕ್ಷರಲ್ಲ; ಭಾವೀ ಮುಖ್ಯಮಂತ್ರಿಗಳೂ ಅಲ್ಲ. ಅದನ್ನು ಮಾಡುವ ಸುಯೋಗ ದೊರೆತದ್ದು ಬಳ್ಳಾರಿಯ ಗಣಿ ದೊರೆಗಳಿಗೆ. ಇದು ನ್ಯಾಯಸಮ್ಮತವಾಗಿದೆ. ಏಕೆಂದರೆ, ಚಿನ್ನವನ್ನು ಕೊಳ್ಳಲು ಹಣ ಹೂಡಿದವನು ಸ್ವತಃ ತಾನು ಚಿನ್ನದ ಆಭರಣಗಳನ್ನು ಧರಿಸಿ ಪ್ರದರ್ಶಿಸಬೇಕು. ಬೇರೆಯವರ ಅಲಂಕಾರ ಸಾಧನವಾಗಲು ಅಷ್ಟೊಂದು ಬೆಲೆ ಬಾಳುವ ಚಿನ್ನವನ್ನು ಕೊಳ್ಳುವುದುಂಟೆ ? ಇದನ್ನು ಮುಂದುವರಿಸಿ ಹೇಳುವುದಾದರೆ, ಚಿನ್ನವನ್ನು ಕೊಂಡವರು ಅದನ್ನು ಸಂರಕ್ಷಿಸಿಕೊಳ್ಳಬೇಕು; ಅದನ್ನು ಯಾರಾದರೂ ಕದಿಯಲು ಬಂದರೆ ಶಸ್ತ್ರ ಪ್ರಯೋಗ ಮಾಡಿಯಾದರೂ ಶತಾಯಗತಾಯ ಅದನ್ನು ಉಳಿಸಿಕೊಳ್ಳಬೇಕು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಗಣಿ ದೊರೆಗಳು ಭಾಜಪಕ್ಕೆ ಸೇರಿದವರೆಂದು ಭಾವಿಸುವುದು ಅವರ ಅಂತಸ್ತಿಗೆ ಕಡಿಮೆಯಾಗುತ್ತದೆ; ಭಾಜಪವು ಪ್ರಸ್ತುತ ಅವರಿಗೆ ಸೇರಿದ್ದೆಂಬುದು ಹೆಚ್ಚು ಸಮಂಜಸವಾಗಿದೆ. ಗೆದ್ದುದು ಅರುಣ್ ಜೇಟ್ಲಿಯವರ ಬುದ್ಧಿವಂತಿಕೆ ಮತ್ತು ತಂತ್ರವಲ್ಲ, ಬದಲಾಗಿ ಕಾನೂನು ರೀತ್ಯಾ ಮತ್ತು ಕಾನೂನು ಬಾಹಿರವಾಗಿ ಗಣಿ ಸಂಪತ್ತನ್ನು ಕೊಳ್ಳೆಹೊಡೆಯುವ ದುರ್ಮಾರ್ಗವು ಪದಕವನ್ನು ಗೆದ್ದುಕೊಂಡಿತು.

* * *

ಚುನಾವಣಾ ಪ್ರಚಾರದ ಸಂದರ್ಭದಲ್ಲಿ ಗುಜರಾತಿನ ಮುಖ್ಯಮಂತ್ರಿ ಕರ್ನಾಟಕವನ್ನು ಪುನೀತವನ್ನಾಗಿಸಿದರು. ಸ್ಥಳೀಯ ಭಾಜಪ ನಾಯಕರು ಘೋಷಿಸುತ್ತಿದ್ದ 'ಗುಜರಾತು ಮಾದರಿ'ಬಗ್ಗೆ ಅವರು ಸ್ವಂತ ಅನುಭವವನ್ನು ತೆರೆದಿಟ್ಟರು : ''ಗುಜರಾತು ಎಂದರೆ ಅಭಿವೃದ್ಧಿ. ಅಭಿವೃದ್ಧಿಗೆ ಹಣ ಬೇಕು. ಹಣವು ಕಾಂಗ್ರೆಸ್ಸಿನ ಹಸ್ತದ ಮೇಲೆ ಅಥವಾ ದೇವೇಗೌಡರ ಹೊರೆ ಹೊತ್ತ ಹೆಂಗಸಿನ ಮೇಲೆ ಬರುವುದಿಲ್ಲ. ಲಕ್ಷ್ಮಿ ಬರುವುದು ತಾವರೆಯ ಹೂವಿನ ಮೇಲೆ... ಆದ್ದರಿಂದ ಲಕ್ಷ್ಮೀ ಕಟಾಕ್ಷವು ಕರ್ನಾಟಕಕ್ಕೆ ಬೇಕಾದರೆ ಕಮಲವನ್ನು ಆಘ್ರಾಣಿಸಬೇಕು. ಆಗ


೬ನೇ ಪುಟಕ್ಕೆ




ಸಂಪುಟ-೯ ಸಂಚಿಕೆ-೧೨ ಜುಲೈ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**

## ಸಂಪಾದಕೀಯ

# ಚುನಾವಣೆಗಳಿಗೆ ವೈಜ್ಞಾನಿಕ ವಿಧಾನ

ನಮ್ಮ ರಾಜ್ಯದಲ್ಲಿ ಇನ್ನೊಂದು ಚುನಾವಣೆ ನಡೆದು ಹೊಸ ಸರ್ಕಾರವು ಅಸ್ತಿತ್ವಕ್ಕೆ ಬಂದಿದೆ. ರಾಜ್ಯಭಾರ ನಡೆಸುವವರು ರಾಜ್ಯಕ್ಕೆ ಭಾರವಾಗದಿರಲೆಂದು ಜನರು ಆಶಿಸುತ್ತಾರೆ. ಈ ಜವಾಬ್ದಾರಿ ಹೊರುವವರು ಹೇಗೆ ಆಯ್ಕೆಯಾಗುತ್ತಿದ್ದಾರೆ ಮತ್ತು ನಿಜವಾದ ಪ್ರಜಾಪ್ರಭುತ್ವವು ನೆಲೆಗೊಳ್ಳಬೇಕಾದರೆ ಅವರು ಆಯ್ಕೆಯಾಗಬೇಕಾದ ಕ್ರಮ ಯಾವುದಿರಬೇಕು ಎಂಬುದನ್ನು ಚರ್ಚಿಸುತ್ತಲೇ ಬಂದಿದ್ದೇವಾದರೂ ಯಾವ ನಿರ್ದಿಷ್ಟ ಕ್ರಮಗಳನ್ನೂ ಕೈಗೊಳ್ಳದೆ, ಹಳೆಯ ಪದ್ಧತಿಯನ್ನು ಪರಿಷ್ಕರಿಸದೆ, 'ಅಪ್ಪ ಹಾಕಿದ ಆಲದ ಮರ'ಕ್ಕೇ ಜೋತುಬಿದ್ದಿದ್ದೇವೆ. ಇದರಿಂದಾಗಿ ಜನರ ಪ್ರಾತಿನಿಧ್ಯವೆಂಬುದು ಒಂದು ದೊಡ್ಡ ಸುಳ್ಳಾಗಿದ್ದರೂ ಸದಾ ವಿಜೃಂಭಿಸುತ್ತಲೇ ಬಂದಿದೆ. ರಾಜ್ಯದ ಕಾಂಗ್ರೆಸ್ ಅಧ್ಯಕ್ಷ ಖರ್ಗೆಯವರು ಒಂದು ವಿಚಿತ್ರವಾದ ಸಂತೋಷವನ್ನು ವ್ಯಕ್ತಪಡಿಸಿ ಚುನಾವಣಾ ಫಲಿತಾಂಶವನ್ನು ವಿಶ್ಲೇಷಿಸಿದ್ದಾರೆ. ಬೇರೆ ಪಕ್ಷಗಳು ಅಳಿಸಿಹೋಗಿ ಕ್ರಮೇಣ ಎರಡೇ ಪಕ್ಷಗಳಿರುವ 'ಸ್ವಾಗತಾರ್ಹ' ಸಂದರ್ಭವೇರ್ಪಡುತ್ತದೆಂಬ ಮಾತನ್ನವರು ಆಡಿದ್ದಾರೆ. ಸೋತರೂ ನಾವೇ ಮತ್ತು ಗೆದ್ದರೂ ನಾವೇ ಅಧಿಕಾರದಲ್ಲಿರುತ್ತೇವೆಂದು ಸಕಾರಣವಾಗಿ ತೀರ್ಮಾನಿಸುವ ಬಂಡವಾಳಿಗ ವರ್ಗದ ವಕ್ತಾರರಾಗಿರಲು ಖರ್ಗೆ ಸರ್ವಥಾ ಸಮರ್ಥರೆಂಬುದಕ್ಕೆ ಇದು ನಿದರ್ಶನ. ಅಮೆರಿಕಾದ ಆನೆ ಮತ್ತು ಕತ್ತೆ ಪಕ್ಷಗಳಂತೆ ನಮ್ಮಲ್ಲಿಯೂ ಕತ್ತೆ-ಕುರಿ ಪಕ್ಷಗಳು ಭದ್ರವಾಗಿ ನೆಲೆಗೊಳ್ಳಲೆಂದು ಆಶಿಸಿರುವವರಲ್ಲಿ ಅವರೇನೂ ಮೊದಲಿಗರಲ್ಲ; ಕಡೆಯವರೂ ಅಲ್ಲ. ಅವರ ಭವ್ಯ ಕನಸನ್ನು ಭಗ್ನಗೊಳಿಸುವ ಪಕ್ಷಗಳನ್ನು ಸಮರ್ಥಿಸುವ ನಾಗರಿಕರೂ ಇದ್ದಾರೆಂಬುದನ್ನು ಅವರು ತಿಳಿದುಕೊಳ್ಳುವುದು ಅನಿವಾರ್ಯವಾಗಿದೆ. ಜನರ ಪ್ರತಿನಿಧಿಗಳು ಎರಡು ಕೃತ್ರಿಮ ಬಣಗಳಿಗೆ ಸೇರಿದವರಷ್ಟೇ ಆಗಿರಬೇಕೆಂದು ಹಲುಬುವಾಗ ಜನರ ಆಶೋತ್ತರಗಳು ಹಲವು ರೀತಿಯವೆಂದು ಗ್ರಹಿಸಬೇಕಾದ್ದು ಯಾವುದೇ ರಾಜಕೀಯ ವ್ಯಕ್ತಿಯ ಕರ್ತವ್ಯವಾಗಿರುತ್ತದೆ. ಇಂದಿನ ಸನ್ನಿವೇಶದಲ್ಲಿ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಮುಂಚೂಣಿಯಲ್ಲಿವೆ. ಒಂದು ರೀತಿಯಲ್ಲಿ ಗಂಡಭೇರುಂಡದ ಎರಡು ತಲೆಗಳಿದ್ದಂತೆ ಅವು; ಏಕೆಂದರೆ, ಎರಡೂ ಪಕ್ಷಗಳ ಆರ್ಥಿಕ ಕಾರ್ಯಕ್ರಮ ಒಂದೇ ಆಗಿದೆ ಮತ್ತು ಎರಡು ಪಕ್ಷಗಳೂ ಭಾರತದ ಸ್ವಾತಂತ್ರ್ಯ ಹೋರಾಟದ ಆಕಾಂಕ್ಷೆಗಳನ್ನು ಗಾಳಿಗೆ ತೂರಿವೆ. ಆದರೆ ಜನತೆಯು ಗಾಂಧೀಜಿ, ಭಗತ್ ಸಿಂಗ್, ಅಂಬೇಡ್ಕರ್ ಮುಂತಾದವರು ಅಪೇಕ್ಷಿಸಿದ್ದ ಭವಿಷ್ಯವನ್ನು ಈಗಲೂ ಗುರುತಿಸುತ್ತಾರೆ, ನೆನೆಸುತ್ತಾರೆ ಮತ್ತು ಅದರ ಆವಿಷ್ಕಾರಕ್ಕಾಗಿ ಹೋರಾಟ ನಡೆಸುತ್ತಾರೆ. ಹಾಗೆ ನೋಡಿದರೆ, ಕಾಂಗ್ರೆಸ್ ಮತ್ತು ಭಾಜಪ ಒಟ್ಟುಗೂಡಿ ಒಂದೇ ಪಕ್ಷವನ್ನು ರಚಿಸಿಕೊಂಡರೆ ಅದು ಸೈದ್ಧಾಂತಿಕ ಪ್ರಾಮಾಣಿಕತೆಗೆ ಒಂದು ನಿದರ್ಶನವಾಗಬಲ್ಲದು ಮತ್ತು ಇಬ್ಬರೂ ಒಟ್ಟಿಗೆ ಹೋಗಿ ಅಮೆರಿಕಾದ ಲಾಂಛನವಾದ ಹದ್ದಿನ ಎರಡೂ ರೆಕ್ಕೆಗಳಡಿ ಆಶ್ರಯ ಪಡೆಯಬಹುದು. ಅವಳಿ-ಜವಳಿ ಮಕ್ಕಳಲ್ಲಿ ಕಾಣಬರುವ ಕೆಲವು ಭಿನ್ನತೆಗಳಂತೆ ಈ ಎರಡು ಪಕ್ಷಗಳಲ್ಲಿ ಅಲ್ಲೊಂದು ಇಲ್ಲೊಂದು ವ್ಯತ್ಯಾಸವಿದೆ; ಆದರೆ ಬರಬರುತ್ತಾ ಅದು ಗೌಣವಾಗುತ್ತಾ ಹೋಗುತ್ತಿದೆ.

ಅಧಿಕಾರಕ್ಕೆ ಬಂದಿರುವ ಭಾಜಪಕ್ಕೆ, ಚಲಾವಣೆಯಾದ ಮತಗಳ ಪೈಕಿ ಶೇ. ೩೦ ದೊರೆತಿದೆ. ನೂರಕ್ಕೆ ಅರವತ್ತು ಮಂದಿ ಮತ ಚಲಾಯಿಸಿದರು ಮತ್ತು ಅದರಲ್ಲಿ ಶೇಕಡ ಮೂವತ್ತು ಭಾಜಪಕ್ಕೆ ಬಂತು. ಅಂದರೆ, ಒಟ್ಟು ಮತದಾರರ ಸುಮಾರು ಶೇಕಡ ಇಪ್ಪತ್ತು ಸಂಖ್ಯೆಯ ಮಂದಿ ಭಾಜಪದ ಪರ ಮತ ನೀಡಿದ್ದಾರೆ. ಒಟ್ಟು ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಕಾಂಗ್ರೆಸ್ಸಿಗೆ ಭಾಜಪಕ್ಕಿಂತಲೂ ಹೆಚ್ಚು ಮತಗಳು ಬಿದ್ದಿವೆ. ಪ್ರಜಾಪ್ರಭುತ್ವದಲ್ಲಿ ಪ್ರಾತಿನಿಧ್ಯದ ನಿಯಮವು ಹೀಗಿರಬಾರದು. ''ಹೆಚ್ಚಿನ ಸಂಖ್ಯೆಯಲ್ಲಿ ಮತ ಚಲಾಯಿಸಿ'' ಅಥವಾ ''ಮತ ಚಲಾಯಿಸುವುದು ಎಲ್ಲರ ಕರ್ತವ್ಯ'' ಎಂದು ಘೋಷಿಸುವಾಗ ಪ್ರಾತಿನಿಧ್ಯದ ಸ್ವರೂಪ ಮತ್ತು ನಿಯಮಗಳನ್ನು ತಿಳಿಯುವುದು ಅವಶ್ಯಕ. ನಮ್ಮ ಇಂದಿನ ಪದ್ಧತಿಯು ''ಮೊದಲು ಗೆರೆ ದಾಟಿದವರು'' ವಿಜಯಿ ಎಂದು ಸಾರುತ್ತದೆ. ಸೋಲುವ ಸಾಧ್ಯತೆ ಇರುವ ಅಭ್ಯರ್ಥಿಗೆ ಮತ ನೀಡಿ ಪ್ರಯೋಜನವಿಲ್ಲವೆಂದು ಗೆಲ್ಲಬಹುದಾದವರಿಗೆ ಮತ ನೀಡುವ ಪ್ರವೃತ್ತಿ ಇರುವಾಗ ನಿಜವಾದ ಜನಪ್ರತಿನಿಧಿಯನ್ನು ಗುರುತಿಸುವುದು ಸಾಧ್ಯವಿಲ್ಲ. ಮತದಾರರ 'ಮತ' ಅಥವಾ ಅಭಿಪ್ರಾಯವು ಅವರು ನೀಡುವ 'ಮತ'ದಲ್ಲಿ ಪ್ರತಿಫಲಿತವಾಗುವುದಿಲ್ಲ. ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಮುಂತಾದ ವಿಚಾರಗಳು ಮತದಾರರ 'ಮತ'ದಲ್ಲಿ ವ್ಯಕ್ತವಾಗಬೇಕಾದ್ದು ಪ್ರಜಾಪ್ರಭುತ್ವದ ಮೊದಲ ಲಕ್ಷಣವಾಗಿರಬೇಕು. ಆದರೆ ಈಗ ಹಾಗಿಲ್ಲ. ಮತಗಳ ವರ್ಗಾವಣೆಯಾಗುವಂತಹ ಪದ್ಧತಿಯು ಇದಕ್ಕೆ ಪರ್ಯಾಯವೆಂದು ಹೇಳಲಾಗುತ್ತದೆ. ಆದರೆ ಅದೂ ಸರಿಯಲ್ಲ. ಏಕೆಂದರೆ, ಒಂದು ನಿರ್ದಿಷ್ಟ ಮತಕ್ಷೇತ್ರದ ಅಭ್ಯರ್ಥಿಗಳ ಪೈಕಿ ಆದ್ಯತೆಯನುಸಾರ ಮತ ಚಲಾಯಿಸುವುದು ಇಲ್ಲಿಯ ವಿಧಾನ. ಸ್ವಲ್ಪ ಕಟುವಾಗಿ ಹೇಳಲು ಅಡ್ಡಿಯಿಲ್ಲವೆಂದಾದರೆ, ಇದು ಹತ್ತು ಅಧಮರಲ್ಲಿ ಒಬ್ಬ ಉತ್ತಮನ ಆಯ್ಕೆಯಾಗುತ್ತದೆಯೇ ವಿನಾ ನಿಜವಾದ ''ಸೈದ್ಧಾಂತಿಕ ಅಭಿಪ್ರಾಯ''ದ ಅಭಿವ್ಯಕ್ತಿಯಾಗುವುದಿಲ್ಲ. ಯಾವ ಮರದಲ್ಲಿ ಹಣ್ಣಿರುವಂತೆ ಕಾಣುತ್ತದೋ ಆ ಮರಕ್ಕೆ ಜಿಗಿಯುವ ಕಮಂಗಿಯಂತೆ ಇಂದು ಕೆಲವು ಅಭ್ಯರ್ಥಿಗಳು ಪಕ್ಷಾಂತರ ಮಾಡುತ್ತಿರುತ್ತಾರೆ. ಹಾಗೆ ಮಾಡುವುದು ಮತಾಂತರವೂ ಹೌದು ಎನ್ನುವ ಕನಿಷ್ಠ ವಿವೇಚನೆಯೂ ಅವರಲ್ಲಿರುವುದಿಲ್ಲ. ಯಾವ ರಾಜಕೀಯ ಸಿದ್ಧಾಂತಕ್ಕೂ ಬದ್ಧವಾಗದೆ ಹಣ ಮತ್ತು ಅಧಿಕಾರಕ್ಕಾಗಿ ಬದ್ಧರಾಗಿರುವುದಷ್ಟೇ ಅವರ ಲಕ್ಷಣ. ನಿಜಾರ್ಥದಲ್ಲಿ ಅವರು ರಾಜಕಾರಣಿಗಳಲ್ಲ; ಬದಲಾಗಿ, ಅವರು ಕೇವಲ ಧನಕಾರಣಿಗಳು. ಇದನ್ನು ತಪ್ಪಿಸದೆಯೇ ಪ್ರಜಾಪ್ರಭುತ್ವವನ್ನು ಪೋಷಿಸುವುದು ಆಗದ ಕೆಲಸ.

ಯಾವುದೇ ಮತದಾರರು ಎಲ್ಲಿಯೇ ಮತ ಚಲಾಯಿಸಲಿ ಮತ್ತು ಯಾವ ಕ್ಷೇತ್ರದಲ್ಲಿ ಎಷ್ಟು ಹೆಚ್ಚು ಅಥವಾ ಕಡಿಮೆ ಮತಗಳು ಬಿದ್ದಿರಲಿ, ಅವಕ್ಕೆ ಅರ್ಥವಿರಬೇಕು ಹಾಗೂ ಬೆಲೆಯಿರಬೇಕು. ಆಗ ಮಾತ್ರ ಮತ ಚಲಾಯಿಸುವುದು ಕರ್ತವ್ಯವೆಂಬಂತೆ ಗಣನೆಗೆ ಬರಲು ಸಾಧ್ಯ. ''ಅಭಿಪ್ರಾಯಕ್ಕೆ ಮಾನ್ಯತೆ'' ಎಂಬುದು ಪ್ರಜಾಪ್ರಭುತ್ವದ ಮೊದಲ ಸೂತ್ರ. ಆದರೆ ನಮ್ಮ ಪದ್ಧತಿಯಲ್ಲಿ ಅದಕ್ಕೆ ಮನ್ನಣೆ ಇಲ್ಲ. ಅದು ಸಾಧ್ಯವಾಗುವುದು ಪ್ರಮಾಣಕ್ಕೆ ತಕ್ಕಂತೆ ಪ್ರಾತಿನಿಧ್ಯ ನೀಡುವ ಪದ್ಧತಿಯಲ್ಲಿ ಮಾತ್ರ. ಅಂದರೆ, ಇಡೀ ರಾಜ್ಯದಲ್ಲಿ ಅಥವಾ ರಾಷ್ಟ್ರದಲ್ಲಿ ಚಲಾವಣೆಯಾದ ಮತಗಳಲ್ಲಿ ಪ್ರಮಾಣಕ್ಕೆ ತಕ್ಕಂತೆ ಪಕ್ಷಗಳಿಗೆ ಪ್ರಾತಿನಿಧ್ಯವಿರಬೇಕು. ಇಲ್ಲಿ ಪಕ್ಷ ಮತ್ತು ಸಿದ್ಧಾಂತಕ್ಕೆ ಮತ ನೀಡಲಾಗುತ್ತದೆ, ಅಭ್ಯರ್ಥಿಗಲ್ಲ. ಆದ್ದರಿಂದ ಪಕ್ಷಾಂತರದ ಪಿಡುಗಿರುವುದಿಲ್ಲ. ಇದರಲ್ಲಿರುವ ಒಂದೇ ತೊಡಕೆಂದರೆ ''ಸ್ವತಂತ್ರ'' ಅಭ್ಯರ್ಥಿಗಳಿಗೆ ಅವಕಾಶವಿಲ್ಲದಿರುವುದು. ''ಪಕ್ಷರಹಿತ ಪ್ರಜಾಪ್ರಭುತ್ವ''ಕ್ಕೆ ಇಲ್ಲಿ ಸ್ಥಾನವಿರುವುದಿಲ್ಲ. ''ಸ್ವತಂತ್ರ'' ಅಭ್ಯರ್ಥಿಗಳಿಲ್ಲದಿದ್ದರೆ ಅಂತಹ ಕೆಡುಕೇನೂ ಇಲ್ಲ. ಏಕೆಂದರೆ, ಬಹುಮತ ಸಾಬೀತುಪಡಿಸಲು ಅವರನ್ನು ಖರೀದಿ

ಮಾಡುವ ಪ್ರಮೇಯವಿರುವುದಿಲ್ಲ. ಹೊಸದಾಗಿ ಪ್ರಜಾಪ್ರಭುತ್ವ ಮಾರ್ಗವನ್ನು ಕಠಿಣವಾದ ಸಂದರ್ಭದಲ್ಲಿ ಕಂಡುಕೊಳ್ಳುತ್ತಿರುವ ನೇಪಾಳದಲ್ಲಿ ಪ್ರಮಾಣಾಧಾರಿತ ಪ್ರಾತಿನಿಧ್ಯವನ್ನು ಅಂಗೀಕರಿಸಲಾಗಿದೆ. ೧೯೫೨ರಿಂದಲೂ ಚುನಾವಣೆಗಳನ್ನು ನಡೆಸಿಕೊಳ್ಳುತ್ತಾ ಬಂದಿರುವ ಭಾರತದಲ್ಲಿ ಅದಿನ್ನೂ ಜಾರಿಗೆ ಬಂದಿಲ್ಲದಿರುವುದು ಒಂದು ವಿಪರ್ಯಾಸ. ಹೆಮ್ಮೆಯಿಂದ ಜನತೆಯ ನೈಜ ಪ್ರತಿನಿಧಿ ಎನಿಸಿಕೊಳ್ಳಬೇಕೆಂಬ ಹಂಬಲವು ನಮ್ಮ ಕೆಲವು ಪಕ್ಷಗಳ ರಾಜಕಾರಣಿಗಳಲ್ಲಿ ಇಲ್ಲದಿರುವುದು ಶೋಚನೀಯ. ಅದು ಹೀಗೇ ಉಳಿಯಕೂಡದು.

## ಸುವರ್ಣ ಕರ್ನಾಟಕ ಮಾಲಿಕೆ

ಕರ್ನಾಟಕ ಏಕೀಕರಣದ ಐವತ್ತನೇ ವರ್ಷದ ಸಂಭ್ರಮದ ಅಂಗವಾಗಿ ರಾಜ್ಯ ಸರ್ಕಾರವು ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಒಂದು ಮಾಲಿಕೆಯಾಗಿ ಪ್ರಕಟಿಸಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಹಿಸಿಕೊಂಡಿದ್ದ ಈ ಯೋಜನೆಗೆ ಅಕಾಡೆಮಿಗಳು ಸಹಕಾರ ನೀಡಿವೆ. ಯಾವ ಪುಸ್ತಕಗಳನ್ನು ಪ್ರಕಟಿಸಬೇಕೆಂದು ಸಲಹೆ ನೀಡಲು ತಜ್ಞರ ಒಂದು ಸಭೆ ನಡೆಸಲಾಯಿತು. ಅಂತಿಮ ಆಯ್ಕೆಯನ್ನು ಯಾವ ಸಮಿತಿಯು ಮಾಡಿತೆಂಬುದು ಸ್ಪಷ್ಟವಾಗಿಲ್ಲ. ಪುಸ್ತಕಗಳು ಹೊರಬಂದು ಕೆಲವು ತಿಂಗಳುಗಳು ಕಳೆದಿವೆಯಾದರೂ ಪ್ರಕಟಣೆಯ ಉದ್ದೇಶವು ಈಡೇರಿದೆಯೇ ಎಂಬುದರ ಚರ್ಚೆ ನಡೆದಿಲ್ಲ. ಕನ್ನಡವು ಸರ್ವಾಂಗೀಣವಾಗಿ ಬೆಳೆದು ಎಲ್ಲ ಕ್ಷೇತ್ರಗಳಲ್ಲೂ ಬಳಕೆಯಾಗಬೇಕೆಂದು ಬಯಸುವವರು ಇದನ್ನು ಮಾಡುವ ಅಗತ್ಯವಿದೆ.

ಭಾಷೆಯ ಬಳಕೆ ಮತ್ತು ಬೆಳವಣಿಗೆಯೆಂದರೆ ಕೇವಲ ಪ್ರಾಚೀನ ಮತ್ತು ಆಧುನಿಕ ಸಾಹಿತ್ಯದ ಸೃಷ್ಟಿ ಮತ್ತು ಓದು ಅಲ್ಲ. ಒಂದಷ್ಟು ಕವನ-ಕಾದಂಬರಿ-ಕತೆ-ನಾಟಕಗಳನ್ನು ಪೋಷಿಸಿದರೆ ಭಾಷೆಯು ವಿಶಾಲವಾಗಿ ಹಬ್ಬುತ್ತದೆಂದು ಭಾವಿಸುವುದು ಸರಿಯಲ್ಲ. ಸಾಹಿತಿಗಳು ಸರ್ವಜ್ಞರಲ್ಲ ಮತ್ತು ಜೀವನದ ಎಲ್ಲ ಸಂಗತಿಗಳ ಬಗೆಗೂ ಅವರ ಕಾಣ್ಕೆಯೇ ಸರ್ವಸ್ವವಲ್ಲ. ಸಾಹಿತ್ಯವು ಭಾಷೆಯ ಒಂದು ಭಾಗ, ಅಷ್ಟೇ. ಆಡಳಿತ, ಸಂವಹನ, ವಿಜ್ಞಾನ, ಸಮಾಜ ವಿಜ್ಞಾನ, ತಂತ್ರಜ್ಞಾನ ಹೀಗೆ ಹತ್ತಾರು ಬೇರೆ ವಿಷಯಗಳು ಸಹ ಭಾಷೆಯ ವ್ಯಾಪ್ತಿಗೆ ಸೇರಿದಾಗ ಮಾತ್ರವೇ ಭಾಷೆಯು ಸರ್ವಾಂಗೀಣವಾಗಿ ಬೆಳೆಯಬಲ್ಲದು. ಸ್ವತಃ ಸಾಹಿತಿಗಳು ಕೂಡ ಇದನ್ನು ಪೂರ್ಣವಾಗಿ ಗ್ರಹಿಸಿಲ್ಲದಿರುವುದು ನಮ್ಮ ರಾಜ್ಯದ ನಿರಾಶಾದಾಯಕ ಸನ್ನಿವೇಶ. ಯಾವುದಾದರೂ ಪ್ರಕಟಣೆಯ ಯೋಜನೆ ಎಂದಾಕ್ಷಣ ಕೆಲವು ಸಾಹಿತಿಗಳಿಗೆ ತೋರುವುದು ತಮ್ಮ ಮತ್ತು ತಮ್ಮಂಥವರ ಕೆಲವು ಸಾಹಿತ್ಯ ಕೃತಿಗಳನ್ನು ತೂರಿಸಿಬಿಡುವುದಷ್ಟೇ ಆಗಿಬಿಟ್ಟಿದೆ. ಆಮೇಲೆ ಅವರು ಕನ್ನಡವು ಅತಿಶಯವಾಗಿ ಬೆಳೆಯಬೇಕೆಂಬ ಆಶಯವನ್ನು ಆಗಾಗ್ಗೆ ಪ್ರಕಟಿಸುವುದರಲ್ಲಿ ಮಗ್ನರಾಗಿಬಿಡುತ್ತಾರೆ.

ಸುವರ್ಣ ಕರ್ನಾಟಕದ 'ಸುವರ್ಣಾವಕಾಶ'ವನ್ನು ಸರಿಯಾಗಿ ಮತ್ತು ಅರ್ಥವತ್ತಾಗಿ ಬಳಸಿಕೊಂಡಿದ್ದರೆ ಈಗ ಹೊರಬಂದಿರುವ ಮಾಲೆಯಲ್ಲಿ ವಿವಿಧ ಪ್ರಕಾರಗಳ ಸುಮಾರು ಮೂವತ್ತು ಸಾಹಿತ್ಯ ಕೃತಿಗಳಿಗಿಂತಲೂ ಹೆಚ್ಚು ಸೇರ್ಪಡೆ ಹೊಂದುತ್ತಿರಲಿಲ್ಲ. ನಮ್ಮ ರಾಜ್ಯದ ಭೂಮಿಕೆ ಮತ್ತು ಬೆಳವಣಿಗೆಗಳನ್ನು ಪರಿಚಯಿಸುವ ಕೆಲಸವನ್ನು ಉಳಿದ ಎಪ್ಪತ್ತು ಪುಸ್ತಕಗಳು ಮಾಡಬಹುದಿತ್ತು. ಜಾಗತಿಕ ಜ್ಞಾನದ ಕೆಲವು ಪ್ರಮುಖ ಸಮಕಾಲೀನ ಅಂಶಗಳನ್ನು ಜನರಿಗೆ ಮುಟ್ಟಿಸುವ ಐದಾರು ಪುಸ್ತಕಗಳಾದರೂ ಇರಬೇಕಾಗಿತ್ತು. ಈ ಮಾಲಿಕೆಯಲ್ಲಿ ಕರ್ನಾಟಕದ ಇತಿಹಾಸ ಮತ್ತು ಏಕೀಕರಣದ ಇತಿಹಾಸದ ಒಂದು ಪುಸ್ತಕವೂ ಇಲ್ಲದ್ದು ಒಂದು ದೊಡ್ಡ ಕೊರತೆ. ರಾಜ್ಯದ ಕೃಷಿ, ಉದ್ಯಮ, ವ್ಯಾಪಾರ, ಶಿಕ್ಷಣ, ರಾಜಕೀಯ, ಕಲೆ, ಮುಂತಾದುವನ್ನು ಪರಿಚಯಿಸುವ ಪುಸ್ತಕಗಳ ಹೆಸರೇ ಇಲ್ಲ. ಹೋಗಲಿ, ಕರ್ನಾಟಕದ ಭೂಗೋಳದ ಬಗೆಗಾದರೂ ಒಂದು ಖಚಿತ ಮಾಹಿತಿ ನೀಡುವ ಪುಸ್ತಕವಿದೆಯೇ ಎಂದರೆ ಅದೂ ಇಲ್ಲ. ವಿಜ್ಞಾನ-ತಂತ್ರಜ್ಞಾನ-ಸಮಾಜ ವಿಜ್ಞಾನದ ಕೆಲವಾದರೂ ಪ್ರಾತಿನಿಧಿಕ ಗ್ರಂಥಗಳಿಲ್ಲದ ಮಾಲಿಕೆ ನಮ್ಮದಾಗಿದೆ. ಭಾಷೆಯು ಉತ್ಕೃಷ್ಟವಾದ ಮಟ್ಟವನ್ನು ಮುಟ್ಟಬೇಕಾದರೆ ಅದರಲ್ಲಿ ಜ್ಞಾನಸಾಗರದ ಎಲ್ಲ ಪ್ರಕಾರಗಳಲ್ಲೂ ವ್ಯವಹಾರ ಸಾಧ್ಯವಾಗುವಂತಿರಬೇಕು. ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ದೊರಕಲಿ, ಸಂತೋಷ. ಆದರೆ ಅದಕ್ಕಿಂತಲೂ ಮುಖ್ಯವಾಗಿ ಕನ್ನಡದಲ್ಲಿ ಆಧುನಿಕ ಜ್ಞಾನದ ಎಲ್ಲ ಪ್ರಕಾರಗಳ ಗ್ರಂಥಗಳೂ ಬೇಕು, ಅವುಗಳ ಬಗ್ಗೆ ಉನ್ನತ ಮಟ್ಟದ ವ್ಯವಹಾರ ಸಾಧ್ಯವಾಗಬೇಕು. ಆಗಷ್ಟೇ ನಮ್ಮ ಭಾಷೆಯು ನಿಜಾರ್ಥದಲ್ಲಿ ಆಡಳಿತ ಭಾಷೆಯಾಗುತ್ತದೆ, ಶಿಕ್ಷಣ ಮಾಧ್ಯಮವಾಗುತ್ತದೆ. ಆ ದಿಕ್ಕಿನಲ್ಲಿ ಹೆಜ್ಜೆಹಾಕಲು ಸುವರ್ಣ ಕರ್ನಾಟಕದ ಸಂಭ್ರಮವು ನಮಗೆ ಪ್ರೇರಣೆ ನೀಡಬೇಕಾಗಿತ್ತು.

ಈ ದೃಷ್ಟಿಯಿಂದ ಮಾಲಿಕೆಯು ಸೋತಿದೆ. ಅಲ್ಲಿ ಸೇರ್ಪಡೆಗೊಂಡಿರುವ ಪುಸ್ತಕಗಳ ಮೌಲ್ಯದ ಬಗ್ಗೆ ಇದು ಟೀಕೆಯಲ್ಲ; ಆ ಪ್ರಶ್ನೆಯನ್ನಿಲ್ಲಿ ಪ್ರಸ್ತಾಪಿಸುತ್ತಿಲ್ಲ. ಕೊರತೆಯನ್ನು ತುಂಬಿಕೊಳ್ಳಬೇಕೆಂಬುದಷ್ಟೇ ಮುಖ್ಯ. ಒಂದು ಉದಾಹರಣೆ ನೋಡುವುದಾದರೆ, ''ವೈಚಾರಿಕ ಸಾಹಿತ್ಯ'' ಎಂಬ ಪುಸ್ತಕದಲ್ಲಿ ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆಯ ಬಗೆಗೆ ಒಂದು ಭಾಗವಿದೆ. ಅದರಲ್ಲಿ ಬೇರೆ ರಾಜ್ಯಗಳವರು ಇಂಗ್ಲಿಷ್‌ನಲ್ಲಿ ಬರೆದಿದ್ದ ಲೇಖನವೊಂದರ ಅನುವಾದವನ್ನು ಸೇರಿಸಿಕೊಳ್ಳಲಾಗಿದೆ. ಅದೇ ವಿಷಯವನ್ನು ಕುರಿತು ನಮ್ಮ ರಾಜ್ಯದ ಯಾವ ವಿದ್ವಾಂಸರೂ ನೇರವಾಗಿ ಕನ್ನಡದಲ್ಲೇ ಬರೆದಿರುವ ಲೇಖನವು ಲಭ್ಯವಿರಲಿಲ್ಲವೆ ? ಇಂತಹ ಪ್ರಮಾದಗಳಿಗೆ ಅವಕಾಶವಿರಬಾರದು. ಈಗಲೂ ಕಾಲ ಮಿಂಚಿಲ್ಲ. ನಮ್ಮ ರಾಜ್ಯದ ಇತಿಹಾಸ, ಭೂಗೋಳ, ಖನಿಜಗಳು, ಕೃಷಿ, ನದಿಗಳು, ಕಾಡು, ಬೆಟ್ಟ ಮುಂತಾದುವನ್ನು ಕುರಿತಂತೆ ಬೇರೊಂದು ಮಾಲಿಕೆಯನ್ನು ಆಯೋಜಿಸಿ ವಿಜ್ಞಾನ-ತಂತ್ರಜ್ಞಾನ-ಸಮಾಜ ವಿಜ್ಞಾನ ಮುಂತಾದ ಎಲ್ಲ ಶಿಸ್ತುಗಳೂ ಸಮಗ್ರವಾಗಿ ಪ್ರಾತಿನಿಧ್ಯ ಪಡೆಯುವಂತೆ ಮಾಡುವುದು ಸೂಕ್ತವಾಗಿರುತ್ತದೆ.

## ಪರಮಾಣು ಇಂಧನದ ರಾಜಕೀಯ

ನಮ್ಮ ರಾಷ್ಟ್ರವನ್ನು ಅಮೆರಿಕಾದ ಅಡಿಯಾಳಾಗಿಸಲು ಪ್ರಧಾನಿ ಮನಮೋಹನ ಸಿಂಗ್ ಯಾವುದಕ್ಕೂ ಹೇಸುವುದಿಲ್ಲವೆಂಬುದು ದಿನೇ ದಿನೇ ಹೆಚ್ಚು ಹೆಚ್ಚು ಖಚಿತವಾಗುತ್ತಿದೆ. ಪೆಟ್ರೋಲ್ ದರ ಹೆಚ್ಚುತ್ತಿರುವ ಸಂದರ್ಭದಲ್ಲಿ

೭ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ತಾನೆ ಅಭಿವೃದ್ಧಿ ಸಾಧ್ಯವಾಗುತ್ತದೆ.'' ಈಗಾಗಲೇ ನಮಗೆ ತಿಳಿದಿರುವಂತೆ ಈ ಕಮಲವು ವಿಶೇಷವಾದ್ದು. ಅದು ಜಲಜ, ಸರೋಜ, ವಾರಿಜ, ಅಂಬುಜ, ಯಾವುದೂ ಅಲ್ಲ. ಕೆಸರಿನ ಕಮಲವಿರಬಹುದೇ ಎಂಬುದನ್ನು ಈಗಲೇ ಹೇಳಬರುವುದಿಲ್ಲ. ಅದು ''ಗಣಿಜ'', ಅಂದರೆ ಗಣಿಯಲ್ಲಿ ಹುಟ್ಟಿ ನಳನಳಿಸುವಂಥದು. ಆ ಲಕ್ಷ್ಮಿಯು ಹಾವೇರಿಯಲ್ಲಿ ತಾಂಡವ ನೃತ್ಯ ಮಾಡಿ ತನ್ನ ಸ್ವಭಾವದ ಕಿಂಚಿತ್ ಪರಿಚಯ ಮಾಡಿಕೊಟ್ಟಿದ್ದಾಳೆ. ತಮ್ಮ ಪಕ್ಷಕ್ಕೆ ಮಸಿ ಬಳಿಯಲು ತಿಳಿಗೇಡಿಗಳು ಸಂಚು ಹೂಡಿದ್ದರಿಂದ ಹಾವೇರಿಯ ರೈತರಿಗೆ ಅಭಿವೃದ್ಧಿಯ ರುಚಿಯು ಸದ್ಯಕ್ಕೆ ಕಹಿಯಾಯಿತೆಂದು ಮುಖ್ಯಮಂತ್ರಿಗಳು ಹೇಳಿದ್ದಾರೆ. ಅದು ಕೇವಲ ಕಹಿಯಾಗಿರುತ್ತದೋ ವಿಷವಾಗುತ್ತದೋ ಕಾದು ನೋಡಬೇಕಾಗಿದೆ. ಏನೇ ಇರಲಿ, ಮಾನ್ಯ ಯಡಿಯೂರಪ್ಪನವರಿಗೆ ಶುಭಾರಂಭ ಆಗಲಿಲ್ಲ. ಎಷ್ಟು ಜಗದ್ಗುರುಗಳಿಗೆ ಅಡ್ಡಬಿದ್ದು ಏನು ಪ್ರಯೋಜನ! ಗೊಬ್ಬರದಂತಹ ಭೌತವಸ್ತುವು ದೇವಾನುದೇವರನ್ನೂ ಸ್ವಾಮಿಗಳನ್ನೂ ಮೀರಿ ನಿಲ್ಲುತ್ತದೆ.

* * *

''ಅನಾ ಕರೇನಿನಾ'' ಲಿಯೋ ಟಾಲ್‌ಸ್ಟಾಯ್‌ರ ಒಂದು ಪ್ರಮುಖ ಕಾದಂಬರಿ. ಅದರ ಮೊದಲ ವಾಕ್ಯ ಹೀಗಿದೆ: ''ಸುಖಸಂಸಾರಗಳು ಹೆಚ್ಚು ಕಡಿಮೆ ಸಮಾನ ಕಾರಣಗಳಿಂದಾಗಿ ಸುಖವಾಗಿರುತ್ತವೆ. ಆದರೆ ಅಸುಖೀ ಸಂಸಾರಗಳಿಗೆ ಪ್ರತ್ಯೇಕವಾದ ತಮ್ಮ ತಮ್ಮವೇ ಕಾರಣಗಳಿರುತ್ತವೆ.'' ಮನೆ - ಮಡದಿ - ಮಕ್ಕಳು - ಒಳ್ಳೆ ಉದ್ಯೋಗ - ಹಣ, ನೆಂಟರಿಷ್ಟರು ಇವೆಲ್ಲಾ ಸುಖಕ್ಕೆ ಸಾಧನಗಳು. ಅವೆಲ್ಲಾ ಇದ್ದೂ ಸುಖದ ಲೇಪವಿಲ್ಲದೆ ಬಾಳಬೇಕಾದ ಕುಟುಂಬಗಳು ಇರುತ್ತವೆ. ಅವುಗಳ ದುಃಖದ ಮೂಲ ಮತ್ತು ಸ್ವರೂಪ ಹೊರಕ್ಕೆ ಕಾಣುವುದಿಲ್ಲ. ಒಳಗೇ ಏನೋ ಕೊರಗು, ಹೊರಕ್ಕೆ ಅದಕ್ಕೆ ಬಣ್ಣ ಬಳಿದ ಸ್ವರೂಪ ಮಾತ್ರ ಗೋಚರ. ಯಾವ ಆಳವಾದ ಅಸಹನೀಯವಾದ ಕೊರಗು ಅವಸಾನಕ್ಕೆ ಕಾರಣವಾಗುತ್ತದೋ ಹೇಳಲಾಗದು. ಅವಸಾನದ ನಂತರವೇ ಅಂತಹ ಕೊರಗೊಂದು ಕಾಡುತ್ತಿತ್ತೆಂಬುದು ತಿಳಿಯುತ್ತದೆ. ಪ್ರಕೃತಿಯ ವಿಸ್ಮಯ ಅಸದಳವಾದ್ದು; ಅದನ್ನು ವಿವರಿಸಲು ದೇವರು, ಕರ್ಮ, ಹಣೆಬರಹ, ಪೂರ್ವಜನ್ಮ-ಪುನರ್ಜನ್ಮ, ಮಾಯೆ, ಮೋಕ್ಷ, ಎಲ್ಲಾ ಹುಟ್ಟಿಕೊಂಡಿವೆ. ಆದರೆ ಯಾವುದೂ ವಿಸ್ಮಯದ ಅಗಾಧತೆಯನ್ನು ಕಡಿಮೆಗೊಳಿಸಿಲ್ಲ ಮತ್ತು ಅಂತಿಮವಾದ ವಿವರಣೆ ನೀಡಿಲ್ಲ. ಮನುಷ್ಯರ ದೇಹ ಮತ್ತು ಮನಸ್ಸು ಕೂಡ ವಿಸ್ಮಯಗಳ ಆಗರ. ದೇಹಾರೋಗ್ಯವು ಕಾಣ ಕಾಣುತ್ತಿದ್ದಂತೆ ದೇಹರುಜಿನವಾಗಿಬಿಡುತ್ತದೆ. ಲವಲವಿಕೆ ಮತ್ತು ಸಾವಿನ ನಡುವಣ ಅಂತರ ಕ್ಷಣಮಾತ್ರದ್ದು. ಅಂತೆಯೇ, ಯಾವ ಮನಸ್ಸಿನಲ್ಲಿ ಎಂತಹ ತುಮುಲವಿದೆ, ಅದನ್ನು ಹೇಗೆ ಎದುರಿಸುತ್ತಿದೆ, ಅದರ ಪರಿಣಾಮವೇನಾಗಬಹುದು, ಇವೆಲ್ಲಾ ಅಗಮ್ಯ, ಅಚಿಂತ್ಯ. ಮನಸ್ಸಿನ ವ್ಯಾಪಾರವು ಪ್ರಕೃತಿ ವಿಸ್ಮಯಕ್ಕಿಂತಲೂ ಕಡಿಮೆಯೇನಲ್ಲ. ರಮ್ಯವೋ ದುರಂತವೋ ಆದ ನಾಟಕ ಮಾನಸಿಕ ರಂಗದಲ್ಲಿ ಸದಾ ನಡೆಯುತ್ತಿರುತ್ತದೆ. ನಾಟಕದ ಅಂತ್ಯ ಬಹುಶಃ ಆ ಪಾತ್ರದ ಊಹೆಗೆ ಕೂಡ ನಿಲುಕದ್ದು. ಕಲೆ-ಸಾಹಿತ್ಯ-ದರ್ಶನ ಇವುಗಳ ವಸ್ತು ಇದೇ ವಿಸ್ಮಯದ ಬಹುಮುಖೀ ಆಯಾಮಗಳು.

ಶ್ರೀಮತಿ ಪದ್ಮಪ್ರಿಯ ಅವರ ಕಳೆದೆರಡು ತಿಂಗಳ ಮನೋವ್ಯಾಪಾರವನ್ನು ತಿಳಿಯುವಂತಿದ್ದರೆ ಅವರಿಂದು ಜೀವಂತವಾಗಿರುತ್ತಿದ್ದರು. ಆಕಸ್ಮಿಕವಾಗಿ ಸಂಭವಿಸುವ ದುರಂತ ಒಂದು ತೆರನಾದ್ದು; ಉದಾಹರಣೆಗೆ, ಶ್ರೀ ಯಡಿಯೂರಪ್ಪನವರ ಪತ್ನಿ ನೀರು ಶೇಖರಣೆಯ ಕುಳಿಗೆ ಬಿದ್ದು ಸಾವನ್ನಪ್ಪಿದ್ದು. ಅದು ಆಕಸ್ಮಿಕವೋ ಪ್ರಜ್ಞಾಪೂರ್ವಕವಾದ ಆಯ್ಕೆಯೋ ಎಂಬುದು ಸದಾ ಕಾಲಕ್ಕೂ ನಿಗೂಢವಾಗಿಯೇ ಉಳಿಯುವಂಥದು. ಆದರೆ ಶ್ರೀಮತಿ ಪದ್ಮಪ್ರಿಯ ಅವರದ್ದು ಸ್ವಂತದ ನಿಚ್ಚಳ ಆಯ್ಕೆಯೇ ಆಗಿತ್ತೆಂದು ಬಿಂಬಿಸಲಾಗಿದೆ. ಬೇರೆ ಸಾಧ್ಯತೆಗಳೂ ಇರಬಹುದು. ಪತಿ ಶ್ರೀ ರಘುಪತಿ ಭಟ್ಟರಿಗೆ ಪ್ರಬಲ ಆಸರೆಯಾಗಿ ನಿಂತು, ಪಾದರಸದಂತೆ ಓಡಾಡಿ, ಹುಮ್ಮಸ್ಸಿನಿಂದ ಚುನಾವಣಾ ರಂಗದಲ್ಲಿ ತಮ್ಮ ಪ್ರಭೆಯನ್ನು ತೋರ್ಪಡಿಸಿ, ಇದ್ದಕ್ಕಿದ್ದಂತೆ ಇನ್ನಿಲ್ಲವಾಗುವುದು ಅತಿ ವಿಸ್ಮಯದ ಸಂಗತಿ, ಒಂದು ದೊಡ್ಡ ದುರಂತ. ನಮಗೆ ವಿಸ್ಮಯವಾಗಿ ಕಂಡರೂ ಸ್ವತಃ ಪದ್ಮಪ್ರಿಯ ಅವರಿಗೆ ಅದು ವಿಸ್ಮಯವಾಗಿರಲಿಕ್ಕಿಲ್ಲ. ಅವರಿಗೆ ಅದು ಕ್ಷಣಕ್ಷಣದ ಚಿತ್ತವ್ಯಾಕುಲತೆ ಆಗಿದ್ದಿರಬಹುದು. ಅವರನ್ನು ಯಾರಾದರೂ ಕೊಂದಿದ್ದರೆ ಆ ಕೊಲೆಗಾರರಿಗೂ ಅದು ವಿಸ್ಮಯದ ವಿಷಯವಲ್ಲ. ಅವರ ವಿಷಯಾಸಕ್ತ ಮನಸ್ಸು ಪದ್ಮಪ್ರಿಯ ಅವರನ್ನು ಇಲ್ಲವಾಗಿಸಿದ್ದಿರಬಹುದು. ಇದನ್ನೆಲ್ಲಾ 'ನಿಗೂಢ'ವೆಂದು ದಾರ್ಶನಿಕ ಮಟ್ಟದಲ್ಲಿ ವ್ಯಾಖ್ಯಾನಿಸುವುದು ಉಚಿತವೇ? ವಾಸ್ತವಿಕ ಪ್ರಪಂಚದ ಯಾವ ಸಂಬಂಧಗಳು ಮತ್ತು ಸಂದರ್ಭಗಳು ಇಂತಹ ಘೋರ ಪಾತಕದಲ್ಲಿ ಅಂತ್ಯಗೊಂಡವು? ಈ ಪ್ರಶ್ನೆಗಳು ನಮ್ಮ ಮುಂದಿವೆ. ಮಾನ್ಯ ಶ್ರೀ ವಿ. ಎಸ್. ಆಚಾರ್ಯ ಅವರು ರಾಜಿನಾಮೆ ನೀಡಿದರೆ ಪದ್ಮಪ್ರಿಯ ಮರುಜೀವ ಪಡೆಯುವುದಿಲ್ಲ ಮತ್ತು ಯಾವ ಆಚಾರ್ಯರೂ ಇಡೀ ರಾಜ್ಯದ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನ ಆಳ-ಅಗಲಗಳನ್ನು ಭೇದಿಸಲಾಗುವುದಿಲ್ಲ. ಆದರೆ ತನಿಖೆಗಳು ನಿಜವನ್ನು ಹೊರತರಬಹುದು. ಇಲ್ಲವೇ ಅದನ್ನು ಮುಚ್ಚಿಹಾಕಲು ಯತ್ನಿಸಿ ಯಶಸ್ಸು ಗಳಿಸಬಹುದು. ರಘುಪತಿ ಭಟ್ ಅವರು ಸತ್ಯವನ್ನು ತಿಳಿಯಲು ಹಾಗೂ ತಿಳಿಸಲು ಸಮರ್ಥರಾಗುವಂತೆ ವಿ. ಎಸ್. ಆಚಾರ್ಯರು ಮುತುವರ್ಜಿ ವಹಿಸಿ ತನಿಖೆಯನ್ನು ದಿಕ್ಕುತಪ್ಪದ ಹಾದಿಯಲ್ಲಿ ಮುನ್ನಡೆಸಬೇಕು.

* * *

''ಮಂತ್ಲಿ ರಿವ್ಯೂ'' ಎಂಬ ಮಾಸಪತ್ರಿಕೆಯೊಂದು ನ್ಯೂಯಾರ್ಕಿನಿಂದ ಪ್ರಕಟವಾಗುತ್ತಿದೆ. ಅದರ ಮೊದಲ ಸಂಚಿಕೆ ಹೊರಬಂದದ್ದು ಅರವತ್ತು ವರ್ಷಗಳ ಹಿಂದೆ. ಅದರಲ್ಲಿ ಸಮಾಜವಾದವು ಏಕೆ ಅನಿವಾರ್ಯವೆಂಬ ವಿಷಯವನ್ನು ಕುರಿತು ಆಲ್ಬರ್ಟ್ ಐನ್‌ಸ್ಟೈನ್ ಗಹನವಾದ ಚಿಂತನೆ ನಡೆಸಿದ್ದರು. ಈ ಪತ್ರಿಕೆಯ ಮಾರ್ಚ್ ೨೦೦೮ರ ಸಂಚಿಕೆಯಲ್ಲಿ ಸ್ಟೀಫನ್ ಗ್ಯಾಲಫರ್ ಎಂಬ ಒಬ್ಬ ತತ್ವಶಾಸ್ತ್ರದ ಪ್ರಬುದ್ಧ ಚಿಂತಕರು 'ಗ್ವಾಂಟನಾಮೋವನ್ನು ಮರೆತುಬಿಡಿ' ಎಂಬ ಪುಟ್ಟ ಲೇಖನ ಪ್ರಕಟಿಸಿದ್ದಾರೆ. ಅದರ ಸಾರವು ಕೇವಲ ಅಮೇರಿಕಾದ ಸಮಕಾಲೀನ ವಿದ್ಯಮಾನಗಳ ವಿಮರ್ಶೆಯಲ್ಲ. ಎಲ್ಲ ಕಾಲ-ದೇಶಗಳಿಗೂ ಅನ್ವಯವಾಗುವ ಒಂದು ಬೌದ್ಧಿಕ ಕ್ರಿಯೆಯ, ತನ್ನನ್ನು ತಾನು ಮೋಸಗೊಳಿಸಿಕೊಳ್ಳುವ ಆತ್ಮವಂಚನೆಯೆಂಬ ಜಾಣತನದ, ವ್ಯಾಖ್ಯಾನವಾಗಿದೆ. ಅನೀತಿಯನ್ನು ಅಥವಾ ಹಿಂಸೆಯನ್ನು ಹಾಗೆಂದು ಕಾಣದೆ, ಅದು ನಡೆಯುತ್ತಿಲ್ಲವೇನೋ ಎಂಬಂತೆ ನಟಿಸುವುದು ಮತ್ತು ಆ ನಟನೆಗೆ ಒಂದು ತರ್ಕ ಕಂಡುಕೊಳ್ಳುವುದು ಚರಿತ್ರೆಯಲ್ಲಿ ನಡೆಯುತ್ತಲೇ ಬಂದಿರುವ ವಿಚಾರ. ಅದಕ್ಕೆ ''ರಾಷ್ಟ್ರೀಯ ಭಾವನೆ'' ಎಂಬ ಮೆರುಗು ತೊಡಿಸಲು ಸಾಧ್ಯ. ಅಥವಾ, ಯಾವುದೋ ಧರ್ಮದ ರಕ್ಷಣೆಗಿರುವ ಸಾಧನವೆಂಬಂತೆ ಚಿತ್ರಿಸಿಕೊಂಡು ತೃಪ್ತಿ ಭಾವದಿಂದ ಭೀಕರತೆಯನ್ನು ಮನಸ್ಸಿನಿಂದ ಹೊರದಬ್ಬಬಹುದು. ಆಗ ಗ್ವಾಂಟನಾಮೋ, ಗುಜರಾತು, ಇಸ್ರೇಲ್ ನಡೆಸುವ ದೈತ್ಯಹಲ್ಲೆ, ವಿನಾಯಕ ಸೇನ್ ಜೈಲಿಗೆ ತಳ್ಳಲ್ಪಡುವುದು, ಶ್ರೀಲಂಕಾದಲ್ಲಿ ತಮಿಳು ಉಗ್ರರ ಕುಕೃತ್ಯ, ತಾಲಿಬಾನರ ಅಟ್ಟಹಾಸ, ಇರಾಕ್‌ನಲ್ಲಿ ಅಮೇರಿಕಾ ನಡೆಸುವ ಲೂಟಿ-ನರಮೇಧ, ಹೀಗೆ ಯಾವುದಕ್ಕೆ ಬೇಕಾದರೂ ಮೋಹಕ ಬಣ್ಣ ಬಳಿದು ಮನಸ್ಸನ್ನು ಚುಚ್ಚುವ ವಸ್ತುಸ್ಥಿತಿಯೆಂಬ ಮುಳ್ಳನ್ನು ಹೂವಾಗಿಸಿಕೊಳ್ಳಬಹುದು. ಜವಾಬ್ದಾರಿಯಿಂದ ನುಣುಚಿಕೊಳ್ಳಬೇಕು, ಆದರೆ ಮನಸ್ಸಿಗೆ ಅದು ಆಘಾತ ಉಂಟುಮಾಡಬಾರದು, ನೈತಿಕ ಪ್ರಜ್ಞೆಗೆ ಮುಕ್ಕಾಗಬಾರದು: ಅದಕ್ಕಾಗಿ ವಾಸ್ತವವನ್ನು 'ವಿಸ್ಮೃತಿ'ಯ ವ್ಯಾಪ್ತಿಗೆ ಒಳಪಡಿಸುವುದು ಅಥವಾ ''ವ್ಯವಸ್ಥೆ'' ಎಂಬ ದೊಡ್ಡ ನಾಮಫಲಕದಡಿ ಕೂಡಿಸಿ, ಅನುಕೂಲಕ್ಕೆ ತಕ್ಕಂತೆ ಅರ್ಥೈಸಿ, ಮನಸ್ಸಿಗೆ ವ್ಯಗ್ರತೆ ಉಂಟುಮಾಡಕೊಳ್ಳದಿರುವುದು ಸಾಧನಗಳಾಗುತ್ತವೆ.

ಗ್ಯಾಲಫರ್ ಕೊಡುವ ಹಲವು ಉದಾಹರಣೆಗಳಲ್ಲಿ ಒಂದು ಹೀಗಿದೆ: ಸೆಪ್ಟೆಂಬರ್ ೧೧ರ ಸಂಚಿನ ಹಿಂದಿನ ವ್ಯಕ್ತಿಯೆಂದು ಮಾರ್ಚ್ ೨೦೦೩ರಲ್ಲಿ ಪಾಕಿಸ್ತಾನದಿಂದ ಖಲೀದ್ ಶೇಖ್ ಮೊಹಮ್ಮದ್ ಎಂಬುವವನನ್ನು ಅಮೇರಿಕಾ ಅಪಹರಣ ಮಾಡಿತು. ಆತನ ಚಲನವಲನಗಳ ಮಾಹಿತಿ ದೊರೆತದ್ದು ಆರು ಮತ್ತು ಎಂಟು ವಯಸ್ಸಿನ ಅವನ ಮಕ್ಕಳಿಂದ. ನಾಲ್ಕು ತಿಂಗಳು ಅವರನ್ನು ಸೆರೆಯಲ್ಲಿಡಲಾಗಿತ್ತು, ಅನ್ನ-ನೀರು ಕೊಡದೆ ಕೊಳೆಸಲಾಗಿತ್ತು, ಮಾನಸಿಕವಾಗಿ ಹಿಂಸಿಸಲಾಗಿತ್ತು. ಆಮೇಲೆ ಅವರೇನಾದರೋ ಇಂದಿಗೂ ತಿಳಿದಿಲ್ಲ. ಅಮೇರಿಕಾ ಸರ್ಕಾರಕ್ಕೆ ತಿಳಿದಿರುತ್ತದೆ, ಆದರೆ ಜನ ಆ ಪ್ರಶ್ನೆಯನ್ನು ಮರೆತಾಗಿದೆ. ಅಮೇರಿಕಾ ಯಾವಾವುದೋ ದೇಶಗಳಿಂದ ಹೀಗೆ ನೂರಾರು ಮಕ್ಕಳನ್ನು ಅಪಹರಿಸಿ, ಗೂಢವಾದ ಕಡೆಗಳಲ್ಲಿರಿಸಿ, ಕಡೆಗೆ ಅವರನ್ನು ಮಂಗಮಾಯ ಮಾಡಿಬಿಡುತ್ತಿದೆ. ಅಂತೆಯೇ ಯುವಕರು, ಮಹಿಳೆಯರು ಮತ್ತು ಮುದುಕರು ಸಹ ಇದೇ ಗಾಳಕ್ಕೆ ಬೀಳುತ್ತಾರೆ. ಈಗ ಗ್ವಾಂಟನಾಮೋವನ್ನೇ ನೋಡಿ: ಅದು ಕಾನೂನುಬಾಹಿರವಾದ ಕಾರಾಗೃಹ. ತನ್ನದಲ್ಲದ ದೇಶದಲ್ಲಿ ಅಮೇರಿಕಾ ಅದನ್ನು ಸ್ಥಾಪಿಸಿಕೊಂಡಿದೆ. ಅದು ಇಲ್ಲವೇ ಇಲ್ಲವೇನೋ ಎಂಬ ಪ್ರಜ್ಞೆಯನ್ನು ಪೋಷಿಸಲು ಅಮೇರಿಕಾದ ತಂತ್ರವಿದೆ, ಮಾಧ್ಯಮಗಳಿವೆ, ಪ್ರಚಾರ ವೈಖರಿ ಇದೆ. ಒಬ್ಬ ಸೇವಕನಿದ್ದಾನೆಂದುಕೊಳ್ಳಿ. ಅವನ ಪ್ರಜ್ಞೆಯಲ್ಲಿ ತಾನು ಮಾನವಸಹಜ ಸ್ವಾತಂತ್ರ್ಯಕ್ಕೆ ಹಕ್ಕುದಾರನೆಂಬ ಭಾವನೆಯೇ ಬರದಿದ್ದಲ್ಲಿ ಅವನು ಹೇಗಿರುತ್ತಾನೆ? ಅಂದರೆ, ಸುತ್ತಣ ಪರಿಸ್ಥಿತಿಯು ನಮ್ಮನ್ನು ನಿಯಂತ್ರಿಸಿದೆಯೆಂದು ಭಾವಿಸಿ ''ನನ್ನ ಸ್ವಾತಂತ್ರ್ಯವೆಂಬುದೇ ಸುಳ್ಳು'' ಎಂಬ ರೀತಿಯಲ್ಲಿ ವ್ಯವಹರಿಸುವುದು ಬಹಳವಾಗಿ ಕಾಣಬರುತ್ತದೆ. ಒಂದು ಇಡೀ ಸಮಾಜವು ಯಾವ ಸ್ಥಿತಿಯನ್ನು ಮುಟ್ಟಬಹುದೆಂದರೆ ಅದು ತನ್ನನ್ನು ತಾನು ನಂಬಿಸಿಕೊಂಡುಬಿಡುತ್ತದೆ, ''ಸಾರ್ವಜನಿಕವಾಗಿ ನೆನೆಯಬಹುದಾದ್ದು ಮತ್ತು ಸ್ವಂತದ್ದೆಂದು ಬಗೆಯಬಹುದಾದ್ದು ಯಾವುದು ಮತ್ತು ಯಾವುದಲ್ಲ'', ಎಂಬುದರ ಬಗ್ಗೆ. ಇದು ಸ್ವಯಂಘೋಷಿತ 'ಮರೆವು'.

ದೌರ್ಜನ್ಯಕ್ಕೊಳಗಾದವನನ್ನು ಹಾಗೆಂದು ಗುರುತಿಸದಿರುವಂತೆ ಮನಸ್ಸನ್ನು ಪ್ರೇರೇಪಿಸಿದರೆ ಆಗ ಯಾವುದು ಸರಿ, ಯಾವುದು ತಪ್ಪು; ಯಾವುದು ನೈತಿಕತೆ, ಯಾವುದು ಅನೈತಿಕತೆ? (ಅಸ್ಪೃಶ್ಯತೆಯ ಹೀನ ಆಚರಣೆಗೆ ಇದನ್ನು ಅನ್ವಯಿಸಿ ನೋಡಬಹುದು).

ಪಾಂಡಿತ್ಯವನ್ನೆಲ್ಲಾ ಈ ರೀತಿಯಲ್ಲಿ ಮನಸ್ಸನ್ನು ನಿಯಂತ್ರಿಸಲು ಬಳಸಿಕೊಳ್ಳುವುದು ಸಾಧ್ಯ ಮತ್ತು ಅದನ್ನು ನಮ್ಮ ನಡುವೆ ಮಾಡಲಾಗುತ್ತಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯೆಂದು ಹೆಸರು ಕೊಟ್ಟು ಕೂಡ ಈ ರೀತಿಯ ಅಧ್ವಾನವನ್ನು ಪೋಷಿಸಬಹುದು. ಹಾಗೂ ತೊಡಕಿದ್ದರೆ, ಇನ್ನೂ ಪ್ರಬಲವಾದ ಅಸ್ತ್ರವಿದೆ : ಪ್ರಜೆಯ ಮುಂದೆ ಆಯ್ಕೆಯ ಸಂದಿಗ್ಧತೆಯನ್ನು ನಿರ್ಮಿಸಿ ಶ್ರೇಷ್ಠ ಆಯ್ಕೆಯ ಅವಶ್ಯಕತೆಯನ್ನು ತಿಳಿಯಹೇಳುವುದು. ''ಕುಟುಂಬದ ಗೌರವ'', ''ಜಾತಿಗೆ ಕಳಂಕ'', ''ರಾಷ್ಟ್ರಕ್ಕಾಗಿ ಏನನ್ನಾದರೂ ಒಪ್ಪಲೇಬೇಕಾದ್ದು'' ಮುಂತಾಗಿ ಮರೆವಿಗೆ ತಾರ್ಕಿಕ ತಳಹದಿ ರಚಿಸಿಕೊಡುವುದು ಆ ವಿಧಾನ. ''ನಮ್ಮ ಧರ್ಮದ ಚ್ಯುತಿ ಹತ್ತಿರಕ್ಕೆ ಬರುತ್ತಿದೆ'' ಎಂದು ಗಾಬರಿ ಹುಟ್ಟಿಸಿ ಏನೆಲ್ಲಾ ಮಾಡಬಹುದು ! ಇವೆಲ್ಲಾ ಅಪರಾಧ, ಹತ್ಯೆ, ಹಿಂಸೆ, ಅವಕೃಪೆ, ಅಸಮಾನತೆ, ಆಕ್ರಮಣ, ಮುಂತಾದುವನ್ನು ಅಂಗೀಕಾರಾರ್ಹವಾಗಿಸಲು ಆಯುಧಗಳಾಗಲು ಸಾಧ್ಯ. ಆಗ ಹೊಸ ಅಕ್ರಮ-ಅನ್ಯಾಯಗಳನ್ನು ''ದಿನನಿತ್ಯದ ಸಹಜ ಕ್ರಿಯೆಗಳು'' ಎಂದು ತಳ್ಳಿಹಾಕುವ ಮನೋಭಾವ ಮೂಡುತ್ತದೆ; ಹಿಂಸೆ-ಹತ್ಯೆಗಳು ಸರ್ವೇಸಾಮಾನ್ಯವಾಗಿಬಿಟ್ಟು ಅವುಗಳ ಹಿಂದಿನ ಕ್ರೌರ್ಯ ಮನಸ್ಸಿಗೆ ಬರುವುದಿಲ್ಲ; ಎಷ್ಟು ಮಾದಕ ದ್ರವ್ಯ ಸೇವಿಸಿದರೂ 'ಯಥಾಪ್ರಕಾರ' ಇರುವಂತಿರುವ ವ್ಯಕ್ತಿಗಳಂತೆ ದೌರ್ಜನ್ಯದ ಬಗ್ಗೆ ಸಹನೆ ಹುಟ್ಟಿಕೊಳ್ಳುತ್ತದೆ; ಮುಂದುವರಿದು, ಆ ಕ್ರಿಯೆಗಳಲ್ಲಿ ಸ್ವತಃ ಭಾಗಿಯಾಗುವ ಹಂತವನ್ನು ಮುಟ್ಟಿ, ಕಡೆಗೆ ನಡೆದದ್ದನ್ನೆಲ್ಲಾ ಮುಚ್ಚಿಹಾಕುವ ಕುತಂತ್ರದ ಜಾಲಕ್ಕೆ ಮಾರುಹೋಗಿಬಿಡುವಂತಾಗುತ್ತದೆ.

– ಗ್ಯಾಲಘರ್ ಹೇಳಿರುವ ಈ ಮಾತುಗಳಲ್ಲಿ 'ಹೊಸತನ' ಏನೇನೂ ಕಾಣುವುದಿಲ್ಲವೆಂದು ವಾದಿಸಲು ಮುಂದಾದರೆ ಅದರಲ್ಲಿ ವಿಶೇಷವೇನೂ ಇಲ್ಲ. ಹೇಳಿರುವುದೆಲ್ಲಾ ಹಳೆಯದೇ, ಆದರೆ ಮಾಡಬೇಕಾದ್ದು ಮಾತ್ರ ಹೊಸತಾದುದನ್ನು. ಇಂದಿನ ನಮ್ಮ ಸಂದರ್ಭದಲ್ಲಿ ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ವಲಯಗಳಲ್ಲಿ ಎಷ್ಟೆಲ್ಲಾ ವಾಸ್ತವ ಸಂಗತಿಗಳಿವೆ, ಅವನ್ನೆಲ್ಲಾ ಎಷ್ಟು ಬಾರಿ ಗಾಢವಾಗಿ ಅವಲೋಕಿಸಿದ್ದೇವೆ ಮತ್ತು ಕ್ರಮೇಣ ಮರೆತು ನಿರಾಳವಾಗಿದ್ದೇವೆ ಎಂಬುದರ ಅರಿವು ನಮ್ಮ ವೈಚಾರಿಕ ಆಯುಧವಾಗಬೇಕು. ಆಗ ನಿಷ್ಕ್ರಿಯತೆ ಮತ್ತು ಬೇಜವಾಬ್ದಾರಿತನಗಳಿಂದ ಹೊರಬಂದು, ಸಾರ್ವಜನಿಕವಾಗಿ ಸಕ್ರಿಯ ಶಕ್ತಿಶಾಲಿಗಳಾಗಿ ಹೊರಹೊಮ್ಮುವ ಅಪೂರ್ವ ಅವಕಾಶವಿರುತ್ತದೆ.

---

*ಸಂಪಾದಕೀಯ (೫ನೇ ಪುಟದಿಂದ)*

ಪರಮಾಣು ಇಂಧನದ ಅಗತ್ಯವನ್ನು ಒತ್ತಿ ಹೇಳುವುದಕ್ಕೆ ಅಮೆರಿಕಾದ ವಿದೇಶಾಂಗ ಸಚಿವೆ ಕೋಂಡಲಿಸ್ಸಾ ರೈಸ್ ಮೂಗು ತೂರಿಸುತ್ತಿರುವುದು ಇದಕ್ಕೊಂದು ನಿದರ್ಶನ. ಪರಮಾಣು ಇಂಧನಕ್ಕಾಗಿ ಅಮೆರಿಕಾಕ್ಕೆ ಶರಣಾಗದಿದ್ದರೆ ಭಾರತದ ಭವಿಷ್ಯ ಕರಾಳವಾಗಿರುತ್ತದೆಂದು ಅನಿಲ್ ಕಾಕೋದ್ಕರ್, ಎಂ. ಆರ್. ಶ್ರೀನಿವಾಸನ್, ಎ. ಕೆ. ಆಂಟೋನಿ, ಸೋನಿಯಾ ಗಾಂಧಿ, ಆರ್. ಚಿದಂಬರಂ – ಹೀಗೆ ಎಲ್ಲರೂ ಕೋಂಡಲಿಸ್ಸಾ ತಾಳಕ್ಕೆ ಕುಣಿಯುವವರೇ ಆಗಿದ್ದಾರೆ. ಒಂದು ರಾಜಕೀಯ ಪಕ್ಷವಾಗಿ ಕಾಂಗ್ರೆಸ್ ಈ ಬಗ್ಗೆ ಆಂತರಿಕವಾಗಿ ಗಂಭೀರ ಚರ್ಚೆ ಮಾಡಿದ್ದೇ ಇಲ್ಲ. ಮೇಲಿನ ಮನಮೋಹನ ಸಿಂಗ್ ತೀರ್ಮಾನವು ಇಡೀ ಪಕ್ಷದ ನೀತಿಯಾಗಿಬಿಡುವುದು ನಾಚಿಕೆಗೇಡಿನ ವಿಷಯ. ಇಷ್ಟಕ್ಕೂ ಪರಮಾಣು ಸ್ಥಾವರಗಳಿಂದ ಉತ್ಪನ್ನವಾಗುವ ವಿದ್ಯುಚ್ಛಕ್ತಿಯು ದೇಶದ ಒಟ್ಟು ಉತ್ಪಾದನೆಯಲ್ಲಿ ಶೇಕಡ ಏಳರಷ್ಟು ಮಾತ್ರವಿರುತ್ತದೆ. ಅದೂ ಆಕ್ಷೇಪಾರ್ಹವಾದ ಇಂದಿನ ಒಪ್ಪಂದವು ಜಾರಿಗೆ ಬಂದಾಗ. ಅದು ಪೆಟ್ರೋಲಿಯಂ ಪದಾರ್ಥಗಳ ಬೆಲೆಯನ್ನು ಹೇಗೆ ಕಡಿಮೆಗೊಳಿಸುತ್ತದೆಂದು ಯಾರೂ ವಿವರಿಸಿಲ್ಲ, ವಿವರಿಸಲು ಸಾಧ್ಯವೂ ಇಲ್ಲ. ಏಕೆಂದರೆ, ಅವೆರಡಕ್ಕೂ ಅಂತಹ ನಿಕಟವಾದ ಸಂಬಂಧವೇನೂ ಇಲ್ಲ. ಕಾಂಗ್ರೆಸ್ ಪಕ್ಷದ ತರಾತುರಿ ಎಷ್ಟಿದೆಯೆಂದರೆ ಮನಮೋಹನ ಸಿಂಗರಿಗೆ ಎಡಪಕ್ಷಗಳ ಬಗ್ಗೆ ತೀರಾ ಅಸಹನೆಯುಂಟಾಗುವ ಮಟ್ಟಿಗೆ. ಸರ್ಕಾರದ ಮೂರ್ಖ ತೀರ್ಮಾನಗಳನ್ನು, ದೇಶ ವಿರೋಧಿ ನೀತಿಗಳನ್ನು, ಪ್ರಶ್ನಿಸುವುದು ಅಪರಾಧವೆಂಬಂತೆ ಅವರು ಕೋಪಗೊಳ್ಳುತ್ತಿದ್ದಾರೆ. ಎಡಪಕ್ಷಗಳು ಈ ಬಗ್ಗೆ ಎಚ್ಚರ ವಹಿಸಬೇಕಾಗಿದೆ. ಪಾರ್ಲಿಮೆಂಟಿಗೆ ಚುನಾವಣೆಯು ಹತ್ತಿರಕ್ಕೆ ಬಂದಾಗ ಎಡಪಕ್ಷಗಳನ್ನು ಕಡೆಗಣಿಸಿ ಮನಮೋಹನ ಸಿಂಗ್ ಅಮೆರಿಕಾದೊಡನೆ ಒಪ್ಪಂದಕ್ಕೆ ಪೂರ್ಣ ಸಮ್ಮತಿ ನೀಡಿ ಅಂಕಿತ ಹಾಕಿಬಿಡುತ್ತಾರೆಂಬ ಭೀತಿಯೂ ಇದೆ. ಅವರ ಅಮೆರಿಕಾ ವ್ಯಾಮೋಹ ಅಷ್ಟು ಗಾಢವಾದದ್ದು.

ಪೆಟ್ರೋಲಿಯಂ ಪದಾರ್ಥಗಳ ಬಗೆಗೆ ಪ್ರಧಾನಿ ಮತ್ತು ಅರ್ಥ ಸಚಿವರಿಬ್ಬರೂ ಸಂಪೂರ್ಣ ಮಾಹಿತಿಯನ್ನು ನೀಡದೆ ಜನರ ದಿಕ್ಕು ತಪ್ಪಿಸುತ್ತಿದ್ದಾರೆ. ಅಂತರರಾಷ್ಟ್ರೀಯ ನೆಲೆಯಲ್ಲಿ ಪೆಟ್ರೋಲಿನ ಬೆಲೆ ಹೆಚ್ಚುವುದಕ್ಕೆ ಅಮೆರಿಕಾದ ತೈಲ ಕಂಪನಿಗಳ ಪಾತ್ರ ಮಹತ್ವದ್ದಾಗಿದೆ. ಅದನ್ನು ತಡೆಗಟ್ಟಲು ನಮ್ಮ ದೇಶಕ್ಕೆ ಸಾಧ್ಯವಿಲ್ಲದಿರಬಹುದು. ಆದರೆ ದೇಶದ ಆರ್ಥಿಕ ನೀತಿಯನ್ನು ಜನಪರವನ್ನಾಗಿಸಿ ಬಂಡವಾಳದಾರರ ಅಕ್ರಮ ಲಾಭವನ್ನು ತಡೆಗಟ್ಟಲು ಸಾಧ್ಯವಿಲ್ಲವೆಂದೇನೂ ಇಲ್ಲ. ನಮ್ಮ ದೇಶದಲ್ಲಿ ಅಬಕಾರಿ ಸುಂಕವು ೨೦೦೭-೦೮ರಲ್ಲಿ ಸುಮಾರು ಒಂದು ಲಕ್ಷ ಹದಿನೇಳು ಕೋಟಿಯಷ್ಟು ವಸೂಲಾಗಿದೆಯೆಂದು ಹೇಳಲಾಗಿದೆ. ಅದರಲ್ಲಿ ಶೇ. ಐವತ್ತಕ್ಕೂ ಹೆಚ್ಚು, ಅಂದರೆ ೫೭,೪೬೦ ಕೋಟಿಗಳಷ್ಟು, ಪೆಟ್ರೋಲಿಯಂ ಪದಾರ್ಥಗಳಿಂದ ವಸೂಲಾಗಿದೆ. ಆಮದು ತೆರಿಗೆಯ ರೂಪದಲ್ಲಿ ತೈಲದ ಕ್ಷೇತ್ರವು ೧೨,೨೭೦ ಕೋಟಿ ರೂಪಾಯಿಗಳನ್ನು ನೀಡಿದೆ. ಪ್ರಸಕ್ತ ವರ್ಷದಲ್ಲಿ ಈ ಬಾಬ್ತು ಆದಾಯವನ್ನು ಕಡಿಮೆ ಮಾಡಿಕೊಂಡರೆ ಮತ್ತು ರಾಜ್ಯ ಸರ್ಕಾರಗಳು ತೈಲದ ಮೇಲೆ ವಿಧಿಸುತ್ತಿರುವ ತೆರಿಗೆಯನ್ನು ಸ್ವಲ್ಪ ಕಡಿಮೆ ಮಾಡಿದರೆ ಪೆಟ್ರೋಲ್ ಬೆಲೆಯನ್ನು ಕಡಿತಗೊಳಿಸಲು ಸಾಧ್ಯವಿದೆ. ಇದು ಚಿದಂಬರಂಗೆ ತಿಳಿದಿದೆ ಮತ್ತು ಅದನ್ನು ಕುರಿತಂತೆ ಎಡಪಕ್ಷಗಳು ಸುದೀರ್ಘವಾದ ಟಿಪ್ಪಣಿಗಳನ್ನು ಕೇಂದ್ರ ಸರ್ಕಾರಕ್ಕೆ ನೀಡಿವೆ. ಅವನ್ನು ಪ್ರಸ್ತಾಪಿಸದೆ ಕೇವಲ ಪರಮಾಣು ಇಂಧನವು ಪರಿಹಾರವೆಂಬ ಮೋಸದ ಮಾತನ್ನಾಡುವುದು ಖಂಡನಾರ್ಹವಾಗಿದೆ. ತೈಲದ ಮೇಲಿನ ಸುಂಕವನ್ನು ಕಡಿಮೆಗೊಳಿಸಿದರೆ ಆ ಪ್ರಮಾಣದ ಮೊತ್ತವನ್ನು ಬೇರೆ ತೆರಿಗೆಗಳಿಂದ ಸರಿದೂಗಿಸಲು ಯಾವ ಕ್ರಮಗಳನ್ನು ಅನುಸರಿಸಬೇಕೆಂದು ಎಡಪಕ್ಷಗಳು ಸೂಚನೆ ನೀಡಿವೆ. ಪ್ರತಿವರ್ಷ ಆರ್ಥಿಕತೆಯು ಶೇ. ೯ರ ಪ್ರಮಾಣದಲ್ಲಿ ಹೆಚ್ಚುತ್ತಿದೆಯೆಂದು ಹೇಳುವ ದೇಶದಲ್ಲಿ ಹಾಗೆ ಅಭಿವೃದ್ಧಿ ಹೊಂದುತ್ತಿರುವ ವಿಭಾಗದಿಂದ ಸ್ವಲ್ಪ ತೆರಿಗೆ ಪಡೆಯಲು ತವಕಿಸದಿರುವುದು ಚಿದಂಬರಂ ಅವರ ಜನವಿರೋಧಿ ನೀತಿಗೆ ದೊಡ್ಡ ಸಾಕ್ಷಿಯಾಗಿದೆ. ಅವರಿಗೆ ಪೆಟ್ರೋಲಿಯಂ ಮೇಲಿನ ತೆರಿಗೆಯಷ್ಟೇ ಕಣ್ಣಿಗೆ ಬೀಳುವಂತಾಗಿರುವುದು ಲಾಭಕೋರ ಉದ್ಯಮಿಗಳ ಮೇಲಿನ ಸಹಾನುಭೂತಿಯಿಂದ.

ಈ ಉದ್ಯಮಿಗಳಿಗೆ ನೀಡಲಾಗುತ್ತಿರುವ ತೆರಿಗೆ ವಿನಾಯಿತಿಯನ್ನು ನಮ್ಮ ಮಾಧ್ಯಮಗಳು ಸಹ ಎತ್ತಿ ತೋರಿಸುವುದಿಲ್ಲ. ಕಾರಣವೇನೆಂದರೆ, ಆ ಅಧಿಪತಿಗಳೆಲ್ಲಾ ಒಂದೇ ಬಂಡವಳಿಗ ಕುಟುಂಬದವರು. ಈ ವಿನಾಯಿತಿಯು ಸಹಸ್ರಾರು ಕೋಟಿಗಳಷ್ಟಿದೆ. ವಿಶೇಷ ಆರ್ಥಿಕ ವಲಯಗಳಿಂದ ಒಂದು ಪುಡಿಗಾಸು ತೆರಿಗೆಯನ್ನೂ ವಸೂಲು ಮಾಡದ ಔದಾರ್ಯ ನಮ್ಮ ಸರ್ಕಾರದ್ದು. ಖಾಸಗಿ ತೈಲ ಕಂಪನಿಗಳು ಕೂಡ ತೆರಿಗೆಗೆ ಬಾಧ್ಯರಲ್ಲ. ಸರ್ಕಾರವು ಅಂತಹ ಪರಮಸ್ನೇಹಿ. ತೈಲ ಸಂಪತ್ತು ನಮ್ಮದು; ಅಂದರೆ ದೇಶದ ಜನರದ್ದು. ಆದರೆ ಖಾಸಗಿಯವರಿಗೆ ಅದನ್ನು ದಾನ ಮಾಡಲಾಗಿದೆ. ಅಂಬಾನಿಯ ರಿಲಯನ್ಸ್ ಕಂಪನಿ 'ಅಭಿವೃದ್ಧಿ' ಹೊಂದಿರುವುದು ಹೀಗೆ. ತೆರಿಗೆ ನೀಡದೆ ತೈಲ ಸಂಪತ್ತನ್ನು ಹೊರತೆಗೆದು ಶುದ್ಧೀಕರಿಸಲು ತಗಲುವ ವೆಚ್ಚವೆಷ್ಟು? ಇಂದಿನ ಅಂತರರಾಷ್ಟ್ರೀಯ ಮಾರುಕಟ್ಟೆಯ ಪೆಟ್ರೋಲ್ ದರದ ನಾಲ್ಕನೆಯ ಒಂದು ಭಾಗಕ್ಕೂ ಕಡಿಮೆ. ಆದರೆ ಅದನ್ನು ಮಾರುವುದು ಅಂತರರಾಷ್ಟ್ರೀಯ ಮಾರುಕಟ್ಟೆ ಬೆಲೆಗೆ, ಅದೂ ಹೊರದೇಶಗಳಲ್ಲಿ ಮಾತ್ರ. ಅದನ್ನು ಇಲ್ಲೇ ಮಾರಬೇಕೆಂಬ ಷರತ್ತು ಹಾಕಿದರೆ ನಾವು ಆಮದು ಮಾಡಿಕೊಳ್ಳುವುದನ್ನು ಕಡಿಮೆ ಮಾಡಬಹುದು, ಪೆಟ್ರೋಲ್ ಬೆಲೆ ತಗ್ಗಿಸಬಹುದು. ನಮಗೆ ತೈಲ ಬೇಕಾಗಿದೆ, ಅದನ್ನು ಹೊರಗಡೆಯಿಂದ ದುಬಾರಿ ಬೆಲೆಗೆ ಕೊಳ್ಳುತ್ತಿದ್ದೇವೆ. ಆದರೆ, ಸ್ವದೇಶದ ತೈಲ ಹೊರಹೋಗುತ್ತಿದೆ ಮತ್ತು ಅದರಿಂದ ನಮಗೆ ಒಂದು ರೂಪಾಯಿಯಷ್ಟು ತೆರಿಗೆಯೂ ಬರುವುದಿಲ್ಲ. ಇದಕ್ಕಿಂತಲೂ ದೊಡ್ಡ ದ್ರೋಹ ಯಾವುದಿದೆ ? ಸಾರ್ವಜನಿಕ ವಲಯದಲ್ಲಿರಬೇಕಾದದ್ದನ್ನು ಖಾಸಗಿಯವರಿಗೆ ವಹಿಸಿ ಕೊಟ್ಟು ಸಾರ್ವಜನಿಕ ಉದ್ಯಮದ ಕತ್ತು ಹಿಚುಕುವುದು ಮತ್ತು ಜನಸಾಮಾನ್ಯರ ಮೇಲೆ ಅನಗತ್ಯ ತೆರಿಗೆ ಹೇರುವುದು ಸರ್ಕಾರದ ದುಷ್ಟ ಧೋರಣೆ. ಇವೇ ಖಾಸಗಿ ತೈಲ ಕಂಪನಿಗಳಿಗೆ ನಮ್ಮ ದೇಶದ ಅನಿಲ ಸಂಪತ್ತನ್ನೂ ಬಿಟ್ಟುಕೊಡಲಾಗಿದೆ. ಕೃಷ್ಣಾ, ಗೋದಾವರಿ ಬಯಲಿನಲ್ಲಿ ಲಭ್ಯವಿರುವ ಅನಿಲವನ್ನು ಅಂಬಾನಿಗೆ ಪೂರ್ತಿಯಾಗಿ ಧಾರೆಯೆರೆದಿದ್ದಾರೆ. ಅದೂ ಸಾರ್ವಜನಿಕ ಸ್ವತ್ತು. ಅದನ್ನು ಬಳಸಿಕೊಂಡು ಪೆಟ್ರೋಲಿನ ಬೆಲೆಯನ್ನು ಗಮನಾರ್ಹ ಪ್ರಮಾಣದಲ್ಲಿ ತಗ್ಗಿಸಬಹುದು. ಆದರೆ ದೇಶದ ಆರ್ಥಿಕತೆಯನ್ನು ಖಾಸಗಿ ಬಂಡವಳಿಗರಿಗೆ ಮತ್ತು ವಿದೇಶಿ ಬಹುರಾಷ್ಟ್ರೀಯ ಕಂಪನಿಗಳಿಗೆ ಒತ್ತೆಯಿಡಲಾಗಿದೆ. ಅದನ್ನು ಚರ್ಚಿಸಿ ಪರಿಣಾಮಕಾರಿ ಪರ್ಯಾಯ ಕ್ರಮಗಳನ್ನು ಅನುಷ್ಠಾನಕ್ಕೆ ತರುವುದರ ಬದಲು ಭಂಡತನದಿಂದ ಪರಮಾಣು ಇಂಧನದ ಪರಿಹಾರ ಸೂಚಿಸುವ ಕೇಂದ್ರ ಸರ್ಕಾರವು ದೇಶವನ್ನು ವಿನಾಶದ ಅಂಚಿಗೆ ಒಯ್ಯುತ್ತಿದೆ. ಇದಕ್ಕೆ ಎಂದಿಗೂ ಕ್ಷಮೆ ಇರಲಾರದು.




**ಜನಾದೇಶವೋ (ರೆಡ್ಡಿ) ಧನಾದೇಶವೋ ?**

ಚುನಾವಣಾ ಪ್ರಕ್ರಿಯೆ ಪ್ರಾರಂಭವಾದ ಕೂಡಲೆ, ಮತಗಳ ಎಣಿಕೆ ಮುಗಿಯುವ ತನಕ 'ಜನಾದೇಶ ೨೦೦೮' ಎಂಬ ದೊಡ್ಡಕ್ಷರದ ಘೋಷಣೆ ಪತ್ರಿಕೆಗಳಲ್ಲಿ, ದೂರದರ್ಶನದ ಕಿರುತೆರೆಯ ಮೇಲೆ ಉಜ್ವಲವಾಗಿ ಪ್ರಜ್ವಲಿಸಿತು. ಚುನಾವಣಾ ಫಲಿತಾಂಶ ಪ್ರಕಟವಾದ ಮೇಲೆ: ''ಜನಾದೇಶ ಬಿಜೆಪಿಗೆ'' ಬೊಬ್ಬೆ ಹಾಕಿ ಡೊಳ್ಳು ಬಾರಿಸಿದರು, ಸೋತವರು ''ಜನಾದೇಶಕ್ಕೆ'' ತಲೆ ಬಾಗುತ್ತೇವೆ ಎಂದರು. ಕೇಂದ್ರ ಚುನಾವಣಾ ಆಯೋಗ ಚುನಾವಣೆಗಳು ನ್ಯಾಯಸಮ್ಮತವಾಗಿ, ಪ್ರಾಮಾಣಿಕವಾಗಿ ಮುಕ್ತವಾಗಿ ನಡೆಸಲಾಯಿತು ಎಂದು ತಮಗೆ ತಾವೆ ಶಹಬಾಸ್ ಹೇಳಿಕೊಂಡರು.

ಚುನಾವಣೆಗಳಲ್ಲಿ ಸಾವಿರಾರು ಕೋಟಿ ರೂ.ಗಳ ಹಣದ ಹೊಳೆ, ಲಕ್ಷ ಲಕ್ಷ ಬ್ಯಾರಲ್ ಭಟ್ಟಿ ಸಾರಾಯಿ ಕರ್ನಾಟಕದಲ್ಲಿ ಸುನಾಮೀ ಚಂಡಮಾರುತದಂತೆ ಅಪ್ಪಳಿಸಿದವು. ಇದಕ್ಕೆ ಚುನಾವಣಾ ಆಯೋಗವೇ ಜಪ್ತಿ ಮಾಡಿದ ನೂರಾರು ಕೋಟ್ಯಂತರ ನಗದು, ಲಕ್ಷ ಲಕ್ಷ ಅಕ್ರಮ ಸಾರಾಯಿ ಶೀಸೆಗಳು ಅಲ್ಲಗಳೆಯಲಾಗದ ಸಾಕ್ಷ್ಯ. ಜಪ್ತಿ ಮಾಡಿದ್ದು ಸಾವಿರದಲ್ಲಿ ಒಂದು ಭಾಗದಷ್ಟು ಮಾತ್ರ. ರಾಜ್ಯಾದ್ಯಂತ ವಶಪಡಿಸಿಕೊಂಡ ಸೀರೆ, ರವಿಕೆ, ಮೂಗುಬೊಟ್ಟು, ಮಾಂಗಲ್ಯ... ಇವು ಏನನ್ನು ಸಾರುತ್ತವೆ? ಇದನ್ನೆಲ್ಲ ನೋಡಿಯೂ ಚುನಾವಣೆ ಪ್ರಾಮಾಣಿಕವಾಗಿ ನಡೆಯಿತು ಎಂದು ಸಾರುವುದು, ಅದನ್ನು ನಂಬುವುದು ಆತ್ಮವಂಚನೆಯ ಪರಮಾವಧಿ! ಸಂವಿಧಾನ ದ್ರೋಹ.

ಇನ್ನು 'ಮುಕ್ತ ಮತದಾನ' ಎಂಬ ಈ ಕುಚೋದ್ಯದ ಮಾತು ಕೇಳಿದಾಗ ನಗೆ ಬರುತ್ತದೆ. ಮತದಾರರ ಮುಕ್ತ ಮಾರುಕಟ್ಟೆಯಲ್ಲಿ ಮತಗಳ ಬೆಲೆ ಗಗನಕ್ಕೇರಿದ್ದು ಯಾರಿಗೆ ಗೊತ್ತಿಲ್ಲ? ಹಾಗೆ ಮತಗಳನ್ನು ಮಾರಿಕೊಂಡವರು ಮಗಳನ್ನು ಮಡದಿಯನ್ನು ಮಾರಿಕೊಳ್ಳಲು ಹೇಸುವರೆ? ಇದು ಯಾರಿಗೆ ತಾನೆ ಗೊತ್ತಿಲ್ಲ? ಬೆಂಗಳೂರಿನ ಕಲ್ಯಾಣ ಮಂಟಪಗಳಲ್ಲಿ ಮತದಾರರಿಗೆ ಪ್ರತಿ ದಿನ ಅನ್ನ ಸಂತರ್ಪಣೆ ಮಾಡಿದಾಗ ನೂರು, ಐನೂರು, ಸಾವಿರ ರೂಪಾಯಿಗಳ ಹೊಸ ನೋಟುಗಳ ದಕ್ಷಿಣೆಯೂ ಮತದಾರ ಗಣಂಗಳಿಗೆ ಗಣಿ ಧನಿಗಳಿಂದ ಸಿಕ್ಕಿತು. ಮುಕ್ತ ಮತ ಮಾರುಕಟ್ಟೆಯಲ್ಲಿ ಅಭ್ಯರ್ಥಿಗಳ ಉದಾರೀಕರಣ ನೀತಿ ವಿಜೃಂಭಿಸಿತು. ಆದರೂ ಇದು ಪ್ರಾಮಾಣಿಕ ನ್ಯಾಯ ಸಮ್ಮತ ಚುನಾವಣೆಯಂತೆ!

ಈ ಹಣದ ಹೊಳೆ – ಅಲ್ಲಲ್ಲ ಮಹಾಸಾಗರ – ಈ ರಾಜ್ಯದಲ್ಲಿ ಉಕ್ಕೇರಿ ಹರಿಯಲು ಆ ಹಣ ಎಲ್ಲಿಂದ ಬಂತು ಎಂಬುದು ಚುನಾವಣಾ ಆಯೋಗಕ್ಕೂ ಗೊತ್ತಿದೆ. ಬಳ್ಳಾರಿ ಗಣಿ ರೆಡ್ಡಿ ದೊರೆಗಳು ಅಕ್ರಮ ಗಣಿಗಾರಿಕೆಯಿಂದ, ದರೋಡೆ ಧನರಾಶಿಯಿಂದ ಈ ರಾಜ್ಯವನ್ನೆ ಕೊಂಡು ಕೊಂಡಿದ್ದಾರೆ. ರೆಡ್ಡಿಗಳ ದುಡ್ಡು ಮೊದಲು ಬಳ್ಳಾರಿ ಜಿಲ್ಲೆಗೆ ಸೀಮಿತವಾಗಿತ್ತು. ಅವರೀಗ ತಮ್ಮ ಧನಬಲದ ಸಾಮರ್ಥ್ಯವನ್ನು ಕೊಪ್ಪಳ, ಗದಗ, ರಾಯಚೂರು, ಧಾರವಾಡ, ದಾವಣಗೆರೆ, ಚಿತ್ರದುರ್ಗಕ್ಕೂ ಹಬ್ಬಿಸಿದ್ದಾರೆ. ಆಳುವ ಪಕ್ಷಕ್ಕೆ ಬೇಕಾಗಿದ್ದ ನಾಲ್ವರು ಸ್ವತಂತ್ರ ಶಾಸಕರ ಮನ 'ಒಲಿಸಲು' ಸಂಧಾನ ನಡೆಸಿದವರು ರೆಡ್ಡಿ ದೊರೆಗಳು! ಅದಕ್ಕೆ ಅವರು ತೆತ್ತ ಬೆಲೆ ಎಷ್ಟು? ಹಾಗಾದರೆ ಈ ರಾಜ್ಯದ ಒಡೆಯರಾರು? ಯಡ್ಯೂರಪ್ಪನವರ ಕುರ್ಚಿ ಭದ್ರತೆಗೆ ರೆಡ್ಡಿ ದೊರೆಗಳ ಕಬ್ಬಿಣ ಗಣಿಯೆ ಕಾಂಕ್ರೀಟ್ ಬುನಾದಿ, ಆದ್ದರಿಂದಲೆ ರೆಡ್ಡಿ ಸೋದರರು, ಅವರ ಮೂವರು ಗೆಳೆಯರಿಗೂ ಮಂತ್ರಿ ಮಂಡಲದಲ್ಲಿ ಕುರ್ಚಿ!

ಮುಂದೆ ಚುನಾವಣೆಗಳಿಲ್ಲದೆ ನಾಮಕರಣಗೊಂಡ ವಿಧಾನ ಪರಿಷತ್ ಸದಸ್ಯರೆಂಬ ದೊಡ್ಡ ಬಾಯಿಗಳು ಧನಾಧಿಪತಿಗಳ ದಾಸರಾಗಿ ಅವರಿಗೆ ಬುದ್ಧಿಬಲವನ್ನು




ನೀಡುತ್ತಾರೆ! ಹಾಗಾದ ಮೇಲೆ ಸಂವಿಧಾನ, ಪ್ರಜಾ ಪ್ರಾತಿನಿಧ್ಯ ಕಾಯಿದೆ, ಒಟ್ಟು ಪ್ರಜಾಸತ್ತೆ ಸತ್ತುಹೋಗುತ್ತವೆ ಎಂಬ ಮಾತನ್ನು ೧೯೭೭ರಲ್ಲೆ ನ್ಯಾ.ಮೂ. ಭಗವತಿ, ಕನ್ವರ್ ಲಾಲ್ ಗುಪ್ತ ಕೇಸಿನಲ್ಲಿ ಹೇಳಿದ್ದಾರೆ. ಹೀಗೆ ಚುನಾವಣೆಗಳ ಭೀಕರ ಅನೈತಿಕ ನಾಟಕವನ್ನು ಬಿಟ್ಟು, ಶಾಸಕ ಸದಸ್ಯತ್ವವನ್ನು ಹರಾಜು ಹಾಕಿ ಯಾರು ಹೆಚ್ಚು ಹಣ ಕೊಡುತ್ತಾರೊ ಅವರಿಗೆ ಮಾರಿಬಿಡುವುದೆ ಒಳಿತು!! ಹಾಗೆ ಗ್ರಾಮ ಪಂಚಾಯತಿ ಅಧ್ಯಕ್ಷ ಸ್ಥಾನವನ್ನು ಹರಾಜಿಗಿಟ್ಟ ಉದಾಹರಣೆಗಳುಂಟು. ಆ ಪದ್ಧತಿ ಶಾಸನಸಭೆ, ಲೋಕಸಭೆ ಸದಸ್ಯತ್ವಕ್ಕೆ ಯಾಕೆ ಅನ್ವಯಿಸಬಾರದು?

ಬೆಂಗಳೂರು **ಕೋ. ಚೆನ್ನಬಸಪ್ಪ**

**ಕನ್ನಡ-ಕನ್ನಡಿಗ-ಕರ್ನಾಟಕ : ಹೊಸ ಸರ್ಕಾರದ ಕರ್ತವ್ಯಗಳು**

ಪರಸ್ಪರ ಭೇಟಿಯಾದಾಗ ಬೇಸರಗೊಂಡಂತಿದ್ದ ಒಬ್ಬ ಸ್ನೇಹಿತನನ್ನು ಮತ್ತೊಬ್ಬ ''ಯಾಕಯ್ಯಾ, ತುಂಬಾ ಬೇಸರದಿಂದ ಇರುವಂತೆ ಕಾಣುತ್ತದೆ?'' ಎಂದು ಕೇಳಿದ. ಅದಕ್ಕೆ ಆತ, ''ನನ್ನ ಹೆಂಡತಿ ಬಗೆಗೆ ವಿಶ್ವಾಸ ಹೋಗಿ ಜುಗುಪ್ಸೆಯಾಗಿದೆ ಕಣಯ್ಯಾ'' ಎಂದ. ''ವಿಶ್ವಾಸ ಕಳೆದುಕೊಳ್ಳುವಂಥಾದ್ದು ಏನಾಯಿತು?'' ಎಂದು ಕೇಳಿದ ಸ್ನೇಹಿತ. ''ನೋಡಯ್ಯ, ನನ್ನನ್ನು ಮದುವೆಯಾಗುವ ಮುನ್ನ 'ನಿನಗಾಗಿ ಪ್ರಾಣ ಬೇಕಾದರೂ ಕೊಡುತ್ತೇನೆ' ಎಂದಿದ್ದಳು. ಒಂದು ವರ್ಷವಾಯಿತು. ಆಕೆ ಇನ್ನೂ ತನ್ನ ಮಾತಿನಂತೆ ನಡೆದುಕೊಂಡಿಲ್ಲ'' ಎಂದ.

ನಮ್ಮ ಸ್ಥಿತಿಯೂ ಹಾಗೇ ಆಗಿದೆ. ಕರ್ನಾಟಕ ರಾಜ್ಯ ರೂಪುಗೊಂಡಾಗಿನಿಂದ ಕನ್ನಡಕ್ಕಾಗಿ ಏನು ಬೇಕಾದರೂ ಮಾಡುತ್ತೇವೆ ಎಂದು ಹೇಳಿಕೊಂಡೇ ಬರುತ್ತಿರುವ ಎಲ್ಲ ಸರ್ಕಾರಗಳೂ ಏನನ್ನೂ ಮಾಡದೆ ಬಂದು ಹೋಗುತ್ತಿವೆ. ಹಾಗಾಗಿ, ಈ ಸರ್ಕಾರಗಳ ಬಗೆಗೇ ನಮ್ಮ ವಿಶ್ವಾಸ ಹೋಗಿದೆ. ನಿಮಗಿರುವ ಸಮಸ್ಯೆ ಏನು ಎಂದು ಯಾರಾದರೂ ಕೇಳಿದರೆ, ಸರ್ಕಾರವೇ ಸಮಸ್ಯೆ ಎನ್ನುವಂತಾಗಿದೆ. ಈಗ ಮತ್ತೊಂದು ಸರ್ಕಾರ ಬಂದಿದೆ. ಇದನ್ನು 'ಹೊಸ ಸರ್ಕಾರ' ಎನ್ನುವುದಕ್ಕಿಂತ 'ಹೊಸ ಪಕ್ಷದ ಸರ್ಕಾರ' ಎನ್ನಬಹುದು. ಏಕೆಂದರೆ, ಕನ್ನಡ-ಕನ್ನಡಿಗ-ಕರ್ನಾಟಕಕ್ಕೆ ಸರ್ಕಾರಗಳು ಹೊಸವೇನಲ್ಲ. ಸ್ವಾತಂತ್ರ್ಯ ಬಂದಾಗಿನಿಂದ ಅಗತ್ಯಕ್ಕಿಂತ ಹೆಚ್ಚು ಸರ್ಕಾರಗಳು ಬಂದು ಹೋಗಿವೆ. ಏಕಪಕ್ಷದ ಸರ್ಕಾರ, ದ್ವಿಪಕ್ಷದ ಸರ್ಕಾರ, ನಿರೀಕ್ಷಿತ ಸರ್ಕಾರ, ಅನಿರೀಕ್ಷಿತ ಸರ್ಕಾರ – ಹೀಗೆ ಎಲ್ಲ ಬಗೆಯ ಸರ್ಕಾರಗಳ ಅನುಭವವೂ ನಮಗಾಗಿದೆ. ಈಗೊಂದು ಹೊಸ ಸರ್ಕಾರ.

ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ 'ಸರ್ಕಾರ'ದ ಕರ್ತವ್ಯಗಳೇನು ಎನ್ನುವುದನ್ನು ನಮ್ಮ ಸಂವಿಧಾನದಲ್ಲೇ ಸ್ಪಷ್ಟವಾಗಿ ತಿಳಿಸಲಾಗಿದೆ. ಆದರೆ ಸರ್ಕಾರ ನಡೆಸುವ ಜನ ಆ ಕರ್ತವ್ಯಗಳನ್ನು ನಿರ್ಲಕ್ಷಿಸುತ್ತಿರುವ ಕಾರಣ ಪ್ರತಿ ಸಲ ಬರುವ ಹೊಸ ಸರ್ಕಾರಕ್ಕೆ ಜನತೆಯೇ ನೆನಪು ಮಾಡಿ ಕೊಡಬೇಕಾಗಿ ಬಂದಿದೆ.

ಆರಂಭದಲ್ಲೇ ಸ್ಪಷ್ಟಪಡಿಸಬೇಕಾದ ಒಂದು ಅಂಶವೆಂದರೆ, ನಾವಾರೂ ಯಾವುದೇ ಸರ್ಕಾರದಿಂದ ಸ್ವಂತಕ್ಕಾಗಿ ಏನನ್ನೂ ನಿರೀಕ್ಷಿಸಿದವರಲ್ಲ. ಈಗಿನ ಸರ್ಕಾರದಿಂದಲೂ ನಮ್ಮ ಸ್ವಂತದ ನಿರೀಕ್ಷೆಗಳಿಲ್ಲ. ನಮ್ಮೆಲ್ಲರ ಆಶಯ ಮತ್ತು ಕಳಕಳಿ ಏನಿದ್ದರೂ, ಅದು 'ಕನ್ನಡ- ಕನ್ನಡಿಗ-ಕರ್ನಾಟಕದ' ಹಿತ ರಕ್ಷಣೆ, ಮತ್ತು ಘನತೆ ಗೌರವಗಳ ಸಂರಕ್ಷಣೆ. ಈ ದೃಷ್ಟಿಯಿಂದ, ಸರ್ಕಾರಕ್ಕೆ ಹೇಳಬೇಕಾದ್ದನ್ನು ನಾವು ನೇರವಾಗಿ ಹೇಳಬಯಸುತ್ತೇವೆ.

ಇಲ್ಲಿ ಸರ್ಕಾರವೆಂದರೆ, ಕೇವಲ ಸಚಿವ ಸಂಪುಟವಷ್ಟೇ ಅಲ್ಲ; ಜನರಿಂದ ಆಯ್ಕೆಯಾಗಿರುವ ಶಾಸಕರೂ ಇದರ ವ್ಯಾಪ್ತಿಗೆ ಬರುತ್ತಾರೆ. ಹಾಗೆಯೇ ಸರ್ಕಾರದ ನೀತಿ ನಿರೂಪಗಳನ್ನು ಜಾರಿಗೊಳಿಸುವ ಅಧಿಕಾರಿಗಳೂ ಸೇರುತ್ತಾರೆ.

ಸರ್ಕಾರದ ಸಚಿವ ಸಂಪುಟದ ಸದಸ್ಯರು ಮತ್ತು ಶಾಸಕರ ಮೊದಲ ಕರ್ತವ್ಯವೆಂದರೆ, 'ನಾವು ಕನ್ನಡಿಗರು, ಕನ್ನಡಿಗರ ಬೆಂಬಲದಿಂದ ಆರಿಸಿ ಬಂದಿದ್ದೇವೆ' ಎಂಬುದನ್ನು ಸದಾ ನೆನಪಿನಲ್ಲಿಟ್ಟುಕೊಂಡು ಸಭ್ಯರಾಗಿ, ಪ್ರಾಮಾಣಿಕರಾಗಿ, ವಚನ ಭ್ರಷ್ಟರಾಗದೆ, ಸಂವಿಧಾನಕ್ಕೆ ಬದ್ಧರಾಗಿ ನಡೆದುಕೊಳ್ಳಬೇಕಾದದ್ದು. ಎರಡನೆಯದಾಗಿ, ಕನ್ನಡಿಗರ ಬದುಕನ್ನೂ, ಅವರ ಘನತೆ-ಗೌರವಗಳನ್ನೂ ಮೂರಾಬಟ್ಟೆ ಮಾಡುವುದಿಲ್ಲ ಎಂದು ಜನತೆಗೆ ಖಚಿತ ಭರವಸೆ ಕೊಡಬೇಕಾದದ್ದು. ಮೂರನೆಯದಾಗಿ, ರಾಜ್ಯದ ಆಗುಹೋಗುಗಳನ್ನೆಲ್ಲ ನಿರ್ಧರಿಸುವ ವಿಧಾನ ಸೌಧದ ಪಾವಿತ್ರ್ಯತೆಯನ್ನು ಹಾಳುಮಾಡುವುದಿಲ್ಲ ಎಂದು ಸಂಕಲ್ಪ ಮಾಡಬೇಕಾದದ್ದು. ಹಾಗೆಯೇ, ಅದು ಮಾಡುತ್ತೇವೆ, ಇದು ಮಾಡುತ್ತೇವೆ ಎಂದು ಕುದುರೆಯ ಮುಂದೆ ಹಸಿರು ಹುಲ್ಲು ತೋರಿಸುವ ಕುಟಿಲೋಪಾಯ ಬಿಟ್ಟು, ಅದನ್ನು

ಮಾಡಿದ್ದೇವೆ, ಇದನ್ನು ಮಾಡಿದ್ದೇವೆ ಎಂದು ಎದೆತಟ್ಟಿ ತೋರಿಸುವ ವಿಶ್ವಾಸ ಬೆಳೆಸಿಕೊಳ್ಳ ಬೇಕಾದದ್ದು. ಇಷ್ಟಾದರೆ ಸಾಕು, 'ಕನ್ನಡ - ಕನ್ನಡಿಗ - ಕರ್ನಾಟಕ'ಕ್ಕೆ ನ್ಯಾಯ ದೊರೆಕಿದಂತೆ ಎಂದು ನಾವು ಭಾವಿಸುತ್ತೇವೆ.

ಶ್ರೇಷ್ಠ ಪ್ರಜಾಪ್ರಭುತ್ವವಾದಿ ಅಬ್ರಹಾಂ ಲಿಂಕನ್ ಅವರು ಹೇಳಿರುವ ಒಂದು ಮಾತಿದೆ. ''ಒಂದು ಸಂಕ್ಷಿಪ್ತ ಅವಧಿಗಾಗಿ ಒಂದು ಮಹತ್ವದ ಸ್ಥಾನವನ್ನು ತುಂಬಲು ನಾನು ಆರಿಸಲ್ಪಟ್ಟಿದ್ದೇನೆ. ನನ್ನ ಆಡಳಿತ ಅಣಕವಾಗ ಬಾರದು'' ಎಂದಿದ್ದಾರೆ. ಈ ಮಾತುಗಳನ್ನು ಹೊಸ ಸರ್ಕಾರ ಮತ್ತು ನಮ್ಮ ಶಾಸಕರು ಅರ್ಥ ಮಾಡಿಕೊಳ್ಳಬೇಕು. ಅಧಿಕಾರದ ಅಹಂಕಾರದ ಅಮಲಿಗೆ ಒಳಗಾದರೆ, ಅದು ತನಗೆ ತಾನೇ ಹಗೆಯಾಗುತ್ತದೆ ಎನ್ನುವ ಎಚ್ಚರವಿರಬೇಕು.

ನಮ್ಮ ದೇಶದ ಸಂವಿಧಾನ ತಜ್ಞ ಪಾಲ್ಕಿವಾಲಾ ಅವರು ನಮ್ಮ ಪ್ರಜಾಪ್ರಭುತ್ವದ ನಾಲ್ಕು ವೈಫಲ್ಯಗಳನ್ನು ಗುರುತಿಸಿದ್ದಾರೆ:

೧. ಕಾನೂನು ಮತ್ತು ಶಿಸ್ತು ಪಾಲನೆಯ ವೈಫಲ್ಯ;

೨. ಅಪರಿಮಿತವಾದ ಆರ್ಥಿಕ ಸಾಮರ್ಥ್ಯದ ಬಳಕೆಯ ವೈಫಲ್ಯ;

೩. ಮಾನವ ಸಂಪನ್ಮೂಲದ ಸದ್ವಿನಿಯೋಗದ ವೈಫಲ್ಯ ಮತ್ತು

೪. ನೈತಿಕ ನಾಯಕತ್ವ ಒದಗಿಸುವಲ್ಲಿ ವೈಫಲ್ಯ.

ಈ ನಾಲ್ಕು ವೈಫಲ್ಯಗಳನ್ನು ಸರ್ಕಾರ ಮತ್ತು ಶಾಸಕರುಗಳು ಗಂಭೀರವಾಗಿ ಪರಿಗಣಿಸಿ, ಅವನ್ನು ನಿವಾರಿಸುವತ್ತ ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಅಂಗೀಕರಿಸಿರುವ ನಮ್ಮ ದೇಶದ ಜನಪ್ರಾತಿನಿಧ್ಯದ ಯಾವುದೇ ಸರ್ಕಾರಕ್ಕೆ ಕರ್ತವ್ಯ ಪ್ರಜ್ಞೆ ಮತ್ತು ಕರ್ತವ್ಯ ನಿಷ್ಠೆ ಎರಡೂ ಇರಬೇಕಾಗುತ್ತದೆ. ಜೊತೆಗೆ ಕರ್ತವ್ಯ ಪಾಲನೆಯ ಬದ್ಧತೆಯೂ ಅಗತ್ಯವಾಗಿರುತ್ತದೆ.

ನಮ್ಮ ಸಂವಿಧಾನದ ಪ್ರಕಾರ, ರಾಜ್ಯ ಸರ್ಕಾರಗಳು ಪ್ರಾಂತೀಯ ಸರ್ಕಾರಗಳು ಅವು ತಮ್ಮ ಪ್ರಾದೇಶಿಕ ವ್ಯಾಪ್ತಿಯಲ್ಲಿ ಆಯಾ ಪ್ರದೇಶದ ಸರ್ವಾಂಗೀಣ ಅಭಿವೃದ್ಧಿ ಸಾಧಿಸಿ ಜನ ಹಿತವನ್ನು ರಕ್ಷಿಸಬೇಕಾಗುತ್ತದೆ. ಅಂತೆ, ನಮ್ಮ ರಾಜ್ಯ ಸರ್ಕಾರ ಕರ್ನಾಟಕ ಪ್ರದೇಶದ ಹಿತರಕ್ಷಣೆ ನೋಡಿಕೊಳ್ಳುವುದು ಅದರ ಪರಮ ಕರ್ತವ್ಯ.

ಇತ್ತೀಚಿನ ರಾಜಕೀಯ ಬೆಳವಣಿಗೆಗಳನ್ನು ಗಮನಿಸಿದರೆ, ಚುನಾವಣೆಯಲ್ಲಿ ಆರಿಸಿ ಬಂದವರು ಕೇವಲ ಗಳಿಸಿದ ಅಧಿಕಾರವನ್ನು ಉಳಿಸಿಕೊಳ್ಳುವುದರಲ್ಲೇ ತಮ್ಮೆಲ್ಲ ಶಕ್ತಿ-ಯುಕ್ತಿಗಳನ್ನು ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆಯೇ ವಿನಾ ದೊರಕಿದ ಅವಕಾಶವನ್ನು ನಾಡಿನ ಹಿತಕ್ಕೆ ಬಳಸಿಕೊಳ್ಳುವ ಪ್ರಜ್ಞೆ ಮತ್ತು ನಿಷ್ಠೆ ಕಾಣುತ್ತಿಲ್ಲ. ಇದು ರಾಜ್ಯದ ಭವಿಷ್ಯದ ದೃಷ್ಟಿಯಿಂದ ತುಂಬ ಅಪಾಯಕಾರಿಯಾದ ಬೆಳವಣಿಗೆ.

ಮೊನ್ನೆ ನಡೆದ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ರಾಜಕೀಯ ಪಕ್ಷಗಳ ಚುನಾವಣೆ ಪ್ರಣಾಳಿಕೆಗಳಲ್ಲಿ ನಮ್ಮ ನಾಡನ್ನು ಕಾಡುತ್ತಿರುವ ಪ್ರಮುಖ ಸಮಸ್ಯೆಗಳ ಪರಿಹಾರದ ಬಗೆಗೆ ಗಂಭೀರ ಪ್ರಸ್ತಾಪವೇ ಇಲ್ಲದಿರುವುದು ಆತಂಕಕಾರಿಯಾಗಿದೆ. ನಾವೆಲ್ಲ ಮಾಧ್ಯಮಗಳ ಮೂಲಕ ತಿಳಿದಿರುವಂತೆ, ಆ ಪ್ರಣಾಳಿಕೆಗಳಲ್ಲಿ ಬ್ಯಾಂಕ್ ಸಾಲಕ್ಕೆ ಸರ್ಕಾರದ ಖಾತ್ರಿ, ಮಹಿಳಾ ಪೊಲೀಸ್ ಠಾಣೆ ಸ್ಥಾಪನೆ, ಸಾಲಕ್ಕೆ ಕಡಿಮೆ ದರದ ಬಡ್ಡಿ, ನಗರಗಳಲ್ಲಿ ಸುರಂಗ ಮಾರ್ಗ, ಬಡಾವಣೆಗಳಲ್ಲಿ ಮಾಲ್‌ಗಳ ನಿರ್ಮಾಣ, ಅಕ್ರಮ-ಸಕ್ರಮ ಯೋಜನೆ, ಬೀಜಿಂಗ್-ಶಾಂಘೈ ಮಾದರಿ ಬೆಂಗಳೂರಿಗೆ ಹೊಸ ರೂಪ, ಆಶ್ರಯ ಮನೆಗಳ ನಿರ್ಮಾಣ, ಕೆ.ಜಿ.ಗೆ ೨ ರೂ. ದರದಲ್ಲಿ ಅಕ್ಕಿ, ಕಲರ್ ಟಿ.ವಿ. ಬೈಸಿಕಲ್ಲು, ಕನ್ಯಾದಾನ ಯೋಜನೆ, ಇಂತಹ ಎಷ್ಟೋ ಭರವಸೆಗಳಿವೆ. ಇವೆಲ್ಲ ಬೇಡ ಎಂದೇನೂ ನಾವು ಹೇಳುವುದಿಲ್ಲ. ಆದರೆ ನಮ್ಮ ರಾಜ್ಯದ ಒಟ್ಟಾರೆ ಪ್ರಗತಿಗೆ ಮಾರಕವಾಗಿರುವ ಗಡಿ ಸಮಸ್ಯೆ, ಆಡಳಿತ ಭಾಷೆ ಮತ್ತು ಶಿಕ್ಷಣ ಮಾಧ್ಯಮ, ಜಲ ವಿವಾದ, ಪ್ರಾದೇಶಿಕ ಸಮತೋಲನ, ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ, ವಲಸೆ ಸಮಸ್ಯೆ, ಸ್ಥಳೀಯರ ಉದ್ಯೋಗ – ಇಂತಹ ಗಂಭೀರ ವಿಷಯಗಳ ಬಗ್ಗೆ ಯಾವ ಪಕ್ಷಗಳೂ ಬದ್ಧ ನಿಲುವು ತಾಳಿದಂತೆ ಕಾಣುವುದಿಲ್ಲ.

ನಾವು ಅಧಿಕಾರಕ್ಕೆ ಬಂದಿದ್ದರೆ ಇವೆಲ್ಲವನ್ನೂ ಸಾಧಿಸಬಹುದಾಗಿತ್ತು ಎಂದು ಸೋತ ಪಕ್ಷಗಳು ಹೇಳಿ ಕೈ ತೊಳೆದುಕೊಂಡುಬಿಡಬಹುದು. ಆದರೆ ಅಧಿಕಾರಕ್ಕೆ ಬಂದವರಾದರೂ ಈ ಸಮಸ್ಯೆಗಳ ಪರಿಹಾರಕ್ಕೆ ಕಾರ್ಯಸಾಧ್ಯ ಕ್ರಮಗಳನ್ನಾದರೂ ಕೈಗೊಳ್ಳಬೇಕಲ್ಲ.

ಪ್ರಸಕ್ತ ಸರ್ಕಾರವಾದರೂ ಒಂದು ಪಕ್ಷವಾಗಿ ತಾನೇ ಇತ್ತ ಭರವಸೆಗಳಿಗೆ ಬದ್ಧವಾಗಿರುತ್ತದೆಂದು ನಾವು ನಿರೀಕ್ಷಿಸುತ್ತೇವೆ. ಬದ್ಧವಾಗಿರಬೇಕೆಂದು ನಿರ್ದಾಕ್ಷಿಣ್ಯವಾಗಿ ತಿಳಿಸುತ್ತೇವೆ. ಸರ್ಕಾರ ಮೊದಲು ರಾಜ್ಯದ ಅಗತ್ಯದ ಆದ್ಯತೆಗಳನ್ನು ಆರಿಸಿಕೊಳ್ಳಬೇಕು. ಕನ್ನಡಿಗರಿಗೆ ಆಗುತ್ತಿರುವ ಆಘಾತಗಳನ್ನು ತಪ್ಪಿಸಲು ಕ್ಷಿಪ್ರ ಕ್ರಮ ಕೈಗೊಳ್ಳಬೇಕು.

ಕನ್ನಡಿಗರ ಭಾವನಾತ್ಮಕ ಸಂಬಂಧದ ಮತ್ತು ಈ ನೆಲದ ಸಂಸ್ಕೃತಿಯ ಕನ್ನಡ ಭಾಷೆಗೆ ಅಧಿಕೃತ ಶಾಸ್ತ್ರೀಯ ಭಾಷೆಯ ಸ್ಥಾನ ಗಳಿಸುವುದು, ಅಂತಾರಾಜ್ಯ ವಲಸೆಯ ಪರಿಣಾಮವಾಗಿ ವಸತಿ, ಉದ್ಯೋಗ ಇತ್ಯಾದಿ ಸೌಲಭ್ಯಗಳಿಂದ ಸ್ಥಳೀಯರು ವಂಚಿತರಾಗುವುದನ್ನು ತಪ್ಪಿಸುವುದು, ರಾಜ್ಯದ ಗಡಿಗೆ ಸಂಬಂಧಿಸಿದಂತೆ ಮರಾಠಿಗರು ಮತ್ತೆ ಮತ್ತೆ ಮಾಡುತ್ತಿರುವ ಗದ್ದಲದ ಸದ್ದಡಗಿಸುವುದು, ಆಡಳಿತದ ಎಲ್ಲ ಹಂತಗಳಲ್ಲೂ ಮತ್ತು ಪ್ರಾಥಮಿಕ ಶಿಕ್ಷಣ ಮಾಧ್ಯಮವಾಗಿ ಕನ್ನಡದ ಬಳಕೆಯನ್ನು ಕಟ್ಟುನಿಟ್ಟುಗೊಳಿಸುವುದು, ನಮ್ಮ ಜಲಸಂಪನ್ಮೂಲದ ಬಳಕೆಗೆ ನೆರೆ ರಾಜ್ಯಗಳು ಒಡ್ಡುತ್ತಿರುವ ಅಡ್ಡಿ-ಆತಂಕಗಳನ್ನು ವಿಳಂಬವಿಲ್ಲದೆ ನಿವಾರಿಸಿಕೊಳ್ಳುವುದು, ನಮ್ಮ ನಾಡಿನ ರೈತರು ಅನುಭವಿಸುತ್ತಿರುವ ಕಷ್ಟಗಳ ನಿವಾರಣೆಗೆ ತಕ್ಷಣವೇ ನಿರ್ದಿಷ್ಟ ಪರಿಹಾರ ಕ್ರಮ ಕೈಗೊಳ್ಳುವುದು, ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಯೋಜಿತ ಕಾರ್ಯಕ್ರಮ ಜಾರಿಗೊಳಿಸುವುದು, ಅಷ್ಟೇ ಅಲ್ಲ, ಚುನಾವಣೆ ಭರವಸೆಗಳು ವಿರೋಧಪಕ್ಷದವುಗಳಾಗಿದ್ದರೂ, ಅವುಗಳಿಂದ ನಾಡಿಗೆ ಒಳ್ಳೆಯದಾಗುವುದಾದರೆ, ಯಾವುದೇ ಪೂರ್ವಗ್ರಹ ಇಟ್ಟುಕೊಳ್ಳದೆ, ಅವನ್ನು ಕಾರ್ಯಗತಗೊಳಿಸುವುದು – ಇವು ಈಗ ಅಧಿಕಾರಕ್ಕೆ ಬಂದಿರುವ ಭಾರತೀಯ ಜನತಾ ಪಕ್ಷದ ಸರ್ಕಾರವು ಪ್ರಧಾನವಾಗಿ ಗಮನ ಕೊಡಬೇಕಾದ ಅಂಶಗಳು.

ಈ ಸಂದರ್ಭದಲ್ಲಿ ವಿರೋಧ ಪಕ್ಷಗಳೂ ಸೇರಿದಂತೆ ಎಲ್ಲ ಜನ ಪ್ರತಿನಿಧಿಗಳಲ್ಲೂ ಒಂದು ಮನವಿ. ಬೇರೆ ರಾಜ್ಯಗಳಿಗೆ ಹೋಲಿಸಿದರೆ, ಎಲ್ಲ ದೃಷ್ಟಿಯಿಂದಲೂ ಮೇಲೆನಿಸುವ ಘನತೆ - ಗಾಂಭೀರ್ಯಗಳನ್ನು ಪಡೆದಿದ್ದ ಕರ್ನಾಟಕಕ್ಕೆ ಇತ್ತೀಚಿನ ರಾಜಕೀಯ ಚಟುವಟಿಕೆಗಳು ಒಂದು ರೀತಿಯಲ್ಲಿ ಕಳಂಕವುಂಟುಮಾಡಿವೆ. ಈ ಕಳಂಕವನ್ನು ನಿವಾರಿಸಿ, ಕರ್ನಾಟಕದ ರಾಜಕೀಯ ವ್ಯವಸ್ಥೆ ಒಂದು ಗೌರವದ ಸ್ಥಾನ ಪಡೆಯುವಂತೆ ಆಗಬೇಕು. ಇದಕ್ಕಾಗಿ ಪ್ರತಿಯೊಬ್ಬ ಜನಪ್ರತಿನಿಧಿಯೂ ವೈಯಕ್ತಿಕ ಅಥವಾ ಪಕ್ಷ ಪ್ರತಿಷ್ಠೆಗಳನ್ನು ಬಿಟ್ಟುಬಿಡಬೇಕು. ನಮ್ಮೆಲ್ಲರ ಧ್ಯೇಯ ಧೋರಣೆಗಳೂ 'ಕನ್ನಡ-ಕನ್ನಡಿಗ-ಕರ್ನಾಟಕ'ದ ಒಟ್ಟು ಕ್ಷೇಮಾಭ್ಯುದಯಕ್ಕೆ ಪೂರಕವಾಗಬೇಕು.

ಪ್ರಜಾಸತ್ತೆಯಲ್ಲಿ ಸರ್ಕಾರಗಳಿಗೆ ಜನವಿಶ್ವಾಸಕ್ಕಿಂತ ದೊಡ್ಡದು ಬೇರಾವುದೂ ಇಲ್ಲ.

**ಗೊ. ರು. ಚನ್ನಬಸಪ್ಪ**

*(''ಕನ್ನಡ ಗೆಳೆಯರ ಬಳಗ''ದ ಸಭೆಯಲ್ಲಿ ಮಂಡಿಸಿದ ಪ್ರಸ್ತಾವನೆ)*

### ಮೌಢ್ಯಾಧಾರಿತ ರಾಜಕಾರಣ

ದೇಶದ ಸ್ವಾತಂತ್ರ್ಯೋತ್ತರ ಅರವತ್ತು ವರ್ಷಗಳ ಇತಿಹಾಸದಲ್ಲಿ ಇತ್ತೀಚೆಗೆ ಮೂರನೇ ತಲೆಮಾರಿನ ಹೊಸ ರಾಜಕಾರಣಿಗಳು ಹೊರಹೊಮ್ಮುತ್ತಿರುವುದು ತುಸು ಕುತೂಹಲದ ಸಂಗತಿ. ಸ್ವಾತಂತ್ರ್ಯ ಗಳಿಸಲು ನಡೆಸಿದ ಆ ಕಾಲದ ಹೋರಾಟವಾಗಲಿ, ತ್ಯಾಗ-ಬಲಿದಾನಗಳಾಗಲಿ, ಗಾಂಧಿವಾದಿಗಳ ಮನೋಧರ್ಮವಾಗಲಿ ಇವರಲ್ಲಿ ನಿರೀಕ್ಷಿಸುವುದೂ ತಪ್ಪಾಗುತ್ತದೆ, ನಿಜ. ಏಕೆಂದರೆ ಇವರು ಸ್ವಾತಂತ್ರ್ಯೋತ್ತರ ಫಸಲು ಎಂಬ ಕಾರಣಕ್ಕೆ. ಆದರೂ, ದೇಶದ ಚರಿತ್ರೆಯ ಬಗೆಗೆ, ವಿವಿಧ ಜನಾಂಗೀಯ ಸಂಸ್ಕೃತಿಗಳ ಬಗೆಗೆ, ಸಮಕಾಲೀನ ತುರ್ತುಗಳ ಬಗೆಗೆ ಪ್ರಾಥಮಿಕ ಜ್ಞಾನವಾದರೂ ಇರಬೇಕಾದ್ದು ಅಪೇಕ್ಷಣೀಯವಲ್ಲವೆ ?

ಸ್ವಾತಂತ್ರ್ಯ ಗಳಿಸಿದ ಹೊಸದರಲ್ಲಿ ದೇಶವನ್ನು ಸನ್ಮಾರ್ಗದಲ್ಲಿ ನಡೆಸುವ ಆದರ್ಶವೇ ಆ ಕಾಲದ ರಾಜಕಾರಣಿಗಳ ಸದುದ್ದೇಶವಾಗಿತ್ತು. ಹೀಗಾಗಿ, ದೇಶದ ಮಾನವ ಸಂಪನ್ಮೂಲ ಮತ್ತು ಪ್ರಾಕೃತಿಕ ಸಂಪತ್ತಿನ ಸದ್ಬಳಕೆಯ ಕಡೆಗೇ ಅವರ ನಿಗಾ ಇದ್ದ ಪ್ರಯುಕ್ತ, ಆಗ ನೀರಾವರಿ, ಕೈಗಾರಿಕೋದ್ಯಮಗಳ ಸ್ಥಾಪನೆಯತ್ತ ಅವರ ಮೊದಲ ಆದ್ಯತೆಯಿತ್ತು. ನಂತರ ಬಂದ ಎರಡನೇ ತಲೆಮಾರಿನ ರಾಜಕಾರಣಿಗಳು ನಮ್ಮ ಕಣ್ಣೆದುರಿಗೇ ತೀರಾ ಸ್ವಾರ್ಥಿಗಳೂ ಅಧಿಕಾರ ಲಾಲಸೆಯುಳ್ಳವರೇ ಅಧಿಕವಾಗುತ್ತ ಬಂದರು.

ಸ್ವಾತಂತ್ರ್ಯದ ಹೊಸಿಲಿನಲ್ಲಿ ಅಧಿಕಾರ ಹಿಡಿದ ರಾಜಕಾರಣಿಗಳಿಗೆ ಕಲೆ-ಸಾಹಿತ್ಯ ಮೊದಲಾದ ಸಾಂಸ್ಕೃತಿಕ ವಾಹಕಗಳ ಸ್ಪರ್ಶವಿತ್ತು. ಆದುದರಿಂದಾಗಿಯೇ, ಗೋಖಲೆ, ಗಾಂಧಿ, ಪ್ರಸಾದ, ತಿಲಕ, ನೆಹರೂ, ಅಬುಲ್ ಕಲಾಮ್ ಆಜಾದ್, ಅಂಬೇಡ್ಕರ್, ರಾಜಾಜಿ, ರಾಧಾಕೃಷ್ಣನ್ ಮೊದಲಾದ ಮೊದಲು ತಲೆಮಾರಿನ ರಾಜಕಾರಣಿಗಳು ಬರೀ ರಾಜಕೀಯ ಮುತ್ಸದ್ದಿಗಳಾಗಿರಲಿಲ್ಲ. ಅವರೆಲ್ಲಾ ಸ್ವತಃ ಪ್ರಜ್ಞಾವಂತ ಓದುಗರೂ, ಬರಹಗಾರರೂ ಆಗಿದ್ದರೆಂಬುದನ್ನು ಮರೆಯುವಂತಿಲ್ಲ. ಅದರಿಂದಾಗಿ ಅವರ ವ್ಯಕ್ತಿತ್ವಕ್ಕೊಂದು ಗಾಂಭೀರ್ಯವಿತ್ತು, ವರ್ಚಸ್ಸಿತ್ತು. ಹೀಗಾಗಿ ಅವರು ಏರಿದ್ದ ಕುರ್ಚಿಗಳಿಗೆ ಅವರ ವ್ಯಕ್ತಿತ್ವದಿಂದಾಗಿ ಬೆಲೆ ಬರುತ್ತಿತ್ತು. ಈಗ ಹಾಗಲ್ಲ, ದೊಡ್ಡ ಕುರ್ಚಿಗಳಲ್ಲಿ ಸಣ್ಣ ಜನರು, ಇದೆಂಥಾ ವಿರೋಧಾಭಾಸ ?

ಆ ಕಾಲದ ರಾಜಕಾರಣಿಗಳಿಗೆ ಸಂಸ್ಕಾರಗೊಂಡ ಮನಸ್ಸಿತ್ತು. ಆ ಕಾರಣಕ್ಕಾಗಿಯೇ 'ರಾಜಕಾರಣ' ಎಂದರೆ ಆಗ ಬುದ್ಧಿಜೀವಿ - ಜನನಾಯಕರ ಆಡುಂಬೊಲ ಎನ್ನಿಸಿತ್ತು. ಕಾಲಕ್ರಮೇಣ ನಾಯಕ - ಮುಂದಾಳು ಪದಕ್ಕೆ

'ಪುಢಾರಿ' (ಚಿಲ್ಲರೆ ರಾಜಕಾರಣಿ) ಎಂಬ ಹೀನಾರ್ಥ ಪ್ರಾಪ್ತವಾಯಿತು. ಹೀಗಾಗಿಯೇ ಇಂದು ರಾಜಕಾರಣವೆಂದರೆ ಸ್ವಾರ್ಥಿಗಳು, ಕುತಂತ್ರಿಗಳು ನಡೆಸುವ ಆಕರ್ಷಕ ದಂಧೆಯಂತೆ ಆಗಿಹೋಗಿದ್ದು ಅತ್ಯಂತ ಬೇಸರದ ಸಂಗತಿ.

ಮಂತ್ರಿ ಎಂದರೆ 'ಆಲೋಚನೆ ಮಾಡುವವ' ಎಂಬ ವಿಶಾಲ ಅರ್ಥವಿದೆ. ಪ್ರಜಾಪ್ರಭುತ್ವದಲ್ಲಿ ಜನಾದೇಶ ಪಡೆದು ಆರಿಸಿ ಬರುವವರೆಲ್ಲರೂ ಈಗ ಮಂತ್ರಿಯಾಗುವ ಕನಸು ಕಾಣುತ್ತಾರೆ. ಮಂತ್ರಿಗಿರಿಯಿಲ್ಲದೆಯೂ ಜನಾನುರಾಗಿಯಾಗಿ ಜನಹಿತ ಕಾಯಲು ಸಾಧ್ಯವಿಲ್ಲವೆ, ಎಂಬ ಪ್ರಶ್ನೆ ನಮ್ಮನ್ನೀಗ ಕಾಡುತ್ತದೆ. ಅಪ್ರತಿಮ ಸ್ವಾರ್ಥಿಗಳಿಗೆ, ಸ್ವಜನ ಪಕ್ಷಪಾತಿಗಳಿಗೆ ಮಾತ್ರ ತಾನು ಪುನಃ ಆರಿಸಿ ಬರಲಾರೆನೆಂಬ ಭಯ ಕಾಡುತ್ತಿರುತ್ತದೆ. ಅದನ್ನು ನಿವಾರಿಸಿಕೊಳ್ಳುವದಕ್ಕಾಗಿಯೇ ಅಂಥವರು ಇಲ್ಲಸಲ್ಲದ ದುರ್ಮಾರ್ಗಕ್ಕೆ ಎಳಸುವುದುಂಟು. ಉಳಿದಂತೆ, ರಾಜಕಾರಣಕ್ಕೆ ತಗುಲಿದ ಕಳಂಕವನ್ನು ತೊಡೆದುಹಾಕಿ ರಾಜಕಾರಣಿಗೆ ಮತ್ತೆ ಗೌರವಯುತ ವ್ಯಕ್ತಿತ್ವ ತಂದುಕೊಡುವ ತರಬೇತಿ ಹೊಸ ತಲೆಮಾರಿನ ರಾಜಕಾರಣಿಗೆ ಬೇಕಾಗಿದೆ. ಅರ್ಥಾತ್, ರಾಜಕೀಯ ಮಾಡಲು ಯಾವ ಅರ್ಹತೆಯೂ ಬೇಕಾಗಿಲ್ಲ ಎಂಬ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಬೇಕಾಗಿದೆ.

ಇಷ್ಟೆಲ್ಲಾ ಯಾಕೆ ಹೇಳಿದೆನೆಂದರೆ, ಮೊನ್ನೆ ಹೊಸ ಸರ್ಕಾರ ಅಧಿಕಾರ ಗ್ರಹಣದ ದಿನ ವಿಧಾನಸೌಧದ ಮುಂದೆ ಭಾರೀ ಪ್ರಮಾಣದ ಜನಸಂದಣಿ, ಸಂತಸ - ಸಂಭ್ರಮದ ಆಚರಣೆ. ಎಲ್ಲವೂ ಸರಿ. ಇರಬೇಕಾದದ್ದೇ. ಆದರೆ, ಪ್ರಜಾಪ್ರಭುತ್ವ ಎಂದ ಮೇಲೆ ಜನಾದೇಶದ ಪ್ರಕಾರ ಆಯ್ಕೆಯಾಗಿ ಬಂದ ಪ್ರಭುಗಳು ಹೆಜ್ಜೆಹೆಜ್ಜೆಗೂ ರಾಹುಕಾಲ, ಗುಳಿಕ ಕಾಲಗಳನ್ನು ಎದುರುನೋಡುತ್ತ ಮೌಢ್ಯವನ್ನೇ ಅನುಸರಿಸುತ್ತಿದ್ದದ್ದು ಮೋಜಿನದಾಗಿತ್ತು.

ಸಂವಿಧಾನದ ಪ್ರಕಾರ ಸತ್ಯ-ನಿಷ್ಠೆ ಹಾಗೂ ಭಗವಂತನ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸಬಹುದು ಎಂದಿದೆ. ಆದರೆ, ಈ ಬಾರಿ ಅಧಿಕಾರಕ್ಕೆ ಬಂದ ಹೊಸ ಸರ್ಕಾರದ ಶಾಸಕ ಮಹಾನುಭಾವರು ಪ್ರಮಾಣವಚನ ಸ್ವೀಕರಿಸುವಾಗ ಕೆಲವರಿಗೆ ತಿರುಪತಿ ತಿಮ್ಮಪ್ಪ, ಇನ್ನು ಕೆಲವರಿಗೆ ತಮ್ಮೂರ ಮಾಯಮ್ಮ, ದುರುಗಮ್ಮ, ಗಣಪತಿ, ಚೆನ್ನಕೇಶವ ಮತ್ತೆ ಕೆಲವರಿಗೆ ಬಸವಣ್ಣ, ಮಹಾವೀರ, ಶಿವಾಜಿ, ಚೆನ್ನಮ್ಮ ನೆನಪಾದರು. ಚಿಕ್ಕಮಗಳೂರಿನ ಶಾಸಕನಿಗಂತೂ ದತ್ತಪೀಠ ಬಿಟ್ಟರೆ ಬೇರೇನೂ ನೆನಪಾಗಲಿಲ್ಲ. ಮತ್ತೆ ಕೆಲವರಿಗೆ ನೇರವಾಗಿ ತಮ್ಮನ್ನು ಗೆಲ್ಲಿಸಲು ಕಾರಣಕರ್ತರಾದ ಧಣಿಗಳನ್ನು ಇಲ್ಲಾ ಪಕ್ಷದ ನಾಯಕನನ್ನು ಓಲೈಸುವ ತೆರದಲ್ಲಿ ಅವರ ಹೆಸರಿನಲ್ಲೇ ಆಣೆ (ಪ್ರಮಾಣ) ಮಾಡಿ ಸ್ವಾಮಿ ನಿಷ್ಠೆ (ಶ್ವಾನ ನಿಷ್ಠೆ?) ಮೆರೆದಿದ್ದು ಮುಜುಗರ ಹುಟ್ಟಿಸುವಂತಿತ್ತು. ವ್ಯಕ್ತಿಗಳ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸಿದ್ದು ವ್ಯಕ್ತಿಪೂಜೆಯ ಪರಾಕಾಷ್ಠತೆ ಎಂಬ ಅರಿವು ನಮ್ಮ ಜನನಾಯಕರಿಗೆ ಹೊಳೆಯಲೇ ಇಲ್ಲವೆ? ಪ್ರಜಾತಂತ್ರದಲ್ಲಿ ಅದು ಸದನಗಳ ಪಾವಿತ್ರ್ಯತೆಗೆ ಅಪಚಾರ ಬಗೆದಂತೆ ಎಂಬುದನ್ನು ಹಿರಿಯ ರಾಜಕಾರಣಿಗಳಾದರೂ ತಿಳಿಸಿ ಹೇಳಬೇಕಾಗಿತ್ತು.

ಅಷ್ಟೇ ಸಾಲದಂತೆ, ಭಾವೀ ಮಂತ್ರಿಗಳಲ್ಲಿ ಹಲವರು ಪ್ರಮಾಣ ವಚನ ಸ್ವೀಕರಿಸಿದ ಒಡನೆ ತಮ್ಮ ಆತ್ಮಗೌರವ ಒತ್ತೆ ಇಟ್ಟವರಂತೆ ಸೀದಾ ನಾಯಕನ ಕಾಲಿಗೆ ಹಾಗೂ ಅಲ್ಲೇ ಇದ್ದ ಶಾಸಕಿಯ ಕಾಲಿಗೆ ಎರಗಿದ್ದು ಅಸಹ್ಯ ತರಿಸುವಂತಿತ್ತು. ಹಿಂದೆ, ತಮಿಳುನಾಡಿನಲ್ಲಿ ಮುಖ್ಯಮಂತ್ರಿಯಾಗುವ ಅನಾಮತ್ತು ಅವಕಾಶ ಒದಗಿದ್ದಕ್ಕೆ ಪನ್ನೀರ್ ಸೆಲ್ವಂ ಎಂಬ ಶಾಸಕ ಜಯಲಲಿತಮ್ಮಾಳ್ ಪಾದಕ್ಕೆ ಶಿರಸಾಷ್ಟಾಂಗ ನಮಸ್ಕಾರ ಹಾಕಿದ್ದು ನೆನಪಾಯಿತು. ನಮ್ಮ ಶಾಸಕರು ಸ್ವಂತ ವ್ಯಕ್ತಿತ್ವ ಮರೆತು ಹೀಗೆ ತೊಗಲು ಗೊಂಬೆಗಳಂತೆ ವರ್ತಿಸುವ ಅಗತ್ಯವಿದೆಯೆ? ಮತದಾನ ಮಾಡುವ ಪರಮಾಧಿಕಾರದ ಮೂಲಕ 'ತಲೆ ಎತ್ತಿ ನಡೆದುಕೊಳ್ಳಿರಿ' ಎಂದು ಅಪ್ಪಣೆ ಕೊಟ್ಟ ಕೋಟಿ ಕೋಟಿ ಮತದಾರ ಪ್ರಭುಗಳಿಗೆ ಇದು ಅವಮಾನ ಎಸಗಿದಂತಲ್ಲವೆ? ಕುಂಕುಮ ಮೆತ್ತಿಕೊಳ್ಳುವವರನ್ನು ಕಂಡರೇ ಅನಾಗರಿಕ ಕಾಲದ - ಮಾರೀ ಹಬ್ಬದ ಸಡಗರದಲ್ಲಿ ತೊಡಗಿಕೊಂಡವರಂತೆ ತೋರುವ ಮೂಲಕ, ಬಹುಸಂಸ್ಕೃತಿಯ ನಮ್ಮ ದೇಶ ಇನ್ನೂ ಯಾವ ಶತಮಾನದಲ್ಲಿದೆಯೆಂಬ ಅನುಮಾನ ಕಾಡುವಂತೆ ನಡೆದುಕೊಳ್ಳುವುದು ತರವೆ?

ಖುರ್ಚಿ ಪೂಜೆಯಿಂದ ಹಿಡಿದು ವಿಧಾನಸೌಧದ ಕೊಠಡಿ ಆಯ್ಕೆಯ ತನಕ (ತಾವೇ ಗೂಟ ಹೊಡೆದು ಕೊಂಡು ಕೂರುವವರ ತರಹ) 'ವಾಸ್ತು' ಎಂಬ ಅವಾಸ್ತವ ಸಂಗತಿಗಳಿಗೆ ಶರಣಾದದ್ದು; ಯಾವನೋ ಒಬ್ಬ ತಲೆಮಾಸಿದವ ತಮ್ಮ ಬೇಳೆ ಬೇಯಿಸಿ ಕೊಳ್ಳುವುದಕ್ಕಾಗಿಯೇ ಆಳುವವರ ತಲೆಯೊಳಗೆ ಹಾಕುವ ಹುಳ ಇಷ್ಟೊಂದು ಕಾಡುತ್ತಿದೆ. ಎಲ್ಲ ಬಿಟ್ಟು ಬರೀ ಜ್ಯೋತಿಷಿಗಳು ಹೇಳಿದಂತೆಯೇ ನಡೆದುಕೊಂಡಿರಬಹುದಿತ್ತು! ಚುನಾವಣೆಯಾದರೂ ಯಾಕೆ ಬೇಕಾಗಿತ್ತು? ಸಾರ್ವಜನಿಕ ರಂಗದಲ್ಲಿ ಎತ್ತರದ ಸ್ಥಾನ ತಲುಪಿದವರು ಅಷ್ಟೇ ಉನ್ನತ ಮೌಲ್ಯಗಳನ್ನು ಹೊಂದಿರಬೇಕೆಂಬುದು ಅಪೇಕ್ಷಣೀಯವಲ್ಲವೆ? ಮರ ಹತ್ತಿದವರ ಕುಂಡಿ ಕೆಳಗಿದ್ದವರಿಗೆಲ್ಲ ಕಾಣುತ್ತದೆಂಬ ಎಚ್ಚರ ಅವರಿಗಿರಬೇಕಾಗುತ್ತದೆ.

ಹಿಂದೊಮ್ಮೆ ನೆರೆಯ ಆಂಧ್ರದಲ್ಲಿ ಜ್ಯೋತಿಷಿಯೊಬ್ಬ ಸೀರೆ ಸುತ್ತಿಕೊಳ್ಳಲು ಸೂಚಿಸಿದ್ದನ್ನು ಮಾನ್ಯ ಮುಖ್ಯಮಂತ್ರಿ ಶಿರಸಾವಹಿಸಿ ಪಾಲಿಸಿ ಸುದ್ದಿಯಾಗಿದ್ದರು. ಅಂತೆಯೇ ಹೆಸರು ಬದಲಾಯಿಸಿಕೊಳ್ಳಲು ತಿಳಿಸಿದ್ದಕ್ಕೆ ಕರ್ನಾಟಕದ ರಾಜಕಾರಣಿಗಳನೇಕರು ಚಾಚೂ ತಪ್ಪದೆ ಹೆಸರು ಬದಲಾಯಿಸಿಕೊಂಡರು. ಮುಂದೊಂದು ದಿನ ಯಾರೋ ನಗೆಕೋರ 'ಲಿಂಗ ಬದಲಾಯಿಸಿಕೊಳ್ಳಿರಿ' ಎಂದೇನಾದರೂ ನುಡಿದರೆ ಗತಿ?

ಹಿಂದೆ, ಅಧಿಕಾರದಲ್ಲಿದ್ದ ಮಾಜೀ ಪ್ರಧಾನಿ ಮತ್ತವರ ಮಕ್ಕಳು ಮಾತ್ರ ಹವನ-ಹೋಮಗಳಲ್ಲಿ ಮುಳುಗಿದ್ದಾರೆಂದು ವರದಿಯಾಗುತ್ತಿದ್ದವು. ಯಾರು ಬಂದರೂ ಅಷ್ಟೇ. ಇದು ಸಾರ್ವಕಾಲಿಕ ರೋಗವೆಂದು ಕಾಣುತ್ತದೆ. ನಮ್ಮ ರಾಜಕಾರಣಿಗಳಿಗೆ 'ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳಿರಿ' ಎಂದು ತಿಳಿಹೇಳುವ ಧಾರ್ಷ್ಟ್ಯ ಯಾರಿಗಿದೆ? ತಮ್ಮ ಕರ್ತೃತ್ವ ಶಕ್ತಿಯ ಮೇಲೆ ತಮಗೇ ಪೂರ್ಣ ವಿಶ್ವಾಸವಿಲ್ಲದ ದುರ್ಬಲ ಮನಸ್ಸುಗಳು ಮಾತ್ರ ಹಾಗೆ ಯಾವುಯಾವುದೋ ಅಬದ್ಧ ಆಚರಣೆಗಳಿಗೆ ಆತುಗೊಳ್ಳುತ್ತವೆಂದು ಮನೋವಿಜ್ಞಾನ ಹೇಳುತ್ತದೆ. ಇದೆಂಥಾ ಅವಲಕ್ಷಣ? ಪ್ರಜಾಪ್ರಭುತ್ವದ ಅಣಕ! ನಮ್ಮ ಸಂವಿಧಾನ ಸಾರುವ ಧರ್ಮನಿರಪೇಕ್ಷ– ಜಾತ್ಯತೀತ ಮನೋಭಾವ ತಳೆಯಬೇಕಾದ ರಾಜಕೀಯ ಧುರೀಣರ ಈ ತೆರನಾದ ನಡೆವಳಿಗಳು; ಬಾಪ್‌ರೇ! ನಮ್ಮ ಶಿಕ್ಷಣ, ಜನರನ್ನು ವಿಚಾರವಂತರನ್ನಾಗಿ ಮಾಡದೆ ಹೋದದ್ದು; ಸಾರ್ವಜನಿಕ ಜೀವನದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ಸಂಸ್ಕಾರ ನೀಡದೆ ಹೋದದ್ದು ನಮ್ಮ ಕಾಲದ ವಿಷಾದಪರ್ವವೆನ್ನದೆ ಗತ್ಯಂತರವಿಲ್ಲ.

ಬೆಂಗಳೂರು **ಈರಪ್ಪ ಎಂ. ಕಂಬಳಿ**

**ರಾಜ್ಯಮಟ್ಟದ ಕವನ ಸಂಕಲನ : ಕವನಗಳಿಗೆ ಆಹ್ವಾನ**

ಜನಪ್ರಿಯ ಪ್ರಕಾಶನವು ರಾಜ್ಯಮಟ್ಟದ ಕವನ ಸಂಕಲನವೊಂದನ್ನು ಹೊರತರಲು ನಿರ್ಧರಿಸಿದ್ದು ಆಸಕ್ತ ಬರಹಗಾರರಿಂದ ಕವನಗಳನ್ನು ಆಹ್ವಾನಿಸಿದೆ. ಕವನಗಳು ಸ್ವರಚಿತವಾಗಿದ್ದು, ಹಾಳೆಯ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು ಅಥವಾ ಅಚ್ಚುಕಟ್ಟಾಗಿ ಟೈಪ್ ಮಾಡಿರಬೇಕು. ಪ್ರತಿಯೊಬ್ಬರು ಒಂದರಿಂದ ಹತ್ತು ಕವನಗಳನ್ನು ಕಳುಹಿಸಬಹುದು.

ಆಸಕ್ತರು ತಮ್ಮ ಕವನಗಳ ಜೊತೆಗೆ ಇತ್ತೀಚಿನ ಭಾವಚಿತ್ರ ಲಗತ್ತಿಸಿ ೨೦/- ರೂ. ಪ್ರವೇಶ ಶುಲ್ಕದೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

ಸಂಪಾದಕರು/ಪ್ರಕಾಶಕರು, ನಾಗಶೆಟ್ಟಿ ಪಾಟೀಲ್ ಗಾದಗಿ, ಜನಪ್ರಿಯ ಪ್ರಕಾಶನ, ಪಿ.ಬಿ. ನಂ. ೬೪, ಮ. ನಂ. ೬-೪-೩೪, ತೇಲಿ ಗಲ್ಲಿ, ಗವಾನ ಚೌಕ್, ಬೀದರ - ೫೮೫ ೪೦೧. ಹೆಚ್ಚಿನ ಮಾಹಿತಿಗಾಗಿ ಮೊಬೈಲ್ ಸಂಖ್ಯೆ ೯೨೪೨೮೧೬೨೮೨.

### ಕಣಿವೆ ದಾರಿ ಹಿಡಿದ ಕರ್ನಾಟಕ ಚುನಾವಣೆ

ಚುನಾವಣೆಯು ಪ್ರಜಾತಂತ್ರ ವ್ಯವಸ್ಥೆಯ ಒಂದು ಪ್ರಧಾನ ಅಂಗ, ನಾಗರಿಕ ಸರ್ಕಾರವನ್ನು ನಾಗರಿಕರೇ ಆಯ್ಕೆ ಮಾಡಿಕೊಳ್ಳುವ ಸರ್ವೋತ್ತಮ ವಿಧಾನ. ನಮ್ಮನ್ನು ಪ್ರತಿನಿಧಿಸುವ ವ್ಯಕ್ತಿಯಲ್ಲಿರಬೇಕಾದ ಸಾಮಾಜಿಕ ಕಾಳಜಿ, ಕ್ರಿಯಾಶೀಲ ವ್ಯಕ್ತಿತ್ವ, ಜಾತ್ಯತೀತ ಮನೋಭಾವ, ಪ್ರಜಾತಂತ್ರ ಗೌರವಿಸುವ ನಿಷ್ಠೆಯೇ ಮೊದಲಾದ ಸಕಾರಾತ್ಮಕ ಗುಣಗಳಿಗೆ ನೀಡುವ ಆದ್ಯತೆಯೂ ಹೌದು. ಬಹುಸಂಸ್ಕೃತಿಯ ಒಕ್ಕೂಟ ದೇಶದಲ್ಲಿ ತನ್ನದೇ ಆದ ವೈಶಿಷ್ಟ್ಯ ಮೆರೆದಿರುವ ಕರ್ನಾಟಕದಲ್ಲಿ ಸಮಸ್ಯೆಗಳಿಗೇನು ಕೊರತೆಯಿಲ್ಲ. ನಿರೀಕ್ಷೆಗಳಿಗೇನೂ ಬರವಿಲ್ಲ. ವರ್ತಮಾನದ ಕರ್ನಾಟಕ ಆರ್ಥಿಕವಾಗಿ, ಶೈಕ್ಷಣಿಕವಾಗಿ, ತಾಂತ್ರಿಕವಾಗಿ ಉನ್ನತಿಗೊಂಡಿದ್ದರೂ ಕೂಡ ಸಾಮಾಜಿಕವಾಗಿ, ಮೌಲಿಕವಾಗಿ ಕುಂದಿದೆ, ಮಾತ್ರವಲ್ಲ ಕುಸಿದಿದೆ. ಮಿತಿಮೀರಿದ ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ರಾಜಕೀಯ ಮೇಲಾಟದಿಂದ ಮಾದರಿ ರಾಜ್ಯವಾಗಲಿಲ್ಲ. ಇಂಥ ಆತಂಕಕಾರಿ ಸಂದರ್ಭದಲ್ಲಿ ಎದುರಾದ ಸಾರ್ವತ್ರಿಕ ಚುನಾವಣೆ ಆಳುವ ಜನಕ್ಕೆ ಎಚ್ಚರಿಕೆಯ ಗಂಟೆಯಾಗಬೇಕಿತ್ತು. ಆದರೆ ಈ ಚುನಾವಣೆಯಲ್ಲಿ ಜಾತಿ - ಮತ - ಹಣದೆದುರು ಮತದಾರರು ಎಡವಿದ್ದು ಮಾತ್ರ ಸತ್ಯ.

ಸ್ವಾತಂತ್ರ್ಯಾನಂತರದಲ್ಲಿ ಕಂಡುಬಂದ ಜಾತಿ ಪ್ರಧಾನ ಚುನಾವಣೆ ಎಂಬ ಅಭಿಧಾನಕ್ಕೆ ಈ ಚುನಾವಣೆ ನಿದರ್ಶನವಾಯಿತು. ಈವರೆವಿಗೂ ಗುಪ್ತ ಹಾಗೂ ಗೌಣವೆನಿಸಿದ್ದ ಜಾತಿ ಮತಗಳು ಧುತ್ತನೆ ತಲೆ ಎತ್ತಿ ಜನತಂತ್ರ ಪ್ರೇಮಿಗಳು ತಲೆ ತಗ್ಗಿಸುವಂತೆ ಆಯಿತು. ಇಡೀ ಕರ್ನಾಟಕದಲ್ಲಿ ಎರಡು ಮೂರು ಬಲಾಢ್ಯ ಕೋಮಿನವರು ಒಂದೊಂದು ರಾಜಕೀಯ ಪಕ್ಷಕ್ಕೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡರು. ಇವರೆಲ್ಲರ ಗುರಿ ಒಂದೇ : ತಮ್ಮ ಜನಾಂಗದ ವ್ಯಕ್ತಿ ಅಧಿಕಾರದ ಕುರ್ಚಿ ಹಿಡಿದು, ಆಳಬೇಕೆಂಬ ಹಟಮಾರಿತನಕ್ಕೆ ಬಿದ್ದವರಂತೆ ವರ್ತಿಸುವುದು. ಇವರ ಈ ವರ್ತನೆಗೆ ರಾಜಕಾರಣಿಗಳ ಕುತ್ಸಿತ ರಾಜಕೀಯವೂ ಪ್ರೇರಕ ಶಕ್ತಿಯಾಯಿತು. ಜಾತಿ ಅಮಲೇರಿಸಿಕೊಂಡವರೊಂದಿಗೆ ಹಣದ ಹೊಳೆಯೂ ಕೂಡಿಕೊಂಡಿತು. ಇದೇ ಸಂದರ್ಭದಲ್ಲಿ ಕೆಲವು ಪೀಠಾಧಿಪತಿಗಳೂ ಕೂಡ ತಮ್ಮ ಸಾಮಾಜಿಕ ಶ್ರೇಷ್ಠತೆಯನ್ನು ಮರೆತು ಮತೀಯವಾದಿಗಳಿಗೆ ಶಕ್ತಿಯಾಗಿ ನಿಂತು ತಮ್ಮನ್ನು ತಾವೇ ಬೆತ್ತಲೆಗೊಳಿಸಿಕೊಂಡಿದ್ದು

ಪ್ರಜಾತಂತ್ರದ ಅಣಕಗಳಲ್ಲಿ ಒಂದಾಯಿತು. ಇಂಥ ಸಂದರ್ಭದಲ್ಲಿ ಅಲ್ಪಸಂಖ್ಯಾತರು, ಸಣ್ಣ ಪುಟ್ಟ ಜಾತಿ ಜನಾಂಗದವರು ದಿಕ್ಕು ತೋಚದೆ ಚದುರಿ ನಿಂತರು. ವಿಚಾರವಂತರು ಮೌನವಹಿಸಿದರು.

ಚುನಾವಣಾ ಪ್ರಣಾಳಿಕೆಗಳು ಜಾಹಿರಾತುಗಳಂತೆ ರೋಮಾಂಚನಗೊಳಿಸಿದವು. ಎಲ್ಲ ಪಕ್ಷಗಳೂ ಎಗ್ಗಿಲ್ಲದೆ ಭರವಸೆಗಳ ಮಹಾಪೂರ ಹರಿಸಿದವು. ಪ್ರಣಾಳಿಕೆಗಳು ಈ ನಾಡಿನಲ್ಲಿ ಎಂದೂ ಪ್ರಶ್ನಾರ್ಹವಾಗಿಲ್ಲ ಎಂಬುದನ್ನು ಮನಗಂಡೇ ಈ ರೀತಿ ಅಂಗೈಯಲ್ಲಿ ಅರಮನೆ ತೋರಿಸಿದವು. ಸಂಪನ್ಮೂಲಗಳ ಕ್ರೋಡೀಕರಣವಿಲ್ಲದೆ ತಮ್ಮ ಪ್ರಣಾಳಿಕೆಯಲ್ಲಿನ ಭರವಸೆ ಪೂರೈಸಲು ಸಾಧ್ಯವಿಲ್ಲ. ಹೀಗಾಗಿ ರಾಜಕೀಯ ಪಕ್ಷಗಳು ಅಧಿಕಾರಕ್ಕಾಗಿ ಏನೆಲ್ಲ ಭ್ರಮೆ ಮೂಡಿಸಬಲ್ಲವೆಂಬುದಕ್ಕೆ ಪ್ರಣಾಳಿಕೆಗಳೇ ಸಾಕು. ಹಾಳಾದ ರಸ್ತೆ, ಕುಡಿಯೋ ನೀರಿನ ಕೊರತೆ, ನಿರುದ್ಯೋಗ ಬವಣೆ, ರೈತರಿಗೆ ಉತ್ತಮ ಮಾರುಕಟ್ಟೆ ಅಭಾವ, ಆಡಳಿತದಲ್ಲಿ ಬೇರುಬಿಟ್ಟಿರುವ ಭ್ರಷ್ಟಾಚಾರಗಳನ್ನು ತೊಡೆದುಹಾಕುವುದನ್ನು ಜನ ಬಯಸಿದ್ದರೇ ಹೊರತು, ಬಣ್ಣದ ಟಿ.ವಿ., ಪುಕ್ಕಟೆ ಕರೆಂಟ್, ಎಲ್ಲಾ ರೈತರ ಸಾಲ ಮನ್ನಾ ಮುಂತಾದ ಬೇಡಿಕೆಗಳನ್ನು ಯಾವ ಮತದಾರರೂ ಮುಂದಿಟ್ಟಿರಲಿಲ್ಲ. ಕಾಡುತ್ತಿರುವ ವಾಸ್ತವಿಕ ಸಮಸ್ಯೆಗಳನ್ನು ಮರೆಮಾಚಿ, ಭರವಸೆಗಳ ಕನಸಿನಲ್ಲಿ ಮೈಮರೆಯುವಂತೆ ಮಾಡಿ ಮತದಾರರ ಮೌಢ್ಯತೆಯನ್ನು ದುರುಪಯೋಗಪಡಿಸಿಕೊಂಡರು.

ರಾಜಕಾರಣಿಗಳು ಟಿಕೇಟಿಗಾಗಿ ತುಳಿದ ಹಾದಿ ತಲೆತಗ್ಗಿಸುವಂತಿತ್ತು. ತತ್ವ ನಿಷ್ಠೆ, ಪಕ್ಷ ನಿಷ್ಠೆ, ಪ್ರಜಾನಿಷ್ಠೆ, ಜನತಂತ್ರ ನಿಷ್ಠೆಗಿಂತ ಕುರ್ಚಿ ನಿಷ್ಠೆಯೇ ಮುಖ್ಯವೆಂದು ಸಾಬೀತುಗೊಳಿಸಿದರು. ಜಾತ್ಯತೀತವಾದಿಗಳು ಯಾರು, ಜಾತಿವಾದಿಗಳು ಯಾರು ಎಂದು ಗುರುತು ಹಚ್ಚಲಾರದಂತೆ ಪಕ್ಷಾಂತರಗೊಂಡು ಬೆತ್ತಲಾದರು. ಯಾವ ಪಕ್ಷವಾದರೇನು, ಯಾವ ಕ್ಷೇತ್ರವಾದರೇನು ಕುರ್ಚಿ ಗಿಟ್ಟಿಸುವುದೇ ತಮ್ಮ ಜೀವನದ ಪರಮ ಧ್ಯೇಯ ಎಂದು ಬಗೆದರು. ಇಂತಹವರಿಂದ ಪ್ರಜಾತಂತ್ರಕ್ಕೆ ನೆಲೆ-ಬೆಲೆ ಸಿಕ್ಕೀತು ಹೇಗೆ? ಸ್ಥಳೀಯ ಸಮಸ್ಯೆಗಳ ಅರಿವಿಲ್ಲದವರು, ಸ್ಥಳೀಯರೊಂದಿಗೆ ಸಂಬಂಧವಿಲ್ಲದವರೂ ಕೂಡ ಕೆಲವು ಹೊಸ ಕ್ಷೇತ್ರಗಳಲ್ಲಿ ಸ್ಪರ್ಧಿಸಿದ್ದುಂಟು. ಇವರಲ್ಲಿ ಸೇವಾ ಪ್ರಜ್ಞೆ ಇರುವವರಿಗಿಂತ ಇಲ್ಲದವರೇ ಹೆಚ್ಚಿದ್ದರು. ಜಾತಿಬಲ, ಹಣಬಲ, ತೋಳ್ಬಲದ ಹಿನ್ನೆಲೆ ಇದ್ದರೆ ಸಾಕು ಆರಾಮವಾಗಿ ಗೆದ್ದು ಬರುತ್ತೇವೆಂಬ ಹುಂಬುತನಕ್ಕೆ ಜೋತುಬಿದ್ದರು. ಇವರಿಗೆ ಯಾವ ಮೌಲ್ಯಗಳೂ ಮುಖ್ಯವಾಗಲಿಲ್ಲ. ಯಾವ ಆದರ್ಶಗಳೂ ಮಾದರಿಯಾಗಲಿಲ್ಲ. ಯಾವ ತತ್ವ ನಿಷ್ಠೆಗಳೂ ಬೇಕಾಗಲಿಲ್ಲ. ಒಟ್ಟಾರೆ ಜಾತಿ ಅಫೀಮಿನೊಂದಿಗೆ ರಿಯಲ್ ಎಸ್ಟೇಟ್ ಹಾಗೂ ಗಣಿ ಧಣಿಗಳ ಮದಿರೆ ಸೇರಿಕೊಂಡು ಜನತಂತ್ರ ವ್ಯವಸ್ಥೆ ನಲುಗಿತು. ಇನ್ನಾದರೂ ಅಧಿಕಾರದ ಗದ್ದುಗೆ ಹಿಡಿದಿರುವ ಪಕ್ಷ ತನ್ನ ಪ್ರಣಾಳಿಕೆಗೆ ಬದ್ಧವಾಗದೆ, ಪ್ರಜಾತಂತ್ರವನ್ನು ಬಿಗಿಗೊಳಿಸದೆ, 'ಕಿಂಗ್ ಮೇಕರ್'ಸ್ ಕೈ ಗೊಂಬೆಯಾದರೆ ಅಪಾರ ಬೆಲೆ ತೆರಬೇಕಾಗುತ್ತದೆ. ಏಕೆಂದರೆ ಲಾಭಕೋರತನದ ರಿಯಲ್ ಎಸ್ಟೇಟ್ ಮತ್ತು ಗಣಿ ದೊರೆಗಳ ಕೃಪೆಗೊಳಗಾಗಿರುವ ಸರ್ಕಾರ ಶ್ರೀಸಾಮಾನ್ಯರ ಬವಣೆ ನೀಗುವುದೆಂದು ನಿರೀಕ್ಷಿಸುವುದು ತೋಳದ ಕಾವಲಿನಲ್ಲಿ ಕುರಿಮಂದೆ ಸುರಕ್ಷಿತವಾಗಿರುತ್ತದೆ ಎಂದು ಭ್ರಮಿಸಿದಂತೆ ಎಂಬುದು ಎಲ್ಲರ ಆತಂಕವಾಗಿದೆ.

ತುಮಕೂರು **ಡಾ॥ ಸೋ. ಮು. ಭಾಸ್ಕರಾಚಾರ್**

### ಜೂನ್ ಸಂಚಿಕೆ

'ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು' ಎಂಬ ಮೂಲ ಮಂತ್ರವನ್ನು ನೆನಪಿಸುವ ಮುಖಪುಟ ಚಿತ್ರದೊಡನೆ ಮೂಡಿ ಬಂದ 'ಹೊಸತು' ಬಹಳ ಚೆನ್ನಾಗಿತ್ತು. 'ಈ ತಿಂಗಳು' ಸಮಯೋಚಿತ. ಶಾಂತರಸರ ಲೇಖನ ಸಂಗ್ರಹಯೋಗ್ಯ. ರಾಮಾಯಣಗಳ ಬಗ್ಗೆ ಎ.ಕೆ.ರಾಮಾನುಜನ್‌ರವರು ವೈವಿಧ್ಯಮಯವಾಗಿ ತಿಳಿಸಿದ್ದಾರೆ. ಮಾತುಗಾರಿಕೆಯ ಗತ್ತು ಗೈರತ್ತು ವಿಚಾರ ಓದಿ ತುಂಬಾ ನಗು ಬಂತು. 'ವಾಸ್ತವ' ಚಿಕ್ಕದಿದ್ದರೂ ನಿಗೂಢವಾಗಿದೆ. 'ಒಂದಾನೊಂದು ಕಾಲದಲ್ಲಿ' ಕವನ ತುಂಬಾ ಅರ್ಥಪೂರ್ಣವಾಗಿತ್ತು. ಅಮೃತಾ ಪ್ರೀತಂರವರ 'ಪಿಂಜರ್'ನ ವಿಚಾರವನ್ನು ಡಾ॥ ಶೈಲಾರವರು ತುಂಬಾ ಮನಮುಟ್ಟುವಂತೆ ತಿಳಿಸಿದ್ದಾರೆ. ಖಾದಿಯಿಂದ ಆರೋಗ್ಯ ಎಂಬ ವಿಚಾರ ತಿಳಿಯಬೇಕು. ಸಂಬಂಧ ಸೂಚಿ ಹೆಸರುಗಳು ನಿಜವಾದ ಅನುಭವದ ಮಾತುಗಳು. ಒಟ್ಟಿನಲ್ಲಿ 'ಹೊಸತು' ಉತ್ತಮ ವಿಚಾರಗಳನ್ನು ನೀಡುತ್ತಿರುವುದು ಸಂತಸದ ವಿಚಾರ.

ಪಾಂಡವಪುರ **ಅ. ಮೃತ್ಯುಂಜಯ**

ಎ. ಕೆ. ರಾಮಾನುಜನ್‌ರವರ 'ಮೂನ್ನೂರು ರಾಮಾಯಣಗಳು' ಪ್ರೊ॥ ಮಹಾಬಲೇಶ್ವರ ರಾವ್ ಅವರ ಮೂಲಕ ಉತ್ತಮವಾಗಿ ಅನುವಾದಿತವಾಗಿ ಮೂಡಿ ಬಂದಿದೆ. ರಾಮಾಯಣದ ಕತೆಗಳು ಎಂದಿಗೂ ಜನಪ್ರಿಯ. ಜಾನಪದದಲ್ಲಂತೂ 'ರಾಮ' ಎಲ್ಲರ ಕಣ್ಮಣಿ. ಇಂತಹ 'ರಾಮಾಯಣ'ದ ಹಲವು ಹತ್ತು ವಿಭಿನ್ನ ಮುಖಗಳನ್ನು ಓದುಗರಿಗೆ ಎ.ಕೆ. ರಾಮಾನುಜನ್ ಯಶಸ್ವಿಯಾಗಿ ಪರಿಚಯಿಸಿದ್ದಾರೆ. ಲೇಖನ ಹೊಸ ಅನುಭವವನ್ನು ನೀಡಿತು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಪತ್ರಿಕೆಯ ಒಟ್ಟಂದದ ಬಗ್ಗೆ ಹೇಳುವುದಾದರೆ ಪುಟ ವಿನ್ಯಾಸ ಮತ್ತು ಅಕ್ಷರದ ಫಾಂಟ್ ಗಾತ್ರದಲ್ಲಿ ಸ್ವಲ್ಪ ಬದಲಾವಣೆ ಅಪೇಕ್ಷಣೀಯವಾದಿತು. ಅದೇ ಸಂದರ್ಭದಲ್ಲಿ ಮಾಸದ ಕತೆ / ಕಾವ್ಯ / ಲೇಖನ / ಬರಹಗಳೆಂಬ ಅಭಿಧಾನ ನೀಡಿ ಪ್ರಕಟಿಸಿದರೆ ಬರಹಗಾರ ಹಾಗೂ ಓದುಗರ ನಡುವೆ ವಿಶೇಷ ಆಸಕ್ತಿ-ಕುತೂಹಲ ಬೆಸೆಯಬಹುದು.

ಉಡುಪಿ ಜಿಲ್ಲೆಯ ಇತಿಹಾಸ ಕುರಿತಾದ ಕೆ. ಶ್ರೀಧರ ಭಟ್ ಅವರ ಬರೆಹ ಲೇಖಕರಿಗೆ ಇತಿಹಾಸದ ಬಗೆಗಿರುವ ಅದಮ್ಯ ಉತ್ಸಾಹ-ಆಸಕ್ತಿಯನ್ನು ತೋರಿಸುತ್ತೆ. ಅವರೆನ್ನುವಂತೆ, ಐತಿಹಾಸಿಕ ಸಂಶೋಧನೆಗಳಿಗೆ ಸಂಬಂಧಿಸಿದ ಉತ್ಖನನ ಕಾರ್ಯಗಳು ನಮ್ಮಲ್ಲಿ ಹಂಪಿ ಬಿಟ್ಟರೆ ಮತ್ತೆಲ್ಲೂ ವಿಶೇಷ ಮುತುವರ್ಜಿಯಿಂದ ನಡೆಯುತ್ತಿಲ್ಲ. ಹಾಗೆಂದು ಬರೇ ಊಹಾಪೋಹಗಳಿಂದಲೇ ಸಂಶೋಧನೆ-ಉತ್ಖನನ ಯಶಸ್ವಿಯಾಗುತ್ತೆನ್ನಲಾಗದು. ಏಕೆಂದರೆ ಸಾಮಾನ್ಯವಾಗಿ ನಮ್ಮ ಸಂಶೋಧಕರುಗಳಿಗೆ ಸಿಗುವ ಮಡಕೆ ಚೂರುಗಳು, ಆಯುಧಗಳೆನ್ನಲಾಗುವ ಕಲ್ಲುಗಳೆಲ್ಲವೂ ಸೂಕ್ತ ಪುರಾವೆಗಳೆಂದು ತೀರ್ಮಾನಿಸುವ ಮೊದಲು ಅವುಗಳ ನಿಖರ ಕಾಲಮಾನ ತಿಳಿವ ಆಧುನಿಕ ವಿಧಾನಗಳಿಂದ ಪರೀಕ್ಷೆಗೊಳಪಡಿಸಿ, ಖಚಿತಪಡಿಸಿಕೊಂಡು ಮುನ್ನಡಿಯಿಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಪ್ರಾಚ್ಯವಸ್ತು ಇಲಾಖೆ ಮತ್ತು ಸಂಶೋಧಕರ ಕಾರ್ಯ ತಪಸ್ಸಿನಂತೆ ನೆರವೇರಬೇಕಾಗುತ್ತದೆ.

ಚಿತ್ರದುರ್ಗ **ಚನ್ನಬಸವ ಪುತ್ತೂರ್ಕರ**

ದುಡಿಮೆಯಲ್ಲಿ ಮಾತ್ರ 'ಸಮಪಾಲು, ಫಲದಲ್ಲಲ್ಲ' ಎನ್ನುವ ಸ್ತ್ರೀ ಶೋಷಣೆಯನ್ನು ಬಿಂಬಿಸಿದ ಆಕರ್ಷಕ, ಆದರೆ ಶೋಷಣೆ ನಿರೂಪಿಸಿದ ಶೈಲಿ ನಿಜಕ್ಕೂ ವಾಸ್ತವತೆಯನ್ನು ಸಾರಿತ್ತು. ಮುಖಪುಟದಲ್ಲಿ ಅಂದಿನ 'ಉದ್ಯಾನ ನಗರಿ' ಇಂದಿನ 'ಕಾಂಕ್ರೀಟ್ ಕಾಡಾಗಿ' ಮಾನವನ ನೆಲೆಯ ಅನುಭವಕ್ಕೆ ಬಂದ ತಿಳಿವು ನಿಜವಾಗಿಯೂ ಇದೇ ನಗರದ ನಾಗರಿಕ ಸಹನೆ ಪರೀಕ್ಷಿಸುವ ತಾಣವಾಗಿರುವುದು ಒಂದು ವಿಪರ್ಯಾಸ. ಆದರೂ ಇಲ್ಲಿನ ಜನರ ಕುರಿತಾಗಿ ಲೇಖಕರ ಅನಿಸಿಕೆ ಮೆಚ್ಚುವ ಅಂಶ, ಜೊತೆಗೆ ನೂರಕ್ಕೆ ನೂರು ಸತ್ಯ. ಎಲ್ಲ ಬಗೆಯ ಎಲ್ಲ ಚಿಂತನೆಯ ಜನರು ನಮ್ಮಲ್ಲಿ ಕಾಣಸಿಗುವುದು ಇಲ್ಲಿನ ವಿಶೇಷವೂ ಅಹುದು. ಒಟ್ಟಾರೆ ವಿಶ್ವನಾಥ ಅಡಿಗರು ಬೆಂಗಳೂರು ಸಾಂಸ್ಕೃತಿಕ ಜಾಗತಿಕ ನೆಲೆಯನ್ನು ಬಿಂಬಿಸುವ ಕನ್ನಡಿ ಎಂದಿರುವ ಶೈಲಿ 'ಓ ಕನ್ನಡಿಗ ಇದು ನಿನ್ನದೆಂದು ಹೆಮ್ಮೆ ಪಡು ನೀ ನೋಡಿ' ಎನ್ನುವಂತೆ ಮಾಡಿದೆ. ವಿಧಾನಸೌಧದ ನಿಧಾನಗತಿಯನ್ನೂ ಮಾರ್ಮಿಕವಾಗಿ ಬಣ್ಣಿಸಿದ್ದಾರೆ.

ಬೆಂಗಳೂರು **ನೆ.ಲ.ರಾಮಮೂರ್ತಿ**

'ಈ ತಿಂಗಳು' ವಾಸ್ತವಿಕ ವಿಚಾರ ಹೊತ್ತ ಮಾಹಿತಿಗಳನ್ನು ಉತ್ತಮವಾಗಿ ಬಿಂಬಿಸಿದೆ. ರಾಜ್ಯ, ರಾಷ್ಟ್ರ, ರಾಜಧಾನಿಯ, ಸುದ್ದಿಗಳು ಓದಿಸುತ್ತ ಹೋದವು. ಕರುನಾಡ ಚುನಾವಣೆಯ ಬಯಲು ನಾಟಕ ಹಾಗೂ ಪ್ರಜಾಪ್ರಭುತ್ವದಲ್ಲಿ ಖೇಣಿ ಮತ್ತು ಗಣಿಧಣಿಗಳ ಪ್ರಮುಖಪಾತ್ರ ಮುಂತಾದ ಅನೇಕ ವಿಚಾರಗಳನ್ನು ಮಂಡಿಸಿದ ಸಂಪಾದಕರ ಮನದಾಳದ ಮಾತುಗಳು ಅರ್ಥಪೂರ್ಣವಾಗಿದ್ದವು.

ಗದಗ **ಬಸವರಾಜ ಶಿ. ಬಾಳೇಶ್ವರ ಮಠ**

### ಮೇ ತಿಂಗಳ 'ಹೊಸತು'

ಹಿರಿಯ ಗಾಂಧಿವಾದಿ ಎಚ್.ಎಸ್.ದೊರೆಸ್ವಾಮಿಗಳ ಸಂದರ್ಶನ ಸಮಯೋಚಿತವಾಗಿದ್ದರೂ ಜಾಗತೀಕರಣದ ಆಗುಹೋಗುಗಳ ಬಗ್ಗೆ ಅವರಿಂದ ಯಾವುದೇ ಸ್ಪಷ್ಟ ಚಿತ್ರಣವನ್ನು ಹೊರಗೆಡುಹುವಲ್ಲಿ 'ಸಂದರ್ಶನ' ವಿಫಲವಾಗಿದೆ! ಆದರೆ, ಒಂದಂತೂ ನಿಜ – ಸರಳತೆ, ಸ್ವಾಭಿಮಾನ, ಸ್ವಾವಲಂಬನೆಗಳ ವಿಚಾರದಲ್ಲಿ ನಾವು ಎಡವುತ್ತಿರುವುದು. ಈ ಎಲ್ಲ ವೈಫಲ್ಯಗಳಿಗೆ ವಿಶ್ವಗ್ರಾಮ ಪರಿಕಲ್ಪನೆಯನ್ನು ಮಾತ್ರ ಬೊಟ್ಟು ಮಾಡಿ ತೋರಿಸುವುದರ ಬದಲಿಗೆ ನಮ್ಮ ನೈತಿಕ - ಬೌದ್ಧಿಕ ವಿಚಾರ, ಸಂಸ್ಕೃತಿಗಳು ಎಲ್ಲಿ, ಹೇಗೆ ಮತ್ತು ಯಾಕೆ ಹಾದಿ ತಪ್ಪುತ್ತಿವೆಯೆಂಬ ಪ್ರಾಮಾಣಿಕ ಅವಲೋಕನ ನಡೆಯಬೇಕಿದೆ. ಬೇರೆ ಸಂಸ್ಕೃತಿಯನ್ನು ಪ್ರೀತಿಸುತ್ತಲೇ ನಮ್ಮ ಸಂಸ್ಕೃತಿಯನ್ನು ಗೌರವಿಸುವ ಗಾಂಧೀಜಿ ಅವರ ಅಭಿಪ್ರಾಯಗಳು ಇಂದು ಮೂಲೆಗುಂಪಾಗುತ್ತಿರುವುದನ್ನು ಜರೂರಾಗಿ ತಡೆಯಬೇಕಿದೆ. ಈ ಪ್ರಕ್ರಿಯೆ ನಿರೀಕ್ಷಿತ ಮಟ್ಟದಲ್ಲಿ ಆಗುತ್ತಿಲ್ಲ. ಪ್ರಸಾರ ಮಾಧ್ಯಮಗಳು ತಮ್ಮ ಬದ್ಧತೆಗಳನ್ನು ಮಾರಿಕೊಳ್ಳದಿದ್ದರೆ ಈ ಕಾರ್ಯ ಸುಲಭಸಾಧ್ಯವಾಗಲಿದೆ. ಆದರೆ ಅವು ತಮ್ಮ ಭೋಳೇತನಗಳಿಂದ ಹೊರಬರಬೇಕಷ್ಟೆ! ಅಂದರೆ ಇಲ್ಲಿ ಬೆಕ್ಕಿಗೆ ಗಂಟೆ ಕಟ್ಟುವವರಾರು ಎಂಬ ಪ್ರಶ್ನೆ ಪ್ರಶ್ನೆಯಾಗೇ ಉಳಿಯುತ್ತದೆ. ಇದಕ್ಕೆ ಉತ್ತರವೇನೂ ಕಷ್ಟದ್ದಲ್ಲವಾದರೂ ಪ್ರಬಲ ಇಚ್ಛಾಶಕ್ತಿಗಳ ಕ್ರೋಡೀಕರಣವಾಗಬೇಕಿದೆ.

ಚಿತ್ರದುರ್ಗ **ಚನ್ನಬಸವ ಪುತ್ತೂರ್ಕರ**

# ೨೦೦೮ರ ಚುನಾವಣೆ : ಕೆಲವು ಟಿಪ್ಪಣಿಗಳು



ಡಾ|| ರಹಮತ್ ತರೀಕೆರೆ

ಈ ಸಲದ ಚುನಾವಣೆಗಳಲ್ಲಿ ಬಿಜೆಪಿಯು ೧೧೦ ಸೀಟು ಗೆದ್ದು ಪಕ್ಷೇತರರ ಸಹಾಯದಿಂದ ಅಧಿಕಾರಕ್ಕೆ ಬಂದಿದೆ. ದಕ್ಷಿಣ ಭಾರತದಲ್ಲಿ ತನ್ನದೇ ಆದ ಸ್ವತಂತ್ರ ಸರ್ಕಾರ ಸ್ಥಾಪಿಸುವ ಅದರ ಬಹುದಿನದ ಕನಸೂ ನಿಜವಾಗಿದೆ. ಅದು ತನ್ನ ಗೆಲುವಿಗೆ ಅರ್ಹವಾಗಿದೆ. ಯಾಕೆಂದರೆ ಅದು ಚುನಾವಣೆಯನ್ನು ಬಹಳ ಗಂಭೀರವಾಗಿ ತೆಗೆದುಕೊಂಡಿತ್ತು. 'ಕರ್ನಾಟಕದ ಜನ ಬಿಜೆಪಿಯನ್ನು ದೊಡ್ಡ ಪಕ್ಷವಾಗಿ ಗೆಲ್ಲಿಸಿದ್ದರೂ ಸ್ಪಷ್ಟ ಬಹುಮತ ಕೊಟ್ಟಿಲ್ಲ; ಬಿಜೆಪಿ ಗಳಿಸಿರುವ ಮತ ಗಳಿಕೆಯು ಸೋತ ಕಾಂಗ್ರೆಸ್ಸಿಗಿಂತಲೂ ಕಡಿಮೆಯಿದೆ'- ಎಂದು ಕೆಲವರು ಹೇಳುತ್ತಿರುವುದುಂಟು. ಈ ಮೂಲಕ 'ಕರ್ನಾಟಕವು ಕೋಮುವಾದಕ್ಕೆ ಇನ್ನೂ ಒತ್ತೆ ಹೋಗಿಲ್ಲ' ಎಂದು ವ್ಯಾಖ್ಯಾನಿಸಲೂಬಹುದು. ಆದರೆ ತಾಂತ್ರಿಕವಾಗಿಯೂ ವಾಸ್ತವಿಕವಾಗಿಯೂ ಬಿಜೆಪಿ ಗೆದ್ದಿದೆ. ಪ್ರತಿ ಚುನಾವಣೆಯಲ್ಲಿ ಅದರ ಮತಗಳಿಕೆಯ ಪ್ರಮಾಣ ಕೂಡ ಹೆಚ್ಚುತ್ತಾ ಬಂದಿದೆ. ಬಿಜೆಪಿಯನ್ನು ರಾಜಕೀಯವಾಗಿ ಸೈದ್ಧಾಂತಿಕವಾಗಿ ಒಪ್ಪದವರೂ ಅದರ ಗೆಲುವನ್ನು ಮನ್ನಿಸಬೇಕಿದೆ. ಇಲ್ಲದಿದ್ದರೆ ಅದನ್ನು ಅತಿ ದೊಡ್ಡ ಪಕ್ಷವಾಗಿ ಹೊಮ್ಮಿಸಿರುವ ಕರ್ನಾಟಕದ ೩ನೇ ೧ರಷ್ಟು ಜನರನ್ನೇ ನಿರಾಕರಿಸಿದಂತಾಗುತ್ತದೆ. ಅದರಲ್ಲೂ ಈಸಲ ಬಿಜೆಪಿಗೆ ಮತ ಹಾಕಿರುವ 'ಜನ'ರಲ್ಲಿ ಕೇವಲ ಉಚ್ಚ ಜಾತಿಗಳಿಲ್ಲ, ಎಸ್‌ಸಿ, ಎಸ್‌ಟಿ, ಓಬಿಸಿ ಹಾಗೂ ಮುಸ್ಲಿಮರೂ ಇದ್ದಾರೆ.

ಪ್ರಶ್ನೆಯೆಂದರೆ, ರಾಜಕೀಯವಾಗಿ ಬಿಜೆಪಿಯ ಈ ಗೆಲುವು ವಾಸ್ತವಿಕವಾಗಿ ಯಾರದ್ದು? ಸಂಘಪರಿವಾರದ ಸಿದ್ಧಾಂತದ್ದೇ, ಅದಕ್ಕೆ ಶಕ್ತಿ ತುಂಬಿದ ಗಣಿ ಮಾಲಕರದ್ದೇ ಅಥವಾ ಲಿಂಗಾಯತರದ್ದೇ ? ಲಿಂಗಾಯತರಿಂದ ಬಿಜೆಪಿಗೆ ಈ ಬಾರಿ ಸಿಕ್ಕಿರುವ ರಾಜಕೀಯ ಬೆಂಬಲವು ಅವರು ಸಂಘಪರಿವಾರದ ಸಿದ್ಧಾಂತಗಳಿಗೆ ಕೊಟ್ಟಿರುವ ಒಪ್ಪಿಗೆಯೆನ್ನಬಹುದೇ ? ಈಸಲದ ಚುನಾವಣಾ ಸೋಲು ಯಾರದ್ದು ? ಕಾಂಗ್ರೆಸ್ಸಿನದ್ದೊ, ಮುಸ್ಲಿಮರದ್ದೊ, ಕೆಳಜಾತಿಗಳದ್ದೊ ಅಥವಾ 'ಕೋಮುವಾದಿಗಳನ್ನು ಸೋಲಿಸಿ' ಎಂದು ಕರೆಗೊಟ್ಟಿದ್ದ ಪ್ರಗತಿಪರರದ್ದೊ ? ಕರ್ನಾಟಕದಲ್ಲಿ ಬಿಜೆಪಿಗೆ ಈ ರಾಜಕೀಯ ಮುನ್ನಡೆ ಯಾಕಾಗಿ ದಕ್ಕುತ್ತಿದೆ ? ನಾಡಿನ ಮೇಲೆ ಇದರ ಪರಿಣಾಮಗಳು ಏನಾಗಬಹುದು? ಈ ಕುರಿತು ಚಿಂತಿಸಬೇಕಿದೆ.

ಮೊದಲು ಬಿಜೆಪಿಯ ಯಶಸ್ಸಿನ ಪ್ರಮುಖ ಕಾರಣಗಳನ್ನು ಗಮನಿಸಬಹುದು. ಅವೆಂದರೆ –

೧. ರಾಜ್ಯದ ಬಲಿಷ್ಠ ಜಾತಿ ಸಮುದಾಯವಾಗಿರುವ ಲಿಂಗಾಯತರು ಕೊಟ್ಟ ಬೆಂಬಲ : ಲಿಂಗಾಯತರು ಬೇರೆಲ್ಲ ಪಕ್ಷಗಳಿಗಿಂತ ಬಿಜೆಪಿಯಲ್ಲಿ ತಮಗೆ ಹೆಚ್ಚಿನ ರಾಜಕೀಯ ಸ್ಪೇಸಿರುವುದನ್ನು ಕಂಡುಕೊಳ್ಳುತ್ತ ಬಂದಿದ್ದರು; ಅದರಲ್ಲೂ ಯಡಿಯೂರಪ್ಪ ಮುಖ್ಯಮಂತ್ರಿಯಾಗುತ್ತಾರೆ ಎಂಬ ಕಾರಣಕ್ಕೇ ಈಸಲ ಕೈಗೂಡಿಸಿದರು. ಆರೆಸ್ಸೆಸ್ಸಿನ ಬ್ರಾಹ್ಮಣವಾದವನ್ನು ಒಪ್ಪದ ಬಸವವಾದಿ ಮಠಗಳೂ ಈ ರಾಜಕೀಯ ಸಮೀಕರಣದ ವಿಷಯದಲ್ಲಿ ಸಮ್ಮತಿಪೂರ್ವಕ ಮೌನ ತಳೆದವು.

೨. ಬಳ್ಳಾರಿಯ ಗಣಿ ಮಾಲೀಕರಾದ ರೆಡ್ಡಿ ಸೋದರರು ಹರಿಸಿದ ಧನ ಮತ್ತು ತೋರಿದ ಚುನಾವಣಾ ತಂತ್ರಗಾರಿಕೆ : ರೆಡ್ಡಿ ಸೋದರರು ಬಳ್ಳಾರಿ, ಗದಗ, ಕೊಪ್ಪಳ ಜಿಲ್ಲೆಗಳಲ್ಲಿ ಹೆಚ್ಚು ಸಂಖ್ಯೆಯ ಶಾಸಕರನ್ನು ಗೆಲ್ಲಿಸಿ ವಿಧಾನಸೌಧಕ್ಕೆ ಕರೆದೊಯ್ಯದಿದ್ದರೆ ಈಗಿನ 'ಜನಾದೇಶ'ವೇ ಇರುತ್ತಿರಲಿಲ್ಲ. ಬಿಜೆಪಿಯ ಗೆಲುವಿನ ಹಿಂದೆ ಅದಿರಿನ ರೊಕ್ಕವಿರುವುದು ಸರ್ವವಿದಿತವಾಗಿದೆ.

೩. ಸಂಘಪರಿವಾರದ ಹಿನ್ನೆಲೆಯಿಲ್ಲದ ಆದರೆ ಜಾತಿ ಇಲ್ಲವೇ ಹಣಬಲದಿಂದ ಗೆಲ್ಲಬಲ್ಲ ವರ್ಚಸ್ವಿಗಳಿಗೆ ಟಿಕೆಟ್ ಕೊಟ್ಟಿದ್ದು : ಉದಾಹರಣೆಗೆ, ಹೊಸಪೇಟೆಯಲ್ಲಿ ಗೆದ್ದ ಆನಂದಸಿಂಗ್ ಎಲ್ಲ ಸಮುದಾಯಗಳಲ್ಲಿ ಒಳ್ಳೇ ಸಂಬಂಧವಿರುವ ವ್ಯಕ್ತಿ. ಅವರಿಗೆ ಮುಸ್ಲಿಮರೂ ನಾಯಕರೂ ಓಟುಹಾಕಿದ್ದು ಬಿಜೆಪಿಗಾಗಿಯಲ್ಲ. ಮುಸ್ಲಿಮರು ಶಿಕಾರಿಪುರದಲ್ಲೂ ಯಡಿಯೂರಪ್ಪ ಗೆದ್ದು ಮುಖ್ಯಮಂತ್ರಿಯಾದರೆ ತಮಗೆ ಕೊಂಚ ಒಳ್ಳೆಯದಾದೀತು ಎಂದೋ (ಅಥವಾ ಸೋತರೆ ತಮಗೆ ದೋಷ ಕೊಡುತ್ತಾರೆಂಬ ಆತಂಕದಿಂದಲೊ) ಮತ ಹಾಕಿದರು. ಮಂಗಳೂರಿನಲ್ಲಿ ಶ್ರೀಕೃಷ್ಣ ಪಾಲೆಮಾರರಿಗೂ ಮುಸ್ಲಿಮ್ ಶ್ರೀಮಂತರು ಸಹಾಯ ಮಾಡಿರುವ ಸುದ್ದಿಯಿದೆ. ಮುಸ್ಲಿಮರು-ಕ್ರೈಸ್ತರು ಹೆಚ್ಚು ಸಂಖ್ಯೆಯಲ್ಲಿರುವ ಏರಿಯಾದಲ್ಲಿ ಕಟ್ಟಾ ಸುಬ್ರಹ್ಮಣ್ಯ ನಾಯ್ಡು ಹೇಗೆ ಗೆಲ್ಲುತ್ತಿದ್ದರು ಎಂದು ಶಿವಾಜಿನಗರದ ಪರಿಚಿತರೊಬ್ಬರನ್ನು ಒಮ್ಮೆ ಕೇಳಿದೆ. 'ಕಟ್ಟಾ, ತಮ್ಮ ಕ್ಷೇತ್ರದ ಯಾರೇ ಹೋದರೂ ಮಾತಾಡಿಸುತ್ತಾರೆ. ವ್ಯಕ್ತಿ ಲಗ್ನಪತ್ರಿಕೆ ಕೊಟ್ಟರೆ ಮದುವೆಗೆ ಅಟೆಂಡ್ ಮಾಡುತ್ತಾರೆ' ಎಂದು ಜವಾಬು ಬಂತು. ಧನಿಕರು ಮಾಡುವ ಸಣ್ಣಪುಟ್ಟ ಸಹಾಯದ ಕಾರಣಕ್ಕೇ ಜನ ಅವರು ಸಂಪತ್ತು ಗಳಿಸುವ ಮಾರ್ಗದ ಬಗ್ಗೆ ಯಾವ ಪ್ರಶ್ನೆಯನ್ನೂ ಹಾಕಿಕೊಳ್ಳದೆ ಗೆಲ್ಲಿಸುವ ಪರಿಪಾಠವನ್ನು ಆರಂಭಿಸಿದ್ದಾರೆ. ಹೀಗೆ ವೈಯಕ್ತಿಕವಾಗಿ ಕೋಮುವಾದಿಯಲ್ಲದ ಅನೇಕರು ನಾನಾ ಕಾರಣಕ್ಕೆ ಬಿಜೆಪಿ ಶಾಸಕರಾಗಿದ್ದಾರೆ. ಇವರಲ್ಲಿ ಬಳ್ಳಾರಿಯ ರೆಡ್ಡಿ ಸೋದರರೂ ಸೇರಿದ್ದಾರೆ.

ಪ್ರಶ್ನೆಯೆಂದರೆ, ವ್ಯಕ್ತಿಗಳಾಗಿ ಶಾಸಕರು ಮತೀಯವಾದಿಗಳಲ್ಲದೆ ಇರಬಹುದು. ಅಂತಿಮವಾಗಿ ಅವರ ಮೂಲಕ ಅಧಿಕಾರಕ್ಕೆ ಬರುವ ಸರ್ಕಾರ ಯಾರ ನಿಯಂತ್ರಣದಲ್ಲಿ ನಡೆಯುತ್ತದೆ ? (ಯಡಿಯೂರಪ್ಪನವರು ಆರೆಸ್ಸೆಸ್ಸಿನ ಮಾರ್ಗದರ್ಶನದಲ್ಲಿ ಸರ್ಕಾರ ನಡೆಸುವ ಬಗ್ಗೆ ಹೇಳಿಕೆಯನ್ನೂ ಕೊಟ್ಟಿದ್ದಾರೆ.) ಸರ್ಕಾರದ ನೀತಿ ನಿರೂಪಿಸುವವರು ಯಾರು ? ಇದರ ದೂರಗಾಮಿ ಪರಿಣಾಮಗಳೇನು ? ಈ ಬಗ್ಗೆ ವ್ಯಕ್ತಿಯ ಮುಖ ನೋಡಿ ಮತ ಹಾಕಿದ ಹೆಚ್ಚು ಜನ ತಲೆಕೆಡಿಸಿಕೊಂಡಿಲ್ಲ. ಸಾಮಾನ್ಯ ಜನಕ್ಕೆ ಅಮೂರ್ತರೂಪಿ ಸೈದ್ಧಾಂತಿಕ ರಾಜಕಾರಣ ಅರ್ಥವಾಗುವುದಿಲ್ಲವೋ, ತಮ್ಮ ಫಾಯದೆಯನ್ನಷ್ಟೇ ಯೋಚಿಸುತ್ತ ಅವರು ವಿಶಾಲ ನೆಲೆಯ ರಾಜಕೀಯ ಪ್ರಜ್ಞೆ ಬಿಟ್ಟುಕೊಟ್ಟಿದ್ದಾರೊ ಅಥವಾ ಕೋಮುವಾದದ ತರ್ಕಕ್ಕೆ ಅವರು ಒಪ್ಪಿಗೆ ಕೊಟ್ಟಿದ್ದಾರೋ ಸ್ಪಷ್ಟವಾಗುತ್ತಿಲ್ಲ. ಆದರೆ ಈಸಲ ಅವರು ಸಾಕಷ್ಟು ಕರಪ್ಟ್ ಆಗಿರುವುದು ಮಾತ್ರ ನಿಜ. ಭಾರತದ ಜನಸಾಮಾನ್ಯರು ನಮ್ಮ ರಾಜಕೀಯದಲ್ಲಿ ಮೌನವಾಗಿದ್ದು

ರಾಜಕೀಯ ಪಂಡಿತರ ಲೆಕ್ಕಾಚಾರ ಬುಡಮೇಲಾಗುವಂತೆ ಪ್ರಬುದ್ಧತೆ ತೋರುತ್ತಾರೆ ಎಂಬ ಮಿತ್ ಇದ್ದು, ಅದನ್ನು ಪುನರ್ ಪರಿಶೀಲಿಸಬೇಕಿದೆ.

೪. ನಿಜ, ಜನ ಜೆಡಿಎಸ್‌ನ ಅವಕಾಶವಾದ ಮತ್ತು ಕುಟುಂಬ ರಾಜಕಾರಣಗಳಿಗೆ ಬೇಸತ್ತಿದ್ದರು; ಕಾಂಗ್ರೆಸ್ಸಿಗರ ಜಡತೆ, ವೈಚಾರಿಕ ಅಸ್ಪಷ್ಟತೆ, ಹೈಕಮಾಂಡ್ ಸಂಸ್ಕೃತಿಯಿಂದ ಬಂದಿರುವ ಬೌದ್ಧಿಕ ಮಂಕುತನ, ವೃದ್ಧಾಪ್ಯ ಪ್ರಧಾನ ನಾಯಕತ್ವ ಅವರಿಗೆ ನಿಷ್ಕ್ರಿಯವಾಗಿ ಕಂಡಿರಬಹುದು. ಧರ್ಮಸಿಂಗ್ ಅವರು ಸಾಮಾನ್ಯ ಅಭ್ಯರ್ಥಿಗೆ ಸೋತಿರುವುದು ಇದನ್ನೇ ಸೂಚಿಸುತ್ತದೆ. 'ಜಾತ್ಯತೀತ' ಎಂಬ ಆಥವಾ ೯ನೇ ಸಲ ಗೆದ್ದು ಗಿನ್ನೆಸ್ ದಾಖಲೆ ಮಾಡುತ್ತಾರೆ ಎಂಬ ಕಾರಣಕ್ಕೆ ಕಾಂಗ್ರೆಸ್ಸಿನ ಕೆಲವರನ್ನು ಜನ ಗೆಲ್ಲಿಸಬೇಕಿತ್ತೆಂದು ಹೇಗೆ ನಿರೀಕ್ಷಿಸುವುದು? ಅರ್ಧಶತಮಾನ ಕಾಲ ಒಬ್ಬ ವ್ಯಕ್ತಿ ಇಲ್ಲವೇ ಕುಟುಂಬದ ಆಳ್ವಿಕೆಯಲ್ಲಿ ಒಂದು ಕ್ಷೇತ್ರವು ಹಿಂದುಳಿದುಕೊಂಡೇ ಇರುವುದನ್ನು ಹೇಗೆ ಸಮರ್ಥಿಸುವುದು ? ಬಂಗಾರಪ್ಪನವರು ಶಿಕಾರಿಪುರದಲ್ಲಿ ಶೂಟಿಂಗಿಗೆ ಬಂದ ನಟನಂತೆ ಉಡಾಫೆಯಿಂದ ಮಾತಾಡುತ್ತಿದ್ದರು. 'ಕೋಮುವಾದಿಗಳನ್ನು ಸೋಲಿಸಿ' ಎಂದು ಪುಗಸಟ್ಟೆ ಬೆಂಬಲ ಪಡೆಯಬಯಸಿದ್ದರು. ಆದರೆ ಮಂತ್ರಿಯಾದರೆ ಕ್ಷೇತ್ರಕ್ಕೆ ಹಣಕಾಸಿನ ನೆರವು ಒದಗಿಸಬಲ್ಲ ಯಡಿಯೂರಪ್ಪನವರಿಗೆ ಜನ ವೋಟು ಕೊಟ್ಟರು.

೫. ಸಂಘಪರಿವಾರದ ಸಂಘಟನಾ ಶಕ್ತಿ ತಂತ್ರಗಾರಿಕೆ ಮತ್ತು ಪ್ರಚಾರ ಕುಶಲತೆ : ಬಿಜೆಪಿಯು ಕಾಂಗ್ರೆಸ್ ಹೈಕಮಾಂಡಿಗಿಂತ ಬಲವಾಗಿ ಉಡಹಿಡಿತವುಳ್ಳ ಆರೆಸ್ಸೆಸ್ಸಿನ ಹಿಡಿತದಲ್ಲಿದೆ. ಅದರ ಚಿಂತನೆ ದುಡಿವ ವರ್ಗದ ಪರವಾದುದಲ್ಲ. ಆದರೂ ತನ್ನ ಚಿಂತನೆಯನ್ನು ಜನರಿಗೆ ಪರಿಣಾಮಕಾರಿಯಾಗಿ ಮುಟ್ಟುವಂತೆ ಪ್ರಚಾರ ಮಾಡುತ್ತದೆ. ತನ್ನ ತತ್ವಸಿದ್ಧಾಂತದ ಬಲಕ್ಕಿಂತ 'ಸೆಕ್ಯುಲರ್' ಪಕ್ಷಗಳ ತಪ್ಪುಗಳ ಪ್ರಯೋಜನ ಪಡೆದು ಬೆಳೆಯುವ ಕುಶಲತೆ ಅದರಲ್ಲಿದೆ. ಜನಾರ್ದನ ಪೂಜಾರಿ ಸಾರಾಯಿ ನಿಷೇಧ ಕುರಿತು ಮಾಡಿದ ಹೇಳಿಕೆಯನ್ನು ಅದು ಬಳಸಿಕೊಂಡಿದ್ದು ಇದಕ್ಕೆ ಸಾಕ್ಷಿ. ಬಿಜೆಪಿಯ ಅರ್ಧ ಗೆಲುವು ಬಂದಿದ್ದೇ ಎದುರಾಳಿಗಳ ದೌರ್ಬಲ್ಯದಿಂದ. ಪ್ರಚಾರದ ವಿಷಯದಲ್ಲಿ ಕಾಂಗ್ರೆಸ್ ಅದಕ್ಕೆ ಅಸಮಾನ ಸ್ಪರ್ಧಿಯಾಗಿತ್ತು. ಇದನ್ನು ಚುನಾವಣಾ ಜಾಹಿರಾತುಗಳಲ್ಲಿ ಕಾಣಬಹುದಿತ್ತು. ಕಾಂಗ್ರೆಸ್ ಜಾಹಿರಾತುಗಳು ಇಲಾಖೆಯ ಅಧಿಕಾರಿಗಳು ಜಡಭಾಷೆಯಲ್ಲಿ ಇಲಾಖಾ ಪ್ರಗತಿಯನ್ನು ಪ್ರಚುರಪಡಿಸುವಂತಿದ್ದವು; ಬಿಜೆಪಿಯವು ಭಾವನೆಗಳನ್ನು ಕಲಕಿ ಮನಸ್ಸನ್ನು ವಶಪಡಿಸಿಕೊಳ್ಳುವಂತಿದ್ದವು. ಉಗ್ರಗಾಮಿ ಕೃತ್ಯಗಳ ಉಲ್ಲೇಖವುಳ್ಳ ಜಾಹಿರಾತನ್ನು ಗಮನಿಸಬೇಕು. ಅಲ್ಲಿ ''ಈಗ ಹೇಳಿ ಅವರಿಗೆ ನಮ್ಮ ಅಮೂಲ್ಯ ಜೀವಗಳು ಮುಖ್ಯವೇ ಅಥವಾ ಅವರ ಮತಬ್ಯಾಂಕುಗಳೊ?'' ಎಂಬ ಪ್ರಶ್ನೆಯಿದೆ. ಇಲ್ಲಿನ 'ಅವರಿಗೆ' ಎಂಬಲ್ಲಿ ಕಾಂಗ್ರೆಸ್ಸನ್ನೂ ಮುಸ್ಲಿಮರನ್ನೂ ಉಗ್ರಗಾಮಿಗಳನ್ನೂ 'ನಮ್ಮ' ಎಂಬಲ್ಲಿ ಅವರಲ್ಲದ ಉಳಿದವರನ್ನೂ ಒಂದೆಡೆಗೆ ಧ್ರುವೀಕರಿಸುವ ಸೂಕ್ಷ್ಮ ಯತ್ನವಿದೆ. ಪ್ರಚಾರ ಎಷ್ಟರಮಟ್ಟಿಗೆ ಚುನಾವಣೆಯಲ್ಲಿ ಕೆಲಸ ಮಾಡುತ್ತದೆಯೊ ಸ್ಪಷ್ಟವಿಲ್ಲ. ಆದರೆ ಎಲ್ಲ ಫ್ಯಾಸಿಸ್ಟ್ ಚಿಂತನೆಗಳೂ ಪ್ರಚಾರವನ್ನು ಬಹುದೊಡ್ಡ ಅಸ್ತ್ರವಾಗಿ ಬಳಸುತ್ತವೆ. ಬಿಜೆಪಿಯ ಗೆಲುವಿನಲ್ಲಿ ಚುನಾವಣಾ ತಂತ್ರಗಾರಿಕೆ ಮತ್ತು ವೃತ್ತಿಪರತೆಯ ಪಾಲು ಮುಖ್ಯವಾಗಿದೆ. ತಂತ್ರಗಾರಿಕೆಯ ವಿಷಯದಲ್ಲಿ ಬಿಜೆಪಿಯ ಮುಂದೆ ಕಾಂಗ್ರೆಸ್ಸಿನವರು ಶತಮಾನದಷ್ಟು ಹಿಂದಿದ್ದರು.



೬. ಬಿಜೆಪಿಯ ಸೋಶಿಯಲ್ ಇಂಜಿನಿಯರಿಂಗ್ : ಅದು ಮೇಲ್ಜಾತಿಗಳ ಅತೃಪ್ತಿಯನ್ನು ಚೆನ್ನಾಗಿ ವಿಕೀಕರಿಸಿತು. ಅದರ ಜತೆಗೆ ಸಮಾಜದ ಎಲ್ಲ ಸಮುದಾಯಗಳನ್ನು ಒಳಗೊಳ್ಳುವ ಯತ್ನ ಮಾಡಿತು. ಅದರ ನಾಯಕರು- ಯಡಿಯೂರಪ್ಪ, ಸದಾನಂದಗೌಡ, ಅನಂತಕುಮಾರ್- ಉಚ್ಚಜಾತಿಗೆ ಸೇರಿದವರು. ಎದುರು ಪಕ್ಷದ ಅಧ್ಯಕ್ಷರು ಮುಸ್ಲಿಂ ಮತ್ತು ದಲಿತರು. ಆದರೂ ಹೆಚ್ಚು ದಲಿತ ಮತ್ತು ಓಬಿಸಿ ಶಾಸಕರು ಬಿಜೆಪಿಯಿಂದ ಗೆದ್ದರು. ತನಗೆ ಹೆಚ್ಚಿನ ಮುಸ್ಲಿಮರು ವೋಟು ಕೊಡುವುದಿಲ್ಲವೆಂದು ಅದಕ್ಕೆ ಗೊತ್ತಿತ್ತು. ಆದರೂ 'ಮುಸ್ಲಿಮರೊಬ್ಬರನ್ನು ಮಂತ್ರಿ ಮಾಡುವ' ಘೋಷಣೆ ಅದು ಮಾಡಿತು. ವಾಸ್ತವವಾಗಿ ಇದು ಸಂಘ ಪರಿವಾರ ಹಿಂದಿನಿಂದಲೂ ಘೋಷಿಸಿಕೊಂಡುಬಂದಿದ್ದ 'ಅಲ್ಪ ಸಂಖ್ಯಾತರ ತುಷ್ಟೀಕರಣ' ನೀತಿ. ಇದನ್ನೇ ಚುನಾವಣಾ ಸಮಾಜ ಶಾಸ್ತ್ರದ ಗೆಲುವು ಎನ್ನುವುದು.

೭. ಜನರಿಗೆ ಹೆಚ್ಚಿನ ಆಯ್ಕೆಗಳೇ ಇರದಿದ್ದುದು : ಪ್ರಮುಖ ಪಕ್ಷಗಳಾದ ಕಾಂಗ್ರೆಸ್, ಜೆಡಿಎಸ್, ಬಿಜೆಪಿ- ಮೂರೂ ಕಳೆದ ಮೂರೂವರೆ ವರ್ಷಗಳಲ್ಲಿ ಆಡಳಿತ ಮಾಡಿದಂತಹವು. ಆರ್ಥಿಕನೀತಿ ಮತ್ತು ಭ್ರಷ್ಟತೆ ವಿಷಯದಲ್ಲಿ ಇವರಲ್ಲಿ ಬಹಳ ವ್ಯತ್ಯಾಸವಿರಲಿಲ್ಲ. ಕೋಮುವಾದಿಯಲ್ಲದ ಅನೇಕರು ಬಿಜೆಪಿಯಲ್ಲಿರುವಂತೆ, ಗಣಿ ರೊಕ್ಕದವರು, ಜಾತೀವಾದಿಗಳು, ಮತೀಯವಾದಿಗಳು ಕಾಂಗ್ರೆಸ್ಸಿನಲ್ಲೂ ಜೆಡಿಎಸ್‌ನಲ್ಲೂ ಇದ್ದರು. ಕೆಲವು ಕಡೆ ಸ್ಪರ್ಧೆ ಹಾಲಿ ಬಿಜೆಪಿ ಮತ್ತು ಮಾಜಿ ಬಿಜೆಪಿ ಅಭ್ಯರ್ಥಿಗಳ ನಡುವೆ ಇತ್ತು. ಬಳ್ಳಾರಿಯಲ್ಲಿ ಬಿಜೆಪಿ ಎದುರಿಗೆ ನಿಂತಿದ್ದ ಅನಿಲ್ ಲಾಡ್, ಕೆಲವೇ ತಿಂಗಳ ಹಿಂದೆ ಬಿಜೆಪಿ ಶಾಸಕರಾಗಿದ್ದವರು. ಯಡಿಯೂರಪ್ಪನವರ ಎದುರು ನಿಂತಿದ್ದ ಬಂಗಾರಪ್ಪ ಕೂಡ ಹಿಂದೆ ಬಿಜೆಪಿಯಲ್ಲಿದ್ದವರು. ಆದ್ದರಿಂದ ಈ ಚುನಾವಣೆ ಕೌರವ ಪಾಂಡವರ ಯುದ್ಧವೇನಾಗಿರಲಿಲ್ಲ. ಆದ್ದರಿಂದಲೇ ಫಲಿತಾಂಶ ಕೂಡ ಏಕರೂಪವಾಗಿ ಬಂದಿಲ್ಲ. ಈ ಚುನಾವಣೆ ಎಗ್ಗಿಲ್ಲದೆ ಕೋಮುವಾದ ಪ್ರದರ್ಶಿಸುತ್ತಿದ್ದ ಕೆಲವರನ್ನು, ಜನರನ್ನು ಟೇಕನ್‌ಫಾರ್ ಗ್ರಾಂಟೆಡ್ ತೆಗೆದುಕೊಂಡಿದ್ದವರನ್ನು, ಕ್ಷೇತ್ರವನ್ನು ತಮ್ಮ ಕುಟುಂಬದ ಜಹಗೀರು ಎಂದು ಭಾವಿಸಿದ್ದವರನ್ನು, ತಾವೇ ಘೋಷಿಸುತ್ತಿದ್ದ ಸಿದ್ಧಾಂತಕ್ಕೆ ವಿರುದ್ಧ ಹೋದ ಅವಕಾಶವಾದಿಗಳನ್ನು, ತಾರಾಬಲದಿಂದ ಗೆಲ್ಲುವೆನೆಂಬ ಅಹಮಿಕೆಯಲ್ಲಿದ್ದವರನ್ನು, ಕನ್ನಡಾಭಿಮಾನ ಗೆಲ್ಲಿಸುತ್ತದೆ ಎಂಬ ಭ್ರಮೆಯಲ್ಲಿದ್ದವರನ್ನು ಸೋಲಿಸಿತು; ಆದರೆ ರಾಜ್ಯದ ಹಿತದೃಷ್ಟಿಯಿಂದ ಬೇಕಾಗಿದ್ದ ಕೆಲವರನ್ನು ಸೋಲಿಸಿತು; ಕೋಮುವಾದಿಗಳನ್ನೂ ಭೂಮಾಫಿಯಾಗಳನ್ನೂ ಗಣಿಮಾಲಿಕರನ್ನೂ ಗೆಲ್ಲಿಸಿತು.

೮. ಚುನಾವಣಾ ಗೆಲುವು ಮತ್ತು ಸೋಲುಗಳಿಗೆ ಹಲವು ಕಾರಣಗಳಿರುತ್ತವೆ. ಅದರಲ್ಲಿ ಸ್ಥಳೀಯ ಮತ್ತು ಜನರ ದೈನಿಕ ಬದುಕಿಗೆ ಸಂಬಂಧಿಸಿದ ಸಂಗತಿಗಳು ನಿರ್ಣಾಯಕ ಪಾತ್ರ ವಹಿಸುತ್ತವೆ. ಬಹುಶಃ ಬಿಜೆಪಿ ಕೋಮುವಾದಿ ಎಂಬುದು ಹೆಚ್ಚಿನವರಿಗೆ ಆತಂಕದ ಸಂಗತಿಯಾಗಿ ಕಾಡಿದಂತಿಲ್ಲ. ಮೋದಿ ಬಾಷಣಗಳಿಗೆ ಸೇರುತ್ತಿದ್ದ ಜನಸಂದಣಿ, ರೈತ ದಲಿತ ಚಳುವಳಿಗಳ ಮತ್ತು ಎಡಪಂಥೀಯ ಅಭ್ಯರ್ಥಿಗಳ ಸೋಲು, ಎಸ್ಕೆ ಕಾಂತಾ ಮುಂತಾದ ಅನೇಕ ಜನಪರ ಕೆಲಸಗಾರರ ಪರಾಜಯ

ಏನನ್ನು ಸೂಚಿಸುತ್ತದೆ? ಚುನಾವಣಾ ಸೋಲು-ಗೆಲುವುಗಳು ಸೈದ್ಧಾಂತಿಕ ಹೋರಾಟ ಮಾಡುವವರಿಗೆ ಆತ್ಯಂತಿಕವಲ್ಲ, ನಿಜ. ಆದರೂ ಈ ಚುನಾವಣೆ ಪ್ರಗತಿಪರ ಸಂಘಟನೆಗಳ ಮತ್ತು ಚಿಂತಕರು ಲೇಖಕರ ಮಿತಿಗಳನ್ನು ಹೊರಹಾಕಿತು. ಬಿಜೆಪಿ ಅಧಿಕಾರ ಹಿಡಿಯಬಾರದೆಂದು ದೃಢಸಂಕಲ್ಪ ಮಾಡಿದ್ದ ಇವರಿಗೆ ಈ ಸಲದ ಚುನಾವಣೆ ಒಂದು ಯುದ್ಧವಾಗಿತ್ತು. ಆದರೆ ಅದಕ್ಕಾಗಿ ನಾವು ಕ್ರಿಯೆಯಾಗಿ ಏನು ಮಾಡಿದೆವು? ಈ ಪ್ರಶ್ನೆ ಎದುರು ನಿಲ್ಲುತ್ತದೆ; ನಮ್ಮ ಸಂಕಲ್ಪ ಈಡೇರಿಸುವ ಹೊಣೆಯನ್ನು ಕನ್ನಡಿಗರ ಮೇಲೆ ಹಾಕಿ ಹೆಚ್ಚಿನವರು ನಿರಾಳವಾಗಿದ್ದೆವೇ? ಸೈದ್ಧಾಂತಿಕ ಸಮರವು ಚುನಾವಣಾ ರಾಜಕಾರಣದಲ್ಲಿ ಜನತೆಯ ಮತಗಳಾಗಿ ಬದಲಾಗುವಲ್ಲಿ ಇರುವ ತೊಡಕುಗಳ ಚರ್ಚೆಯಾಗಬೇಕಿದೆ. ಪ್ರಗತಿಪರರಿಗೆ ತಾವು ಯಾರ ವಿರುದ್ಧ ಎನ್ನುವಲ್ಲಿದ್ದ ಖಚಿತತೆ ಯಾರ ಪರ ಎನ್ನುವಲ್ಲಿರಲಿಲ್ಲ. ಅವರ ಸೈದ್ಧಾಂತಿಕ ಹೋರಾಟದ ಪ್ರಯೋಜನ ಪಡೆಯುವ ರಾಜಕೀಯ ಸಂಘಟನೆಯೂ ಇಲ್ಲ. ಇದರ ನಿಜವಾದ ಹಕ್ಕುದಾರರಾದ ಸರ್ವೋದಯ, ಕಮ್ಯುನಿಸ್ಟ್ ಪಕ್ಷದವರು ಗೆಲ್ಲುವವರಲ್ಲ. ಕಾಂಗ್ರೆಸ್ಸಿನ ಬಗ್ಗೆ ಪ್ರಗತಿಪರರಿಗೆ ಪೂರಾ ವಿಶ್ವಾಸವಿಲ್ಲ. ತನ್ನ ರಾಜಕೀಯ ವಿರೋಧಿ ವಿರುದ್ಧ ನಡೆಯುವ ಸೈದ್ಧಾಂತಿಕ ಹೋರಾಟದ ಪ್ರಯೋಜನ ಪಡೆಯುವ ಕೊಂಡಿಗಳೇ ಕಾಂಗ್ರೆಸ್ಸಿಗಿಲ್ಲ. ಹೀಗಾಗಿ ಪ್ರಗತಿಪರರದು ದಂಡನಾಯಕರಿಲ್ಲದ ಹೋರಾಟದಂತೆ ಕಾಣುತ್ತಿತ್ತು.




ಭಕ್ತರಿಗೆ – ಶಿಷ್ಯರಿಗೆಲ್ಲ 'ತೀರ್ಥ-ಪ್ರಸಾದ' ಕೊಡುತ್ತಿದ್ದರೆ ಸಾಕಾಗೊದಿಲ್ಲ... ಗುರುವೆ?

ಸಮಾನ ಕಾರಣಕ್ಕಾಗಿ ಒಗ್ಗೂಡುವ ವಿಷಯದಲ್ಲಿ ಪ್ರಗತಿಪರ ಸಂಘಟನೆ ಮತ್ತು ಪಕ್ಷಗಳು ಚುನಾವಣಾ ಪೂರ್ವದಲ್ಲಿ ತಕ್ಕ ರಾಜಕೀಯ ಮತ್ತು ತಾತ್ವಿಕ ಸಂವಾದ ಮಾಡುವುದು; ಭಿನ್ನಮತ ನಿವಾರಿಸಿಕೊಂಡು ಖಚಿತ ಕಾರ್ಯಕ್ರಮ ಮೂಲಕ ಜನರ ಬಳಿ ಹೋಗುವ, ತಾವು ಹಾಗೆ ಹೋಗಲಾಗದ ಕಡೆ ಪೂರಕವಾದ ಪಕ್ಷ ಇಲ್ಲವೇ ಅಭ್ಯರ್ಥಿಗೆ ಬೆಂಬಲ ಘೋಷಿಸುವ ಕೆಲಸ ಮತ್ತಷ್ಟು ವ್ಯವಸ್ಥಿತವಾಗಿ ನಡೆಸುವುದು; ಚುನಾವಣೆ ಘೋಷಣೆಯಾದ ಬಳಿಕ ಗಡಿಬಿಡಿಯಲ್ಲಿ ಕೇವಲ ಆದರ್ಶಗಳನ್ನು ಇಟ್ಟುಕೊಂಡು ಸಾಂಕೇತಿಕ ಸ್ಪರ್ಧೆ ಮಾಡುವ ಬದಲು, ದೃಢವಾದ ಸುದೀರ್ಘವಾದ ರಾಜಕೀಯ ಸಿದ್ಧತೆ ಮಾಡಿಕೊಳ್ಳುವುದು ಅಗತ್ಯ ಅನಿಸುತ್ತಿದೆ.

ಸದ್ಯಕ್ಕಂತೂ ಚುನಾವಣೆ ಮುಗಿದು ಬಿಜೆಪಿ ಗೆದ್ದು ಶಾಸನಬದ್ಧವಾಗಿ ಅಧಿಕಾರ ಹಿಡಿದಿದೆ. ಹೊಸ ಸರ್ಕಾರ ಕರ್ನಾಟಕಕ್ಕೆ ಒಳಿತನ್ನು ಮಾಡಲಿ ಎಂದು ಹಾರೈಸಬಹುದು. ಆದರೆ ಅದು ಹಾಗೆ ಮಾಡುವುದಕ್ಕೆ ಅದನ್ನು ಅಧಿಕಾರಕ್ಕೆ ತಂದವರು ಬಿಡುತ್ತಾರೆಯೇ? ಆರೆಸ್ಸೆಸ್ ಕೇವಲ ಆಡಳಿತ ಮಾಡಗೊಡಿಸದೆ ತನ್ನ ಅಡಗಿದ ಉದ್ದೇಶಗಳನ್ನು ಜಾರಿಗೊಳಿಸಲು ಸಿಕ್ಕಿರುವ ರಾಜಕೀಯ ಅಧಿಕಾರ ಬಳಸತೊಡಗಬಹುದು. ಭಜರಂಗದಳದವರು ದನದ ಹೆಸರಲ್ಲಿ ಮಾಡುವ ಹಲ್ಲೆಗಳು ಮತ್ತಷ್ಟು ಹೆಚ್ಚಬಹುದು. ಅವರು ಕಾನೂನು ಕೈಗೆ ತೆಗೆದುಕೊಂಡರೂ ಪೊಲೀಸರು ತಕ್ಕ ಕ್ರಮ ಕೈಗೊಳ್ಳದಿರಬಹುದು. ಸಂಘಪರಿವಾರವು ಪೊಲೀಸ್ ಹಾಗೂ ಅಧಿಕಾರಶಾಹಿಯನ್ನು ನಿಧಾನವಾಗಿ ಮತೀಕರಿಸಬಹುದು; ಈಗಾಗಲೇ ಶ್ರೀಮಂತವಾಗಿರುವ ಅದರ ಸಂಘಟನೆಗಳಿಗೂ ಮಠಗಳಿಗೂ ಸಾರ್ವಜನಿಕ ಬೊಕ್ಕಸದ ಹಣವು ನಾನಾ ನೆಪದಲ್ಲಿ ಹರಿಯಬಹುದು; ಸಾರ್ವಜನಿಕ ಶಿಕ್ಷಣ, ಪಠ್ಯಪುಸ್ತಕ, ಸಾಂಸ್ಕೃತಿಕ ಸಂಸ್ಥೆಗಳೊಳಗೆ ಅದು ನುಸುಳಲು ಆರಂಭಿಸಬಹುದು; (ಶಿಕ್ಷಣ ಖಾತೆಗಳನ್ನು ಸಂಘದ ಹಿನ್ನೆಲೆಯವರಿಗೇ ಕೊಡಿಸಿರುವುದು ಗಮನಾರ್ಹ.) ಅದು ಬೇರೆಬೇರೆ ನೆಲೆಯಿಂದ ಅಧಿಕಾರಕ್ಕಾಗಿ ಪಕ್ಷದೊಳಗೆ ಬಂದಿರುವವರನ್ನು ಒರಿಯೆಂಟ್ ಮಾಡಲು ಯತ್ನಿಸಬಹುದು. ಅವರು ಒರಿಯೆಂಟ್ ಆಗುತ್ತಾರೆಯೇ ಎನ್ನುವುದು ಬೇರೆ ಪ್ರಶ್ನೆ.

ಒಮ್ಮೆ ನಾನು ಸಾಗರದ ಗೆಳೆಯರಲ್ಲಿ ಕಾಗೋಡು ಯಾಕೆ ಸೋತರು ಎಂದು ಚರ್ಚಿಸಿದೆ. ಅವರ ಪ್ರಕಾರ ಬಂಗಾರಪ್ಪ ದೀವರ ಹುಡುಗರನ್ನು ಅವರು ಬೇಡವೆಂದರೂ ಬಿಜೆಪಿಗೆ ಕರೆದುಕೊಂಡು ಹೋದರು. ತಮಗೆ ಬಿಜೆಪಿ ಬೇಡವಾದಾಗ ಬಂಗಾರಪ್ಪ ಮರಳಿ ಬಂದರು. ಆದರೆ ತರುಣರು ಬರಲಿಲ್ಲ. ಹೀಗಾಗಿ ಕಾಗೋಡು ತಿಮ್ಮಪ್ಪನವರಿಗೆ ದೀವರ ತರುಣರ ಮತಗಳೇ ಬೀಳಲಿಲ್ಲ'; ಇದೇ ತರಹ ಡಿಎಸ್‌ಎಸ್ ನಿಷ್ಕ್ರಿಯವಾಗಿರುವ ಕಡೆ, ಎಡಪಕ್ಷಗಳು ದುರ್ಬಲವಾಗಿರುವ ಕಡೆ, ಹೊಸತಲೆಮಾರಿನ ತರುಣರನ್ನು ಸಂಘಪರಿವಾರವು ಒರಿಯೆಂಟ್ ಮಾಡಲು ಯತ್ನಿಸುತ್ತದೆ. ಒಟ್ಟಿನಲ್ಲಿ ಸಮಾಜವನ್ನು ವಶಪಡಿಸಿಕೊಳ್ಳಲು ಅದು ಶತಯತ್ನ ಮಾಡುತ್ತದೆ. ಅದು ಮತೀಕರಿಸಿದ ಸಮಾಜವನ್ನು ಶುದ್ಧೀಕರಿಸಲು ಹಲವಾರು ವರ್ಷ ಬೇಕಾಗುತ್ತದೆ. ಸಾರ್ವಜನಿಕ ಸಂಪತ್ತನ್ನು ಅಕ್ರಮವಾಗಿ ಸಂಗ್ರಹಿಸುವ ರಾಜಕೀಯ ಭ್ರಷ್ಟತೆ ನಾಡಿಗೆ ಆರ್ಥಿಕ ನಷ್ಟ ತರುತ್ತದೆ. ಕೋಮುವಾದವು ಸಾಮಾಜಿಕ ದೇಹದ ನರನಾಡಿಗಳನ್ನು ನಂಜಾಗಿಸುತ್ತದೆ. ಫ್ಯಾಸಿಸ್ಟ್ ರಾಜಕಾರಣಕ್ಕೂ ಕೇವಲ ಅಧಿಕಾರವಾದಿ ಮತ್ತು ಭ್ರಷ್ಟಾಚಾರಿ ಸಾಮಾನ್ಯ ಪಕ್ಷಗಳಿಗೂ ವ್ಯತ್ಯಾಸವಿರುವುದು ಇಲ್ಲೇ.

ಕರ್ನಾಟಕದಲ್ಲಿ ಬಿಜೆಪಿ ತನ್ನ ಸಾಮಾಜಿಕ ಮತ್ತು ಭೌಗೋಳಿಕ ನೆಲೆಯನ್ನು ಚೆನ್ನಾಗಿ ವಿಸ್ತರಿಸಿಕೊಂಡಿದೆ. ಕೆಲವು ಚಿಂತಕರು ವ್ಯಾಖ್ಯಾನಿಸಿರುವಂತೆ ಅದರ ಗೆಲುವು ಬಲಿಷ್ಠ ಜಾತಿಗಳು ಕೆಳಜಾತಿಗಳ ವಿರುದ್ಧ ಸಾಧಿಸಿರುವ ಗೆಲುವಿನಂತೆ ಕಾಣುವುದು ನಿಜ. ಆದರೆ ಬಲಿಷ್ಠ ಜಾತಿಗಳು ಕೆಳಜಾತಿಗಳ ವಿರುದ್ಧ ಅಧಿಕಾರಕ್ಕಾಗಿ ಒಂದಾಗುತ್ತವೆ. ಅಧಿಕಾರ ಬಂದೊಡನೆ ಅವುಗಳ ಒಳಗಿನ ವೈರುಧ್ಯಗಳು ಸ್ಫೋಟಗೊಳ್ಳತೊಡಗುತ್ತವೆ; ಅದರಲ್ಲೂ ರಾಜಕೀಯ ಅಧಿಕಾರ ಮತ್ತು ಸಂಪತ್ತು ಹಂಚಿಕೆಗಾಗಿ ಸಂಘರ್ಷ ಮಾಡಿದ ಚರಿತ್ರೆ ಲಿಂಗಾಯತ ಮತ್ತು ಬ್ರಾಹ್ಮಣ ಸಮುದಾಯಗಳಿಗಿದೆ. ಇದು ವಿಜಯನಗರ ಕಾಲದಲ್ಲೂ ಮೈಸೂರೊಡೆಯರ ಕಾಲದಲ್ಲೂ ವಸಾಹತುಶಾಹಿ ಪ್ರಭುತ್ವದ ಪ್ರಯೋಜನ ಪಡೆಯಲು ಮುಂಬೈ ಕರ್ನಾಟಕದಲ್ಲಿ ನಡೆದಿದೆ. ಬಿಜೆಪಿ ಗೆಲುವಿನ ಕ್ರೆಡಿಟ್ ಪಡೆಯಲು ಮತ್ತು ಯಡಿಯೂರಪ್ಪನವರ ಮೇಲೆ ಹಿಡಿತ ಸಾಧಿಸಲು ಈ ಸಮುದಾಯಗಳ ನಡುವೆ ಒಳಸ್ಪರ್ಧೆ ಏರ್ಪಡಬಹುದು. ಆದರೆ ಅಧಿಕಾರ ಮತ್ತು ಸಂಪತ್ತನ್ನು ಹಂಚಿಕೊಳ್ಳಲು ತಮ್ಮೊಳಗಿನ ವೈರುಧ್ಯಗಳನ್ನು ಅವು ತಾತ್ಕಾಲಿಕವಾಗಿ ಬದಿಗಿಟ್ಟು ಈಗ ಸಾಧಿತವಾಗಿರುವ ಏಕತೆಯನ್ನು ಕಾಪಾಡಿಕೊಂಡೂ ಹೋಗಬಹುದು.

ಕರ್ನಾಟಕದಲ್ಲಿ ಬಿಜೆಪಿ ಅಧಿಕಾರಕ್ಕೆ ಬಂದಿರುವುದಕ್ಕೆ ಪ್ರಗತಿಪರರು ಬೆಚ್ಚಿರುವುದು ನಿಜ. ಆದರೆ ಅದು ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದಿರುವುದು ಹೊಸತಲ್ಲ. ಹಿಂದೆ ಅದರ ಸಹಾಯದಿಂದ ಕರ್ನಾಟಕದಲ್ಲಿ ಜನತಾಪಕ್ಷವು ಅಧಿಕಾರ ನಡೆಸಿದೆ. ಕಳೆದ ಸರ್ಕಾರದಲ್ಲಂತೂ ಅದು ಅರ್ಧ ಅಧಿಕಾರಕಾರದಲ್ಲಿತ್ತು. ಎನ್‌ಡಿಎ ಸರ್ಕಾರದಲ್ಲಿ ಅದು ಇಡೀ ದೇಶವನ್ನಾಳಿತು. ಸಮಸ್ಯೆಯೆಂದರೆ ಸಂಘಪರಿವಾರವು ಅಧಿಕಾರದಲ್ಲಿರಲಿ ಇಲ್ಲದಿರಲಿ, ಸಮಾಜವನ್ನು ಮತೀಕರಿಸುವ ಪ್ರಕ್ರಿಯೆ ನಿರಂತರ ನಡೆದಿರುತ್ತದೆ. ರಾಜಕೀಯ ಆಕಾರ ಗ್ರಹಣದಿಂದ ಈ ಪ್ರಕ್ರಿಯೆಯ ಸ್ವರೂಪ ಬದಲಾಗಬಹುದು ಇಲ್ಲವೇ ವೇಗ ಹೆಚ್ಚಾಗಬಹುದು. ಚುನಾವಣಾ ಗೆಲುವುಗಳಿಗೂ ಸಾಮಾಜಿಕ ಮತೀಕರಣದ ಪ್ರಕ್ರಿಯೆಗೂ ತಾರ್ಕಿಕ ಸಂಬಂಧ ಇರಬೇಕಿಲ್ಲ. ಉಡುಪಿಯಲ್ಲಿ ಕಾಂಗ್ರೆಸ್ ಅಭ್ಯರ್ಥಿ ಗೆದ್ದಿದ್ದರೂ ಕೋಮುವಾದಿ ಚಟುವಟಿಕೆಯೇನೂ ಕಮ್ಮಿಯಾಗುತ್ತಿರಲಿಲ್ಲ ಎಂದು ಅಲ್ಲಿನ ಗೆಳೆಯರು ಹೇಳುತ್ತಾರೆ. ಆದ್ದರಿಂದ ಕೋಮುವಾದದ ವಿರುದ್ಧದ ಹೋರಾಟ ಕೂಡ ನಿರಂತರ ನಡೆಯುತ್ತಲೇ ಇರಬೇಕಾಗುವುದು. ರಾಜಕೀಯ ಅಧಿಕಾರದ ಮರೆಯಲ್ಲಿ ಮತೀಯವಾದವು ಸಮಾಜವನ್ನು ಹರಿದುಹಾಕದಂತೆ ಎಚ್ಚರ ವಹಿಸುವುದೊಂದೇ ಈಗಿರುವ ದಾರಿ. ಈ ಕೆಲಸವನ್ನು ಪ್ರಗತಿಪರ ಸಂಘಟನೆಗಳು, ರೈತ ದಲಿತ ಚಳುವಳಿಗಳು, ಮಾಧ್ಯಮಗಳು, ಎಚ್ಚೆತ್ತ ಜನರು, ಲೇಖಕರು, ಚಿಂತಕರು ಮಾಡಬೇಕಿದೆ. ವಿರೋಧ ಪಕ್ಷಗಳಿಂದ ಇದನ್ನು ನಿರೀಕ್ಷಿಸುವಂತಿಲ್ಲ.

ಶಿವಮೊಗ್ಗೆಯ ಸಾಹಿತ್ಯ ಸಮ್ಮೇಳನದ ಭಾಷಣದಲ್ಲಿ ನಿಸಾರ್ ಅಹಮದ್ ಅವರು ಯಡಿಯೂರಪ್ಪ ಮುಖ್ಯಮಂತ್ರಿಯಾಗಬೇಕು ಎಂದು ಹೇಳಿದ್ದರು. ಇದನ್ನು ಅವರ ಮೇಲಿನ ವೈಯಕ್ತಿಕ ವಿಶ್ವಾಸದಿಂದ ಹೇಳಿದರೊ, ಅಧಿಕಾರಸ್ಥರ ಜತೆ ನಿಷ್ಠುರ ಕಟ್ಟಿಕೊಳ್ಳದೆ ಒಲೈಸುವ ಗುಣದಿಂದ ಹೇಳಿದರೂ ಗೊತ್ತಿಲ್ಲ. ಜೆಡಿಎಸ್ ಯಡಿಯೂರಪ್ಪನವರಿಗೆ ಮುಖ್ಯಮಂತ್ರಿ ಸ್ಥಾನ ಬಿಟ್ಟುಕೊಡದಿದ್ದಾಗಲೂ ಅನೇಕ ಲೇಖಕರು ಚಿಂತಕರು ಇದೇ ಮಾತನ್ನು ಹೇಳಿದ್ದರು. ಇದನ್ನು ಲಿಂಗಾಯತ-ಶೈವ ಮಠಾಧಿಪತಿಗಳು ಹಾಗೂ ಕೆಲವು ಲೇಖಕರು ಬಹಿರಂಗವಾಗಿಯೂ ಆಂತರ್ಯದಲ್ಲೂ ಹಾರೈಸಿದ್ದರು. ಇವರೆಲ್ಲರ ಹಾರೈಕೆ ಈಗ ಈಡೇರಿದೆ. ವ್ಯಂಗ್ಯವೆಂದರೆ, ಇವರ ಮತ್ತು ಸಂಘಪರಿವಾರದ ಹಾರೈಕೆಯು ಏಕಕಾಲಕ್ಕೆ ಈಡೇರಿರುವುದು.

**ಡಾ॥ ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ

# ರೈತರ ಒಕ್ಕಲುತನದ ಸಮಸ್ಯೆಗಳು

**ಅರ್ಜುನ್ ಸೇನ್‌ಗುಪ್ತ ವರದಿ**

**ನ**ಮ್ಮ ದೇಶದಲ್ಲಿ ಬಹುತೇಕ ರೈತರು ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ಹಿಡುವಳಿ ಜಮೀನನ್ನು ಗುತ್ತಿಗೆಗೆ ತೆಗೆದುಕೊಳ್ಳುವ ಪದ್ಧತಿಯಿದೆ. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಮಧ್ಯವರ್ತಿ ಕಾಯಿದೆಗಳನ್ನು ರದ್ದುಗೊಳಿಸಿ ಗುತ್ತಿಗೆ ಕಾನೂನನ್ನು ಜಾರಿಗೆ ತರಲಾಯಿತು. ಈ ಕಾನೂನಿನನ್ವಯ ಕಾನೂನುಬದ್ಧವಾಗಿ ಮತ್ತು ಪಾರಂಪರಿಕವಾಗಿ ಗುತ್ತಿಗೆಗೆ ತೆಗೆದುಕೊಳ್ಳುತ್ತಿದ್ದ ಅಥವಾ ಗುತ್ತಿಗೆಗೆ ಕೊಡುತ್ತಿದ್ದ ಕೆಲವೊಂದು ಕುಟುಂಬಗಳನ್ನು ಹೊರತುಪಡಿಸಿ ಗುತ್ತಿಗೆ ಪದ್ಧತಿಯನ್ನು ಹಲವಾರು ರಾಜ್ಯಗಳು ರದ್ದುಗೊಳಿಸಿದವು. ಒಂದೆರಡು ಸಣ್ಣಪುಟ್ಟ ಉದಾಹರಣೆಗಳನ್ನು ಹೊರತುಪಡಿಸಿದರೆ, ಮೊದಲಿನಿಂದಲೂ ಸಾಗುವಳಿ ಮಾಡಿಕೊಂಡು ಬರುತ್ತಿದ್ದ ಗುತ್ತಿಗೆದಾರರಿಗೆ ಆಯಾ ಜಮೀನಿನ ಒಡೆತನವನ್ನು ನೀಡುವುದು ಭೂ ಸುಧಾರಣೆಯ ಉದ್ದೇಶವಾಗಿತ್ತು. ಇಂತಹ ವಿಚಾರಗಳಲ್ಲಿ ರಾಜ್ಯಗಳು ಕೆಲವೊಂದು ನಿಬಂಧನೆಗಳನ್ನು ರೂಪಿಸಿದ್ದವು.

ವಾಸ್ತವದಲ್ಲಿ ಗುತ್ತಿಗೆ ಪದ್ಧತಿಯಲ್ಲಿ ಜಾರಿಗೆ ತಂದ ಸುಧಾರಣೆಯು ಅಂದಿನ ದಿನಗಳಲ್ಲಿ ದಾಖಲಾಗದೇ ಚಲಾವಣೆಯಲ್ಲಿದ್ದ ಗುತ್ತಿಗೆ ವ್ಯವಹಾರಗಳನ್ನು ಒಳಗೊಂಡಿರಲಿಲ್ಲ. ಜೊತೆಗೆ, ಭೂಮಿಗೆ ಅಂದಿದ್ದ ಅತಿ ಹೆಚ್ಚಿನ ವ್ಯವಹಾರಗಳಿಗೆ ಬಾಡಿಗೆ, ಜಾಮೀನು ಮೊದಲಾದವುಗಳಿಗೆ ಸಂಬಂಧಪಟ್ಟಂತೆ ಯಾವುದೇ ದಾಖಲೆಗಳೂ ಇರುತ್ತಿರಲಿಲ್ಲ. ಒಂದರ್ಥದಲ್ಲಿ ಗುತ್ತಿಗೆ ಪದ್ಧತಿಯಲ್ಲಿ ತಂದ ಸುಧಾರಣೆಯು ಗುತ್ತಿಗೆದಾರರಿಗೆ ಇಲ್ಲಸಲ್ಲದ ಅಡಚಣೆಗಳಿಗೆ ಎಡೆಮಾಡಿಕೊಟ್ಟಿತಲ್ಲದೆ, ಅವರು ಜಮೀನನ್ನು ದೇಣಿಗೆ ಬಿಟ್ಟುಕೊಡುವುದೂ ಕಷ್ಟಸಾಧ್ಯವಾಯಿತು.

ಮೊದಲಿನಿಂದಲೂ ನಮ್ಮ ದೇಶದಲ್ಲಿ ಭೂಮಿ ಮತ್ತು ಜನಸಂಖ್ಯೆಯ ನಡುವಣ ಪರಿಮಾಣ ಅನುಕೂಲಕರವಾಗಿದ್ದುದ್ದರಿಂಡ ಗುತ್ತಿಗೆದಾರಿ ಪದ್ಧತಿಯಲ್ಲಿ ವಿಧಿಸುತ್ತಿದ್ದ ಷರತ್ತುಗಳು, ಬೀಳು ಮತ್ತು ಅರೆಬೀಳು ಭೂಮಿಗೆ ಸಂಬಂಧಪಟ್ಟಂತೆ ಒಂದೇ ರೀತಿಯದಾಗಿರುತ್ತಿರಲಿಲ್ಲ. ಅಂತೆಯೇ ಅತಿ ಹೆಚ್ಚು ಸಾಗುವಳಿಯಾಗುತ್ತಿದ್ದ ಪ್ರದೇಶಗಳಲ್ಲೂ, ಒಪ್ಪಂದಗಳಲ್ಲಿ ಕಾಣಿಸುತ್ತಿದ್ದ ಷರತ್ತುಗಳು ಬೇರೆಯೇ ಆಗಿರುತ್ತಿದ್ದವು. ಬೀಳು ಮತ್ತು ಅರೆಬೀಳು ಭೂಮಿಗಳಿದ್ದ ಕಡೆಗಳಲ್ಲಿ ಸಣ್ಣಪುಟ್ಟ ಭೂ ಹಿಡುವಳಿದಾರರು ಸಾಮಾನ್ಯವಾಗಿ ದೊಡ್ಡ ದೊಡ್ಡ ಬೇಸಾಯಗಾರರಿಗೆ ತಮ್ಮ ಜಮೀನನ್ನು ಗುತ್ತಿಗೆಗೆ ಬಿಟ್ಟುಕೊಡುತ್ತಿದ್ದುದುಂಟು. ಬಂಡವಾಳ ಕೇಂದ್ರಿತ ಬೇಸಾಯ ಪದ್ಧತಿಯು ಹಲವಾರು ಕಡೆ ಪ್ರಾರಂಭಗೊಂಡು ಉತ್ತರದಲ್ಲಿ ಪಂಜಾಬ್ ಮತ್ತು ಹರ್ಯಾಣ ರಾಜ್ಯಗಳಿಗೂ ಹರಡಿತು. ಬಾಡಿಗೆ ಪಾವತಿಸುತ್ತಿದ್ದ ಮೇಲ್ವರ್ಗದ ಗುತ್ತಿಗೆದಾರರ ಮತ್ತು ಪಾಲುಗುತ್ತಿಗೆದಾರರ ನಡುವೆ ಇದ್ದ ತಾರತಮ್ಯವು ಬ್ರಿಟಿಷರ ಕಾಲದಲ್ಲಿಯೇ ಅಸ್ತಿತ್ವದಲ್ಲಿತ್ತು. ಮೇಲ್ವರ್ಗದವರು ಭೂ ಒಡೆಯರಾದ ನಂತರ ಪಾಲುಗುತ್ತಿಗೆಯ ಮೂಲಕ ಬಾಡಿಗೆ ವಸೂಲು ಮಾಡುವುದು ಬಹುಮಟ್ಟಿಗೆ ಆಚರಣೆಗೆ ಬಂದಿತು. ಆದರೆ ಹೆಚ್ಚಿನ ಬಂಡವಾಳದ ಹೂಡಿಕೆಯಿಂದಾಗಿ ಮತ್ತು ಹೆಚ್ಚಿನ ವಾಣಿಜ್ಯೀಕರಣ ಪಕ್ರಿಯೆಯಿಂದಾಗಿ ಮತ್ತೊಮ್ಮೆ ನಿಗದಿತ ಅವಧಿಯ ಮತ್ತು ನಗದು ಗುತ್ತಿಗೆ ಪದ್ಧತಿಗಳು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿವೆ.

> ಒಟ್ಟಾರೆಯಾಗಿ ರೈತರ ಬದುಕಿಗೆ ಸಂಬಂಧಪಟ್ಟಂತೆ (ರೈತರ ಕುರಿತು ರಾಷ್ಟ್ರೀಯ ನೀತಿಯೂ ಹೇಳಿರುವಂತೆ) ಸಮಗ್ರವಾದ ಸಾಮಾಜಿಕ ಭದ್ರತೆ ವ್ಯವಸ್ಥೆಯೊಂದನ್ನು ಜಾರಿಗೆ ತರಬೇಕು. ಭೂಸುಧಾರಣೆಯ ಜೊತೆ ಜೊತೆಗೆ ಇಂತಹ ಒಂದು ಉಪಕ್ರಮಕ್ಕೂ ಸರ್ಕಾರವು ಮುಂದಾದರೆ ರೈತರ ಬದುಕಿನಲ್ಲಿ ಹೊಸ ಅಧ್ಯಾಯವೊಂದು ಪ್ರಾರಂಭವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ದಿಶೆಯಲ್ಲಿ ನೀತಿ ನಿಯಮಗಳನ್ನು ರೂಪಿಸುವಾಗ ಗುತ್ತಿಗೆದಾರರಿಗೆ ಎದುರಾಗುವ ವಿವಿಧ ಪರಿಸ್ಥಿತಿಗಳನ್ನು ಹಾಗೂ ಅಭದ್ರತೆಗಳನ್ನು ಗಮನದಲ್ಲಿಡಬೇಕಾದ ಅಗತ್ಯವಿದೆ. ಈ ಗುತ್ತಿಗೆದಾರರ ನಡುವೆ ಕೆಲವೊಂದು ಸಮಾನ ಅಂಶಗಳೂ ಇರುತ್ತವೆ. ಹಲವು ದಿನನಿತ್ಯದ ಸಮಸ್ಯೆಗಳನ್ನು ಎದುರಿಸುವುದೇ ಅಲ್ಲದೆ ಹೆಚ್ಚಿನ ಮೊತ್ತದ ಬಾಡಿಗೆಯನ್ನು ತೆರಬೇಕಾಗುತ್ತದೆ. ಯಾವುದೇ ದಾಖಲೆಯೂ ಇಲ್ಲದೆ ಕೇವಲ ಬಾಯಿಮಾತಿನ ಆಧಾರದ ಮೇಲೆ ವ್ಯವಹಾರಗಳು ಜರುಗುವುದರಿಂದಾಗಿ ಅವರು ಗೇಣಿ ಹಕ್ಕುಗಳಿಂದ ವಂಚಿತರಾಗುತ್ತಾರೆ. ಇದರಿಂದಾಗಿ ಆ



ಜನರು ಬ್ಯಾಂಕು ಮುಂತಾದ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯಲು ಸಾಧ್ಯವಾಗುವುದಿಲ್ಲ. ಇಂತಹ ಹಲವಾರು ಸಮಸ್ಯೆಗಳು ಗೇಣಿದಾರರ ಬದುಕನ್ನು ಮತ್ತಷ್ಟು ದುರ್ಭರಗೊಳಿಸುತ್ತವೆ. ಅಂಚಿನಲ್ಲಿರುವ ಹಾಗೂ ಸಣ್ಣಪುಟ್ಟ ರೈತರ ಪಾಡಂತೂ ಅಸಹನೀಯವಾಗುವುದು ಅನಿವಾರ್ಯವಾಗುತ್ತದೆ.




*ಸಾಗುವಳಿಯಲ್ಲಿರುವ ಗುತ್ತಿಗೆದಾರರು ಪಡೆದಿರುವ ಭೂ ಶೇಕಡಾವಾರು (೧೯೯೧-೯೨ ಮತ್ತು ೨೦೦೨-೨೦೦೩) : ಕಾರಿಫ್ ಬೆಳೆ ಮಾತ್ರ*

ಬಹುತೇಕ ಗುತ್ತಿಗೆ ವ್ಯವಹಾರಗಳು ತೆರೆಮರೆಯಲ್ಲೇ ಜರುಗುವುದರಿಂದ ಭೂ ಹಿಡುವಳಿ ಸಮೀಕ್ಷೆಗಳು ವಸ್ತುಸ್ಥಿತಿಯನ್ನು ಹೊರಗೆಡಹಲು ಸಾಧ್ಯವಾಗುವುದಿಲ್ಲ. ಇಷ್ಟಾದರೂ ೧೯೫೩-೫೪ರಿಂದ ನಡೆಸಲಾಗಿರುವ ಈ ಸಮೀಕ್ಷೆಗಳು ಭೂ ಗುತ್ತಿಗೆಗೆ ಸಂಬಂಧಪಟ್ಟಂತೆ ಪ್ರಕಟಿಸಿರುವ ಅಂಕಿಅಂಶಗಳು ಇಂದಿಗೂ ಪ್ರಸ್ತುತವಾಗಿವೆ. ಇಡೀ ದೇಶದಲ್ಲಿ ಒಟ್ಟಾರೆಯಾಗಿ ಗುತ್ತಿಗೆಗೆ ಪಡೆದ ಜಮೀನು ಶೇ.೧೦ರಷ್ಟಿದೆ. ಹಾಗೆ ಗುತ್ತಿಗೆಗೆ ಪಡೆದ ಜಮೀನಿನ ಪ್ರಮಾಣವು ೧೯೯೧-೧೯೯೨ ಮತ್ತು ೨೦೦೨-೨೦೦೩ರ ಅವಧಿಯಲ್ಲಿ ಒಟ್ಟಾರೆಯಾಗಿ ಅತಿ ಕಡಿಮೆ ಮಟ್ಟದಲ್ಲಿ ಇಳಿಮುಖ ಕಂಡಿದೆ.

ಮೊದಲ ೩ ದಶಕಗಳ ಅವಧಿಯಲ್ಲಿ ಸ್ವಲ್ಪ ಇಳಿಮುಖ ಕಂಡದ್ದನ್ನು ಬಿಟ್ಟರೆ ೧೯೮೧-೮೨ರಿಂದ ಗುತ್ತಿಗೆ ನೀಡಿದ್ದ ಜಮೀನಿನ ಒಟ್ಟು ಪ್ರಮಾಣದಲ್ಲಿ ಅಷ್ಟಾಗಿ ಏರುಪೇರುಗಳಿಲ್ಲ. ೧೯೫೩-೫೪ರ ಅವಧಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಉಳುಮೆಗೆ ದೊರಕಿರುವ ಭೂಮಿಯ ಪ್ರಮಾಣ ಶೇ.೨೦.೫೫ರಷ್ಟಿದ್ದು, ಅದು ೧೯೬೧-೬೨ರ ಮತ್ತು ೧೯೭೧-೭೨ರ ಅವಧಿಯಲ್ಲಿ ಶೇ. ೧೧ಕ್ಕೆ ಇಳಿಯಿತು. ೧೯೯೧-೯೨ರ ಅವಧಿಯಲ್ಲಿ ಶೇ.೮.೩೦ರಷ್ಟು ಹೆಚ್ಚಾದುದು ಮತ್ತೆ ೨೦೦೨-೨೦೦೩ ರಲ್ಲಿ ೬.೫ರಷ್ಟು ಇಳಿಮುಖ ಕಂಡಿತು.

ಗುತ್ತಿಗೆ ವ್ಯವಸಾಯದಡಿ ಉಳುಮೆಗೆ ಬಂದ ಒಟ್ಟು ಪ್ರದೇಶದಲ್ಲಿ ಅಂಚಿನಲ್ಲಿರುವ ಮತ್ತು ಸಣ್ಣ ಹಿಡುವಳಿ ಭೂಮಿಯ ಪ್ರಮಾಣವು ಶೇ.೩೫.೬ರಿಂದ ಶೇ.೫೨.೩ಕ್ಕೆ ಏರಿತು.




*ಗುತ್ತಿಗೆ ನೀಡಿರುವ ಕ್ಷೇತ್ರದಲ್ಲಿ ಶೇಕಡಾವಾರು ಭಾಗಗಳು*

ಅದೇ ಸಂದರ್ಭದಲ್ಲಿ ಮಧ್ಯಮ ಹಿಡುವಳಿ ಗುತ್ತಿಗೆ ಭೂಮಿಯ ಪ್ರಮಾಣ ಇಳಿಮುಖ ಕಂಡಿತು. ಸ್ವಾರಸ್ಯಕರ ಅಂಶವೆಂದರೆ, ಅತಿ ಹೆಚ್ಚು ಪ್ರಮಾಣದ ಭೂಮಿಯಿಲ್ಲದವರು (ಶೇ. ೫೫.೧) ಅಂದರೆ, ೧ ಹೆಕ್ಟೇರ್‌ಗಿಂತಲೂ ಕಡಿಮೆ ಹಿಡುವಳಿ ಹೊಂದಿರುವವರೆ ಜಮೀನನ್ನು ಗುತ್ತಿಗೆಗೆ ನೀಡಿದ್ದಾರೆ. ಒಟ್ಟಿನಲ್ಲಿ ನಮ್ಮ ದೇಶದಲ್ಲಿ ಬಹುತೇಕವಾಗಿ ಚಾಲ್ತಿಯಲ್ಲಿರುವುದು ಪಾಲುಗುತ್ತಿಗೆ ಪದ್ಧತಿ ಎಂಬ ಅಂಶವು ೧೯೫೩-೫೪ರ ಸಮೀಕ್ಷೆಯಿಂದ ತಿಳಿದುಬರುತ್ತದೆ.

ಗುತ್ತಿಗೆ ಪದ್ಧತಿಯಲ್ಲಿರುವ ಅನೇಕ ಮಾದರಿಗಳಿಂದ ಒದಗಿಬರುವ ಅನುಕೂಲಗಳು ಅನಾನುಕೂಲತೆಗಳ ಕುರಿತು ಬಹಳಷ್ಟು ಚರ್ಚೆಗಳು ಜರುಗುತ್ತಿವೆ. ಪಾಲು ಗುತ್ತಿಗೆದಾರಿ ಪದ್ಧತಿಯಿಂದಾಗಿ ಉಳುಮೆದಾರನ ಸಾಮರ್ಥ್ಯಕ್ಕೆ ಧಕ್ಕೆಯುಂಟಾಗುವುದಲ್ಲದೆ ಮಾರುಕಟ್ಟೆಯ ಏಳುಬೀಳುಗಳಿಗೆ ಅವನು ತುತ್ತಾಗುತ್ತಾನೆ.

ಯಾವ ದಾಖಲೆಯೂ ಇಲ್ಲದೆ ರೈತಾಪಿ ಜನರು ವ್ಯವಹರಿಸುತ್ತಿರುವ ಹಿನ್ನೆಲೆಯಲ್ಲಿ ಹಲವಾರು ಸಮಸ್ಯೆಗಳು ಉಂಟಾಗಿವೆ. ಈ ಕುರಿತು ಸರ್ಕಾರವು ತುರ್ತಾಗಿ ಹೊಸ ನೀತಿಯೊಂದನ್ನು ರೂಪಿಸುವುದು ಇಂದಿನ ಅಗತ್ಯವಾಗಿದೆ. ಈ ನಿಟ್ಟಿನಲ್ಲಿ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವ ಸಲುವಾಗಿ ೧೦ ಮತ್ತು ೧೧ನೇ ಪಂಚವಾರ್ಷಿಕ ಯೋಜನೆಗಳಲ್ಲಿ ಸೂಕ್ತ ಸಲಹೆಗಳನ್ನು ನೀಡಲಾಗಿದೆ.

**ಇತರ ನಿರ್ಬಂಧಗಳು**

ಸಂಪೂರ್ಣವಾಗಿ ಪ್ರಕೃತಿಯನ್ನೇ ಅವಲಂಬಿಸಿರುವುದರಿಂದಾಗಿ ಬೇಸಾಯದಲ್ಲಿ ಹೂಡಿದ ಹಣಕ್ಕೆ ತಕ್ಕ ವರಮಾನ ಗಳಿಸುವುದಿರಲಿ, ಮೂಲ ಹಣಕ್ಕೆ ಯಾವುದೇ ಖಾತರಿಯೂ ಇರುವುದಿಲ್ಲ. ಉದಾರೀಕರಣದ ಪ್ರಕ್ರಿಯೆಗೆ ಒಳಗಾದ ಮೇಲಂತೂ ರೈತರು ಮಾರುಕಟ್ಟೆಯ ಏಳುಬೀಳುಗಳಿಗೆ ತುತ್ತಾಗಿ ಕಂಗಾಲಾಗುತ್ತಿದ್ದಾರೆ. ವಾಣಿಜ್ಯೀಕರಣ ಗೊಂಡ ಬೇಸಾಯಕ್ಕಂತೂ ಈ ಮಾತು ಹೆಚ್ಚು ಅನ್ವಯವಾಗುತ್ತದೆ.

ಸಣ್ಣ ಹಿಡುವಳಿದಾರರು ಉತ್ಪಾದಿಸುವ ಒಟ್ಟಾರೆ ಬೆಳೆಯು ಒಂದೇ ಬಾರಿಗೆ ಮಾರುಕಟ್ಟೆಗೆ ಬಂದು ಬೀಳುತ್ತದೆ. ಮೊದಲೇ ಸಾಲದ ಜಾಲದಲ್ಲಿ ಸಿಕ್ಕಿ ನಲುಗಿಹೋಗುತ್ತಿರುವ ಸಣ್ಣ ರೈತನು ಹಣವಂತ ವ್ಯಾಪಾರಸ್ಥರೊಡನೆ ಚೌಕಾಶಿ ಮಾಡುವ ಶಕ್ತಿ ಹೊಂದಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಅಂತಹ ರೈತರ ಹಿತಾಸಕ್ತಿಗಳನ್ನು ಕಾಪಾಡಲು ಸರ್ಕಾರವಾಗಲಿ ಪ್ರಭುತ್ವವಾಗಲಿ ನೆರವಾಗಬೇಕು. ಈ ದಿಶೆಯಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ನಿಗದಿಪಡಿಸಲಾಗಿರುವ ಕ್ರಮಗಳು ಸಣ್ಣ ರೈತರಿಗೆ ಯಾವುದೇ ಪರಿಹಾರವನ್ನು ನೀಡಿಲ್ಲ. ಇದರಿಂದಾಗಿ ಆತನ ಶ್ರಮಕ್ಕಾಗಲಿ ಅವನು ಹೂಡಿದ ಬಂಡವಾಳಕ್ಕಾಗಲಿ ಯಾವ ಪ್ರತಿಫಲವೂ ಲಭ್ಯವಾಗುತ್ತಿಲ್ಲ. ಒಂದೆಡೆ ಸಾರ್ವಜನಿಕ ಮಾರುಕಟ್ಟೆ ಸೇವೆಗಳು ಕುಂಠಿತಗೊಳ್ಳುತ್ತಿವೆ. ಖಾಸಗಿ ವ್ಯಾಪಾರಸ್ಥರಿಗೆ ಅತಿಯಾಗಿ ಲಾಭ ಗಳಿಸಲು ಹೆಚ್ಚಿನ ಅವಕಾಶಗಳುಂಟಾಗುತ್ತಿವೆ. ಪರ್ಯಾಯ ಮಾರ್ಗವಿಲ್ಲದೆ ರೈತನು ಅನವಶ್ಯಕವಾದ ಕೀಳು ಮಟ್ಟದ ಬೆಳೆ ಹಾಗೂ ರಸಗೊಬ್ಬರ ಮೊದಲಾದವುಗಳಿಗೆ ಮೊರೆಹೋಗುವಂತಾಗಿದೆ. ಕೃಷಿ ಉತ್ಪಾದನೆ ಮಾರುಕಟ್ಟೆ ಸಂಸ್ಥೆಯು ಈ ನಿಟ್ಟಿನಲ್ಲಿ ಹಾಲಿ ಇರುವ ಕಾನೂನಿಗೆ ಕೆಲವು ತಿದ್ದುಪಡಿಗಳನ್ನು ತಂದಿದೆ, ಕೆಲವು ಕಲಂ/ವಿಧಿಗಳನ್ನು ತೆಗೆದುಹಾಕಿದೆ, ನಿಜ. ಆದರೆ ವಾಸ್ತವದಲ್ಲಿ ಈ ಕ್ರಮದಿಂದಾಗಿ ಸಂಘಟಿತ ಖಾಸಗಿ ವ್ಯಾಪಾರಸ್ಥರಿಗೇ ಹೆಚ್ಚು ಅನುಕೂಲವಾಗಿದೆ. ಕೃಷಿಕರ ಹಾಗೂ ಮಾರುಕಟ್ಟೆಗೆ ನೇರ ಸಂಬಂಧ ಕಲ್ಪಿಸುವ ನಿಟ್ಟಿನಲ್ಲಿ ಸರ್ಕಾರವು ಗುತ್ತಿಗೆ ಬೇಸಾಯ ಪದ್ಧತಿಯನ್ನು ಜಾರಿಗೆ ತರಲು ಚಿಂತನೆ ನಡೆಸಿದೆ. ಈ ಕ್ರಮದಿಂದ ವಿವಿಧ ಬಗೆಯ ಉತ್ಪನ್ನಗಳನ್ನು ಬೆಳೆಯುವ ಅವಕಾಶಗಳು ಉಂಟಾಗಬಹುದು. ಸಾಮಾನ್ಯ ರೈತನಿಗೆ ಇದರಿಂದ ಯಾವ ಪ್ರಯೋಜನವೂ ಆಗಲಾರದು. ಆದರೆ ರೈತ ಸಮುದಾಯವು ತಮ್ಮತಮ್ಮಲ್ಲೇ ಹೆಚ್ಚು ಸಂಘಟಿತರಾಗುವುದರಿಂದಾಗಿ ಈ ಮೂಲಕ ಎದುರಾಗುವ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸಾಧ್ಯವಿದೆ. ವಿವಿಧ ಕಾರಣಗಳಿಂದ ನಿರೀಕ್ಷಿತ ಮಟ್ಟದಲ್ಲಿ ಬೆಳೆ ವಿಫಲಗೊಂಡಾಗ ವಿಮೆ ರೈತರಿಗೆ ನೆರವಾಗುತ್ತದೆ. ಸಹಕಾರಿ ಸಂಸ್ಥೆಗಳಿಂದ ರೈತರು ಸಾಲ ಪಡೆದಾಗ ಅಂತಹ ವ್ಯವಹಾರಕ್ಕೆ ಸಂಬಂಧಪಟ್ಟಂತೆ ವಿಮೆ ಮಾಡಿಸಲಾಗುತ್ತದೆ ಅಷ್ಟೆ. ಕೇವಲ ಶೇ. ೪ರಷ್ಟು ಜನ ರೈತರು ವಿಮೆ ಮಾಡಿಸುತ್ತಾರೆ ಎಂದು ವರದಿಗಳಿಂದ ತಿಳಿದುಬರುತ್ತದೆ. ಶೇ. ೫೭ರಷ್ಟು ರೈತರಿಗೆ ವಿಮೆ ಕುರಿತ ಯಾವುದೇ ಅರಿವೂ ಇಲ್ಲ. ಶೇ. ೩ರಷ್ಟು ರೈತರು ವಿಮೆ ಕಂತು ಪಾವತಿಸುವ ಸ್ಥಿತಿಯಲ್ಲೂ ಇಲ್ಲ.

ರೈತ ಸಮುದಾಯದಲ್ಲಿ ಹೆಚ್ಚಿನವರು ಅನಕ್ಷರಸ್ಥರು. ಅಂತೆಯೇ ತಾವೇ ಒಂದು ಶಕ್ತಿಯಾಗಿ ಸಂಘಟಿತರಾಗಿಲ್ಲ. ತಾಂತ್ರಿಕತೆ, ಸರ್ಕಾರದಿಂದ ದೊರಕುವ ನೆರವು, ಬ್ಯಾಂಕು ಮೊದಲಾದ ಸಂಸ್ಥೆಗಳಿಂದ ಲಭ್ಯವಿರುವ ಯೋಜನೆಗಳ ಬಗ್ಗೆ ಅವರಿಗೆ ಕನಿಷ್ಠ ಪರಿಜ್ಞಾನವೂ ಇಲ್ಲ. ಈ ಎಲ್ಲ ಯೋಜನೆಗಳ ಬಗ್ಗೆ ಇರಬೇಕಾದ ಅರಿವಿಗೂ ರೈತರ ಕನಿಷ್ಠ ಮಟ್ಟದ ಶಿಕ್ಷಣಕ್ಕೂ ಸಂಬಂಧವಿದೆ.

ಕೇರಳ, ತಮಿಳುನಾಡು ಮತ್ತು ಪಂಜಾಬ್ ರಾಜ್ಯಗಳ ರೈತರು ಈ ಯೋಜನೆಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಪಡೆದಿದ್ದಾರೆ. ರೈತ ಸಮುದಾಯದವರ ನಡುವೆ ಹೆಚ್ಚಿನ ಮಟ್ಟದ ಜಾಗೃತಿ ಮತ್ತು ಅರಿವು ಮೂಡಿಸುವುದು ಬಹಳ ಮುಖ್ಯ. ಈ ದಿಶೆಯಲ್ಲಿ ಸರ್ಕಾರಿ ಸಂಸ್ಥೆಗಳಾದ ಕೃಷಿ ವಿಜ್ಞಾನ ಕೇಂದ್ರ, ಆ ಸಂಸ್ಥೆಗಳ ನೌಕರರು ಗ್ರಾಮಾಂತರ ಪ್ರದೇಶಗಳಿಗೆ ನೀಡುವ ಭೇಟಿ – ಇವೇ ಮೊದಲಾದವುಗಳಿಂದ ಯಾವ ಪ್ರಯೋಜನವೂ ಆಗಿಲ್ಲ.

ತಾವೇ ರೂಪಿಸಿಕೊಳ್ಳುವ ಸಂಘಟನೆಗಳು ಮತ್ತು ಸಹಕಾರಿ ಸಂಸ್ಥೆಗಳಿಂದ ರೈತರು ಸ್ವಲ್ಪಮಟ್ಟಿಗಾದರೂ ಸಾಲ, ರಸಗೊಬ್ಬರ ಮತ್ತು ವ್ಯಾಪಾರ ವ್ಯವಹಾರಗಳಂತಹ ವಿಚಾರಗಳಲ್ಲಿ ತಮ್ಮ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ಸಾಧ್ಯವಿದೆ. ಕೇವಲ ಶೇ. ೩೦ರಷ್ಟು ರೈತ ಕುಟುಂಬಗಳವರು ಸಹಕಾರಿ ಸಂಘಗಳ ಸದಸ್ಯರಾಗಿದ್ದಾರೆ. ಆರ್ಥಿಕವಾಗಿ ಕೆಳಮಟ್ಟದಲ್ಲಿರುವ ರೈತ ಕುಟುಂಬಗಳ ಶೇ. ೧೮ರಷ್ಟು ಜನರು ಸದಸ್ಯರಾಗಿದ್ದಾರೆ. ೪ ಹೆಕ್ಟೇರುಗಳಿಗೂ ಹೆಚ್ಚಿನ ಜಮೀನು ಇರುವವರಲ್ಲಿ ಸಹಕಾರಿ ಸಂಸ್ಥೆಗಳಲ್ಲಿ ಸದಸ್ಯರಾಗಿರುವವರು ಶೇ. ೫೦ರಷ್ಟಿದ್ದಾರೆ. ಶೇ. ೧೦ರಷ್ಟು ರೈತರು ಸದಸ್ಯರಾಗಿದ್ದರೂ ಯಾವುದೇ ಸೌಲಭ್ಯಗಳನ್ನು ಪಡೆಯುತ್ತಿಲ್ಲ. ಇಂತಹುದೇ ಅನೇಕ ಅಂಕಿ ಅಂಶಗಳು ಆ ಜನಸಮುದಾಯದಲ್ಲಿ ಸಹಕಾರಿ ಸಂಸ್ಥೆಗಳು, ಸ್ವಸಹಾಯ ಗುಂಪುಗಳು, ಸರ್ಕಾರದ ಯೋಜನೆಗಳು ಮೊದಲಾದವು ನೀಡುವ ಸೌಲಭ್ಯಗಳ ಬಗ್ಗೆ ಹೆಚ್ಚಿನ ಮಟ್ಟದ ಜಾಗೃತಿ ಉಂಟುಮಾಡಬೇಕೆಂಬುದನ್ನು ಒತ್ತಿ ಹೇಳುತ್ತವೆ. ಕೃಷಿಗೆ ತಗಲುವ ಖರ್ಚುಗಳು ದಿನೇ ದಿನೇ ಏರುತ್ತಿವೆ. ಆಗಾಗ್ಗೆ ಬೆಲೆ ವಿಫಲಗೊಳ್ಳುತ್ತಿದೆ. ಈ ಸಮಸ್ಯೆಗಳು ಸಾಲದೆಂಬಂತೆ ಒಟ್ಟಾರೆಯಾಗಿ ಕೃಷಿ ಬೆಳವಣಿಗೆ ಕುಂಠಿತಗೊಳ್ಳುತ್ತಿದ್ದು, ಏರುತ್ತಿರುವ ಸಾಲದ ಹೊರೆಯಿಂದಾಗಿ ರೈತಸಮುದಾಯದವರ ಪರಿಸ್ಥಿತಿ ಶೋಚನೀಯವಾಗಿದೆ. ಶೇ. ೪೦ರಷ್ಟು ರೈತ ಕುಟುಂಬಗಳು ಇಂತಹ ಅಸಹಾಯಕ ಪರಿಸ್ಥಿತಿಯಿಂದ ಬೇಸರಗೊಂಡು ತಮ್ಮ ಮೂಲ ಕಸುಬಾದ ಕೃಷಿಯಿಂದಲೇ ದೂರ ಸರಿಯುತ್ತಿದ್ದಾರೆ. ಶೇ. ೪೪ರಷ್ಟು ಕೆಳ ಹಂತದ ರೈತರದೂ ಇದೇ ಅಭಿಪ್ರಾಯವಾಗಿದೆ.

ಇಡೀ ಕೃಷಿ ಕ್ಷೇತ್ರದ ಅಂತಃಸತ್ವವು ಕರಗಿಹೋಗುತ್ತಿರುವುದರಿಂದಾಗಿ ಆ ಜನರಲ್ಲಿ ಇಂತಹ ಹತಾಶೆಯ ಭಾವನೆ ಉಂಟಾಗಿದೆ.




**ಒಟ್ಟಿನಲ್ಲಿ...**

ನಮ್ಮದು ಅತಿ ಕಡಿಮೆ ಪ್ರಮಾಣದ ಭೂಮಿ ಸಂಪನ್ಮೂಲಗಳು ಮತ್ತು ಅದೇ ಸಂದರ್ಭದಲ್ಲಿ ಕೋಟ್ಯಂತರ ಜನರನ್ನು ನಮ್ಮ ಕೃಷಿ ಕ್ಷೇತ್ರವು ಪೋಷಿಸುತ್ತದೆ. ಭೂ ಒಡೆತನ, ವಿತರಣೆಯ ಹಾಗೂ ಭೂ ಹಿಡುವಳಿಯ ಪ್ರಶ್ನೆಯನ್ನು ಕಡೆಗಣಿಸಲಾಗಿದೆ. ಇದರಿಂದಾಗಿ ಸರಾಸರಿ ಭೂ ಹಿಡುವಳಿಯು ತೀವ್ರಗತಿಯಲ್ಲಿ ಕಡಿಮೆಯಾಗುತ್ತಿದೆ. ಇಂತಹವರಲ್ಲಿ ಬಹುತೇಕ ಜನರು ಅಂಚಿನಲ್ಲಿರುವ ಮತ್ತು ಸಣ್ಣಪುಟ್ಟ ರೈತರೆ ಜಾಸ್ತಿ. ಕೆಲವೊಂದು ಪ್ರದೇಶಗಳಲ್ಲಿ ಮಾತ್ರ ರೈತರು ತಮ್ಮ ಕಸುಬಿನಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ತೋರಿದ್ದಾರೆ.

ಒಟ್ಟಿನಲ್ಲಿ, ಆಗಲೇ ತಿಳಿಸಿದಂತೆ ಕೃಷಿ ಕ್ಷೇತ್ರವು ವಿನಾಶದತ್ತ ಸಾಗುತ್ತಿದ್ದು, ರೈತಸಮುದಾಯದವರು, ಅದರಲ್ಲೂ ಬಡ ರೈತರು ಆತ್ಮಹತ್ಯೆಗೆ ಮೊರೆಹೋಗುತ್ತಿದ್ದಾರೆ. ಸರ್ಕಾರದ ಹಾಗೂ ಅಧಿಕಾರಶಾಹಿಯ ಅಲಕ್ಷ್ಯದಿಂದಾಗಿ ಹೊಸ ತಾಂತ್ರಿಕ ಸಂಶೋಧನೆಗಳು, ಸಹಕಾರಿ ಸಂಸ್ಥೆಗಳಿಂದ ದೊರಕ ಬಹುದಾದ ಸೌಲಭ್ಯಗಳು ಯಾವುವೂ ಅವರನ್ನು ತಲುಪುತ್ತಿಲ್ಲ. ಬಂಡವಾಳ ಆಧಾರಿತ ಮಾರುಕಟ್ಟೆ ವ್ಯವಸ್ಥೆಯಲ್ಲಿನ ಪೈಪೋಟಿ ಅವರ ಬದುಕನ್ನೇ ಹೊಸಕಿಹಾಕಿದೆ.

ಸಣ್ಣ ಪ್ರಮಾಣದ ಕೃಷಿಯತ್ತ ಈಗಲಾದರೂ ಗಮನ ಹರಿಸುವ ಅಗತ್ಯವಿದೆ. ಕೃಷಿಕಾರರ ಮೂಲಭೂತ ಅಗತ್ಯಗಳಾದ ರಸಗೊಬ್ಬರ, ತಾಂತ್ರಿಕ ಸೌಲಭ್ಯ, ಸಾಲ ಮೊದಲಾದವು ಅವರಿಗೆ ಲಭ್ಯವಾಗುವ ನಿಟ್ಟಿನಲ್ಲಿ ಸರ್ಕಾರ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು. ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಉತ್ತಮಪಡಿಸಲು ಹೊಸ ಯೋಜನೆಯೊಂದನ್ನು ರೂಪಿಸಬೇಕು.

ಒಟ್ಟಾರೆಯಾಗಿ ರೈತರ ಬದುಕಿಗೆ ಸಂಬಂಧಪಟ್ಟಂತೆ (ರೈತರ ಕುರಿತು ರಾಷ್ಟ್ರೀಯ ನೀತಿಯೂ ಹೇಳಿರುವಂತೆ) ಸಮಗ್ರವಾದ ಸಾಮಾಜಿಕ ಭದ್ರತೆ ವ್ಯವಸ್ಥೆಯೊಂದನ್ನು ಜಾರಿಗೆ ತರಬೇಕು. ಭೂಸುಧಾರಣೆಯ ಜೊತೆ ಜೊತೆಗೆ ಇಂತಹ ಒಂದು ಉಪಕ್ರಮಕ್ಕೂ ಸರ್ಕಾರವು ಮುಂದಾದರೆ ರೈತರ ಬದುಕಿನಲ್ಲಿ ಹೊಸ ಅಧ್ಯಾಯವೊಂದು ಪ್ರಾರಂಭವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ■

## ಆಶಾವಾದ

ಸಾಗುತಿವೆ ಹೆಜ್ಜೆಗಳು ಗೆಜ್ಜೆಗಳ ದನಿಯಿರದೆ
ದಣಿದರೂ ತಣಿವಿರದೆ
ಕುಣಿಯುವ ಬಲವಿರದೆ
ಸತ್ತ ಕನಸುಗಳ ಹೊದ್ದ ಹಾದಿಗುಂಟ

ಎತ್ತ ಸಾಗಿವೆ ಎಂಬ ಗುರಿಯಿಲ್ಲ
ಯಾವ ದಿಕ್ಕಿದು ಎಂಬ ಅರಿವಿಲ್ಲ
ಚಲಿಸುವುದೊಂದೇ ಮಾರ್ಗ
ನಿಂತ ನೆಲದಿಂದ ಬಿಡಿಸಿಕೊಳಲು

ಕೈ ಸೋಲುತಿದೆ, ಭಾರ ಮಬ್ಬಿನ ಕಂದೀಲು
ಮುಂದೆ ಅಸ್ಪಷ್ಟತೆ ಹಿಂದೆ ಕತ್ತಲು
ಒಳಗೆಲ್ಲೊ ಸೊರಗಿದೆ ಜೀವದೊಲವಿನ ನೆರಳು
ಕಾಣಬೇಕೆನುವ ಹಂಬಲವೊಂದೆ ಬೆಳಕು

ಸ್ಥಗಿತವಾಗಿದೆ ಎಲ್ಲ ಎನಿಸುವುದು ತರವಲ್ಲ
ನಿಂತ ನೀರಿನ ತಳದಿ ಚಲನೆ ಬಯಕೆಯ ಬಗುಡ
ಇಂದು ಕೊಳೆತದ್ದೆ ನಾಳೆ ಜೀವಾಂಕುರಕೆ ಸಾರ
ಹೊಸ ಚಿಗುರು ಹೊಸ ಹೂವು ಹೊಸದೆ ಬೇರು

ಎಲ್. ಎಸ್. ಮಮತಾ

ಫೋಟೋ : ಎಸ್. ಚಂದ್ರಶೇಖರ್



# ರಾಮಾನುಜನ್ ಪ್ರಬಂಧದ ವಿರುದ್ಧ ಅ.ಭಾ.ವಿ. ಪ. ಗೂಂಡಾಗಿರಿ – ಕನ್ನಡ ಪತ್ರಿಕೆಗಳ ಮಹಾಮೌನ

**ಜಿ. ರಾಜಶೇಖರ್**

ಈ ವರ್ಷ ಫೆಬ್ರವರಿ ತಿಂಗಳ ತಾ. ೨೫ರಂದು ಬಿ.ಜೆ.ಪಿ.ಯ ವಿದ್ಯಾರ್ಥಿ ಸಂಘಟನೆ ಅಖಿಲ ಭಾರತ ವಿದ್ಯಾರ್ಥಿ ಪರಿಷತ್, ನವದೆಹಲಿಯಲ್ಲಿ ಪ್ರತಿಭಟನೆಯ ಕಾರ್ಯಕ್ರಮವೊಂದನ್ನು ನಡೆಸಿ ತನ್ನ ತೋಳ್ಬಲವನ್ನು ಪ್ರದರ್ಶಿಸಿತು. ಕನ್ನಡದ ಖ್ಯಾತ ಲೇಖಕ ದಿ|| ಎ. ಕೆ. ರಾಮಾನುಜನ್‌ರ ಒಂದು ಪ್ರಬಂಧದ ವಿರುದ್ಧ ಈ ಪ್ರತಿಭಟನೆ ನಡೆಯಿತು. ದೆಹಲಿ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ವಿದ್ಯಾರ್ಥಿಗಳಿಗೆ, ಭಾರತೀಯ ಸಂಸ್ಕೃತಿ ಕುರಿತು ಹೆಚ್ಚಿನ ಓದಿಗಾಗಿ ರಾಮಾನುಜನ್‌ರ ''ತ್ರೀ ಹಂಡ್ರೆಡ್ ರಾಮಾಯಣಾಸ್ –'' ಎಂಬ ಇಂಗ್ಲಿಷ್ ಪ್ರಬಂಧವನ್ನು ನಿಗದಿಗೊಳಿಸಲಾಗಿತ್ತು. ಇದನ್ನು ರದ್ದು ಪಡಿಸಬೇಕು ಎಂದು ಒತ್ತಾಯಿಸಿ ಅ.ಭಾ.ವಿ.ಪ.ದ ಗೂಂಡಾಗಳು – ಅವರಲ್ಲಿ ಯಾರೂ ವಿದ್ಯಾರ್ಥಿಗಳಿರಲಿಲ್ಲ – 'ವಿವಾದಿತ' ಪ್ರಬಂಧದ ಪ್ರತಿಗಳನ್ನು ಸುಟ್ಟರು; ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಮುಖ್ಯಸ್ಥ ಎಸ್. ಎಚ್. ಜಾಫ್ರಿಯವರ ಕೊಠಡಿಗೆ ನುಗ್ಗಿ ಕಿಟಕಿ ಗಾಜುಗಳನ್ನು ಪುಡಿಮಾಡಿದರು; ಪೀಠೋಪಕರಣಗಳನ್ನು ಬುಡಮೇಲು ಮಾಡಿದರು. ಪುಸ್ತಕ, ಕಾಗದ, ಪತ್ರಗಳನ್ನು ಹರಿದು ಚೂರುಮಾಡಿದರು; ಇತಿಹಾಸ ವಿಭಾಗದ ಓರ್ವ ಪ್ರಾಧ್ಯಾಪಿಕೆ ಶ್ರೀಮತಿ ಉಪಿಂದರ್ ಸಿಂಗ್ ಪಾಠ ಮಾಡುತ್ತಿದ್ದ ತರಗತಿಗೆ ನುಗ್ಗಿ ಅವರಿಗೆ ಧಮಕಿ ಹಾಕಿದರು. ರಾಮಾನುಜನ್‌ರ ಪ್ರಬಂಧವನ್ನು ವಿದ್ಯಾರ್ಥಿಗಳ ಓದಿಗೆ ಶಿಫಾರಸ್ಸು ಮಾಡಿದ್ದು ಶ್ರೀಮತಿ ಸಿಂಗ್ ಎಂದು ಅ.ಭಾ.ವಿ.ಪ. ಭಾವಿಸಿತ್ತು; ಅಥವಾ ಹಾಗೆ ಜನ ಭಾವಿಸಬೇಕು ಎಂದು ಅದು ಬಯಸಿತ್ತು. ಆದರೆ ಅದು ಶ್ರೀಮತಿ ಸಿಂಗ್ ಅವರ ನಿರ್ಧಾರವಾಗಿರಲಿಲ್ಲ. ವಾಸ್ತವವಾಗಿ, ಮೂರು ವರ್ಷಗಳ ಹಿಂದೆಯೇ ಈ ನಿರ್ಧಾರ ಜಾರಿಗೆ ಬಂದಿತ್ತು. ತಜ್ಞರ ಸಮಿತಿಯೊಂದು ವಿಶ್ವವಿದ್ಯಾಲಯದ ನಿಯಮಗಳ ಪ್ರಕಾರವೇ, ರಾಮಾನುಜನ್‌ರ ಪ್ರಬಂಧವನ್ನು ಆಯ್ಕೆಮಾಡಿತ್ತು. ಉಪಿಂದರ್ ಸಿಂಗ್ ಆ ಸಮಿತಿಯ ಸದಸ್ಯೆ ಕೂಡ ಆಗಿರಲಿಲ್ಲ. ಆದರೆ ಯಾಕೆ ಅವರ ವಿರುದ್ಧ ಪ್ರತಿಭಟನೆ ನಡೆಯಿತು ? ಶ್ರೀಮತಿ ಉಪಿಂದರ್ ಸಿಂಗ್ ಪ್ರಧಾನ ಮಂತ್ರಿ ಮನಮೋಹನ ಸಿಂಗ್ ಅವರ ಮಗಳು. ಬಿ.ಜೆ.ಪಿ. ರಾಮಾಯಣದ ಕುರಿತು ಇನ್ನೊಂದು ವಿವಾದವನ್ನು ಹುಟ್ಟುಹಾಕಿ, ಪ್ರಧಾನಮಂತ್ರಿ ಹಾಗೂ ಕಾಂಗ್ರೆಸ್ ಪಕ್ಷವನ್ನು ಅದರೊಳಗೆ ಎಳೆದುತರಲು ಬಯಸಿತ್ತು. ಆದರೆ

ತಜ್ಞರ ಸಮಿತಿಯೊಂದು ವಿಶ್ವವಿದ್ಯಾಲಯದ ನಿಯಮಗಳ ಪ್ರಕಾರವೇ, ರಾಮಾನುಜನ್‌ರ ಪ್ರಬಂಧವನ್ನು ಆಯ್ಕೆಮಾಡಿತ್ತು. ಉಪಿಂದರ್ ಸಿಂಗ್ ಆ ಸಮಿತಿಯ ಸದಸ್ಯೆ ಕೂಡ ಆಗಿರಲಿಲ್ಲ. ಆದರೆ ಯಾಕೆ ಅವರ ವಿರುದ್ಧ ಪ್ರತಿಭಟನೆ ನಡೆಯಿತು ? ಶ್ರೀಮತಿ ಉಪಿಂದರ್ ಸಿಂಗ್ ಪ್ರಧಾನಮಂತ್ರಿ ಮನಮೋಹನ ಸಿಂಗ್ ಅವರ ಮಗಳು. ಬಿ.ಜೆ.ಪಿ. ರಾಮಾಯಣದ ಕುರಿತು ಇನ್ನೊಂದು ವಿವಾದವನ್ನು ಹುಟ್ಟುಹಾಕಿ, ಪ್ರಧಾನಮಂತ್ರಿ ಹಾಗೂ ಕಾಂಗ್ರೆಸ್ ಪಕ್ಷವನ್ನು ಅದರೊಳಗೆ ಎಳೆದುತರಲು ಬಯಸಿತ್ತು.

ಕಾಂಗ್ರೆಸ್ ಪಕ್ಷದ ವಕ್ತಾರರೊಬ್ಬರು, ರಾಮಾನುಜನ್‌ರ ಪ್ರಬಂಧವನ್ನು ದೆಹಲಿ ವಿಶ್ವವಿದ್ಯಾಲಯ, ಒಂದು ಉಪಪಠ್ಯವಾಗಿ ಆಯ್ಕೆಮಾಡಿದ್ದರಲ್ಲಿ, ಪ್ರಧಾನಮಂತ್ರಿಯ ಮಗಳ ಪಾತ್ರವೇನೂ ಇಲ್ಲ ಎಂಬ ಹೇಳಿಕೆ ನೀಡಿ ಕೈತೊಳೆದು ಕೊಂಡರು. ಅ.ಭಾ.ವಿ.ಪ.ದ ಪ್ರತಿಭಟನೆ ಮತ್ತು ವಿವಾದಿತ ಪ್ರಬಂಧಗಳ ಕುರಿತು ಕಾಂಗ್ರೆಸ್ ಮಾತೇ ಆಡಲಿಲ್ಲ. ಅದು ಈ ವಿವಾದದಿಂದ ಆದಷ್ಟು ದೂರವಿರಲು ಬಯಸಿತ್ತು.

ರಾಮಾನುಜನ್ ಪ್ರಬಂಧದ ವಿರುದ್ಧ ಅ.ಭಾ.ವಿ.ಪ.ದ ಪ್ರತಿಭಟನೆಗೆ ಶಿಕ್ಷಾ ಬಚಾವೋ ಆಂದೋಲನ್ ಸಮಿತಿ ಎಂಬ ಇನ್ನೊಂದು ಸಂಘಟನೆಯ ಬೆಂಬಲವಿತ್ತು. ಈ ಸಂಘಟನೆ, ''ರಾಷ್ಟ್ರವನ್ನು ಮಾರ್ಕ್ಸ್‌ವಾದ ಮತ್ತು ವಹಾಬಿ ಇಸ್ಲಾಂಗಳಿಂದ ರಕ್ಷಿಸಲು ಪಣತೊಟ್ಟಿರುವ ರಾಷ್ಟ್ರೀಯವಾದಿ ಇತಿಹಾಸಕಾರರ ಒಕ್ಕೂಟ'' ಎಂದು ತನ್ನನ್ನು ಬಣ್ಣಿಸಿ ಕೊಳ್ಳುತ್ತದೆ. ೨೦೦೬ರಲ್ಲಿ ಈ ಸಮಿತಿ, ಇತಿಹಾಸದ ಪಠ್ಯ ಪುಸ್ತಕಗಳಿಂದ ಟಿಪ್ಪೂ ಹೆಸರನ್ನು ತೆಗೆದುಹಾಕಬೇಕು ಎಂದು ಒತ್ತಾಯಿಸಿತ್ತು. ಈ ಬೇಡಿಕೆಗೆ ಆಗ ಕರ್ನಾಟಕದ ಬಿ.ಜೆ.ಪಿ - ಜೆ.ಡಿ.ಎಸ್. ಸರಕಾರದಲ್ಲಿ ಶಿಕ್ಷಣ ಸಚಿವರಾಗಿದ್ದ ಡಿ. ಎಚ್. ಶಂಕರಮೂರ್ತಿ ಕೂಡ ದನಿಗೂಡಿಸಿದ್ದರು. ದೆಹಲಿಯಲ್ಲಿ ಅ.ಭಾ.ವಿ.ಪ.ದ ಪ್ರತಿಭಟನೆಗೆ ಒಂದೆರಡು ದಿನಗಳ ಮೊದಲು ಬಿ.ಜೆ.ಪಿ. ನಾಯಕ ಹಾಗೂ ಕೇಂದ್ರ ಮಾನವ ಸಂಪನ್ಮೂಲ ಖಾತೆಯ ಮಾಜಿ ಸಚಿವ ಮುರಳಿ ಮನೋಹರ ಜೋಶಿ ಸಾರ್ವಜನಿಕ ಸಭೆಯೊಂದರಲ್ಲಿ ಮಾತಾಡುತ್ತ, ''ರಾಮಾನುಜನ್‌ರ ಪ್ರಬಂಧ ರಾಮ ಮತ್ತು ಇತರ ಹಿಂದು ದೇವತೆಗಳನ್ನು ಅವಹೇಳನ ಮಾಡುತ್ತದೆ; ದೇಶದ ಸಂಸ್ಕೃತಿ ಮತ್ತು ಅಖಂಡತೆಗಳಿಗೆ ಅದು ಅಪಾಯಕಾರಿಯಾಗಿದೆ'' ಎಂದು ಹೇಳಿದ್ದರು. ಸದ್ರಿ ಮಂತ್ರಿ ಅಧಿಕಾರದಲ್ಲಿದ್ದಾಗ ಶಿಕ್ಷಣ ಹಾಗೂ ಸಂಸ್ಕೃತಿಗಳ ಕ್ಷೇತ್ರದಲ್ಲಿ ಮಾಡಿದ ಅನಾಹುತಗಳ ಹಿನ್ನೆಲೆಯಲ್ಲಿ ಅವರ ಈ ಹೇಳಿಕೆಯ ಅರ್ಥವೇನು ? ಮತ್ತೊಮ್ಮೆ ಇವರಿಗೆ ಅಧಿಕಾರ ಸಿಕ್ಕರೆ ಏನು ಗತಿ ಎಂದು ನಾವು ಈಗ ಯೋಚಿಸಬೇಕಾಗಿದೆ.

ದಿ|| ಎ. ಕೆ. ರಾಮಾನುಜನ್ ತಮ್ಮ ಪ್ರಬಂಧವನ್ನು ರಚಿಸಿದ್ದು ೧೯೮೫ರಲ್ಲಿ. ಅವರು ತೀರಿಕೊಂಡೇ ಹದಿನೈದು ವರ್ಷ ಕಳೆದಿವೆ. ಇದ್ದಕ್ಕಿದ್ದಂತೆ ಈಗ ಯಾಕೆ ಅವರ ಪ್ರಬಂಧದ ಕುರಿತು ಈ ವಿರೋಧ ? ಇದು ಅ.ಭಾ.ವಿ.ಪ.ದ ತೋಳ್ಬಲದ ಪ್ರದರ್ಶನವಷ್ಟೇ ಅಲ್ಲ. ತಲೆ ಕೆಟ್ಟವರ ಕೆಲಸ ಎಂದು ಈ ಪ್ರತಿಭಟನೆಯನ್ನು ತಳ್ಳಿ ಹಾಕುವಂತೆಯೂ ಇಲ್ಲ. ಭಾರತೀಯ ಸಂಸ್ಕೃತಿ, ಇತಿಹಾಸ ಮತ್ತು ರಾಮಾಯಣಗಳ ಕುರಿತು ಬಿ.ಜೆ.ಪಿ.ಯ ಸಿದ್ಧಾಂತಕ್ಕೆ ಅನುಗುಣವಾಗಿ, ಅ.ಭಾ.ವಿ.ಪ. ರಾಮಾನುಜನ್ ಪ್ರಬಂದದ ವಿರುದ್ದ ತನ್ನ ಈ ಕಾರ್ಯಕ್ರಮವನ್ನು ನಡೆಸಿದೆ. ರಾಮಾನುಜನ್ ತನ್ನ ಪ್ರಬಂಧಕ್ಕೆ ಕೊಟ್ಟ ಶೀರ್ಷಿಕೆ, "Three hundred Ramayanas : Five examples and three thoughts on translation" ಅಥವಾ ''ಮುನ್ನೂರು ರಾಮಾಯಣಗಳು : ಪಾಠಾಂತರ ಕುರಿತು ಮೂರು ವಿಚಾರಗಳು, ಐದು ಉದಾಹರಣೆಗಳೊಂದಿಗೆ''. ಆ ಶೀರ್ಷಿಕೆಯೇ ಸೂಚಿಸುವಂತೆ, ಪ್ರಬಂಧ ರಾಮಾಯಣದ ವಿವಿಧ ಪಾಠಗಳು, ಅಕ್ಷರ, ಬಾಯಿಮಾತು, ಹಾಡುಗಬ್ಬ ಮತ್ತು ಪ್ರದರ್ಶಕ ಕಲೆಗಳಲ್ಲಿ ರಾಮಾಯಣದ ಕತೆ

ಮೂಡಿಬಂದ ವೈವಿಧ್ಯಮಯ ರೂಪಗಳು, ರೂಪಾಂತರಗಳು, ಭಾರತ ಮತ್ತು ಆಗ್ನೇಯ ಏಷ್ಯಾದ ವಿವಿಧ ಭಾಷೆಗಳಲ್ಲಿ ಲಿಖಿತ ಹಾಗೂ ಮೌಖಿಕ ರೂಪದಲ್ಲಿರುವ ರಾಮಾಯಣದ ಅಸಂಖ್ಯ ನಿರೂಪಣೆಗಳು, ಹಾಗೂ ಅರ್ಥೈಸುವಿಕೆಗಳನ್ನು ವಿಶ್ಲೇಷಿಸುತ್ತದೆ. ರಾಮಾಯಣದ ಈ ವಿವಿಧ ಪಾಠಗಳಿಗೆ ಮತ್ತು ''ಹೇಳುವಿಕೆ''ಗಳಿಗೆ ಆದಿಕಾವ್ಯ ಎಂದು ಜನಜನಿತ ವಾಗಿರುವ ವಾಲ್ಮೀಕಿ ರಾಮಾಯಣ ಮೂಲಗ್ರಂಥವೂ ಅಲ್ಲ; ಮೊತ್ತ ಮೊದಲ ಪಠ್ಯವೂ ಅಲ್ಲ. ಯಾವ ಸ್ಥಳೀಯ ರಾಮಾಯಣವೂ ವಾಲ್ಮೀಕಿ ರಾಮಾಯಣದ ನೇರ ಅನುವಾದವಲ್ಲ; ಅನುಕರಣೆಯೂ ಅಲ್ಲ. ಹಾಗಾಗಿ ರಾಮಾನುಜನ್, ವಿವಿಧ ರಾಮಾಯಣಗಳನ್ನು ವಿವಿಧ ಪಠ್ಯಗಳು ಎಂದು ಪರಿಗಣಿಸುವುದಿಲ್ಲ. ಅವರ ಪ್ರಕಾರ ಅವೆಲ್ಲವೂ ನಿರೂಪಿಸಲ್ಪಟ್ಟವು; ಹೇಳಲ್ಪಟ್ಟವು; ವಕ್ತವ್ಯಗಳು. 'ಪಠ್ಯ'ವೆಂಬ ಪರಿಕಲ್ಪನೆ ಒಂದು ಮೂಲ ಹಾಗೂ ಅಧಿಕೃತ ಪಾಠವನ್ನು ಗ್ರಹೀತವಾಗಿ ಇರಿಸಿಕೊಳ್ಳುತ್ತದೆ. ರಾಮಾಯಣಕ್ಕೆ ಅಂತಹ ಒಂದು ಮೂಲಪಾಠವೂ ಇಲ್ಲ; ಅಧಿಕೃತ ಎನ್ನಬಹುದಾದ ಪಾಠವೂ ಇಲ್ಲ. ವಾಲ್ಮೀಕಿ ರಾಮಾಯಣ ಸಂಸ್ಕೃತದಲ್ಲಿದೆ ಎನ್ನುವ ಕಾರಣಕ್ಕೆ ಅದನ್ನು ಅಧಿಕೃತ ಎಂದು ತಿಳಿಯಲಾಗದು. ರಾಮಾಯಣದಂತಹ ಕೃತಿಗೆ ಮೂಲ, ಅಧಿಕೃತ ಹಾಗೂ ಏಕಮೇವ ಪಠ್ಯವಿರಬಹುದು ಎಂಬ ಕಲ್ಪನೆಯೇ ಭಾರತೀಯ ಸಂಸ್ಕೃತಿಯ ಬಹುವಚನಿ ಪರಂಪರೆಗೆ ಅಸಂಗತವಾದದ್ದು ಎಂದು ರಾಮಾನುಜನ್ ತನ್ನ ಪ್ರಬಂಧದಲ್ಲಿ ಸಾಕಷ್ಟು ಉದಾಹರಣೆಗಳೊಂದಿಗೆ ವಿಶದಪಡಿಸುತ್ತಾರೆ. ರಾಮಾಯಣದ ಮೊದಲ ಪಾಠ ಹಾಗೂ ನಂತರ ಬಂದ ಪಾಠಾಂತರಗಳು; ಸಂಸ್ಕೃತದ ವಾಲ್ಮೀಕಿ ರಾಮಾಯಣ ಹಾಗೂ ದೇಶಭಾಷೆಗಳಲ್ಲಿ ಅಥವಾ ರಾಮಾನುಜನ್ ಕರೆಯುವಂತೆ ''ತಾಯ್ನುಡಿ''ಗಳ ಸ್ಥಳೀಯ ರಾಮಾಯಣಗಳು – ಇವುಗಳಲ್ಲಿ ಯಾವುದೂ ಮೇಲಲ್ಲ; ಯಾವುದೂ ಕೀಳಲ್ಲ; ಎಲ್ಲ ರಾಮಾಯಣಗಳೂ ತಮ್ಮದೇ ಆದ ಸಾಂಸ್ಕೃತಿಕ ನೆಲೆ ಹೊಂದಿರುವ ಸ್ವಾಯತ್ತ ಪಾಠಗಳು ಎಂದು ರಾಮಾನುಜನ್ ಪ್ರತಿಪಾದಿಸುತ್ತಾರೆ. ಸಂಸ್ಕೃತ ಮತ್ತು ತಾಯ್ನುಡಿಗಳ (ಸಂಸ್ಕೃತ ಯಾರ ತಾಯ್ನುಡಿಯೂ ಅಲ್ಲ) ಕೊಳುಕೊಡುಗೆಯ ಸಂಬಂಧವನ್ನು ಅವರು ಗುರುತಿಸಿಯೂ, ಅವುಗಳ ನಡುವಿನ ತರತಮದ ಶ್ರೇಣೀಕರಣವನ್ನು ತಿರಸ್ಕರಿಸುತ್ತಾರೆ.

ರಾಮಾಯಣ, (ಹಾಗೆಯೇ ಮಹಾಭಾರತ ಕೂಡ) ಒಂದು ಸ್ಥಿರವಾದ, ಶಾಶ್ವತವಾದ ಮತ್ತು ಎಂದೆಂದೂ ಬದಲಾಗದ ಪಠ್ಯವಲ್ಲ; ಅದು ಚಾರಿತ್ರಿಕ ದಾಖಲೆ ಅಲ್ಲ; ಬದಲಾಗಿ ''ಹೇಳಲ್ಪಟ್ಟ ಕತೆ'' ಎಂಬುದು ರಾಮಾನುಜನ್ ಪ್ರಬಂಧದ ಇನ್ನೊಂದು ಮುಖ್ಯ ಪ್ರಮೇಯ. ವಾಲ್ಮೀಕಿ ರಾಮಾಯಣಕ್ಕೆ, ಆ ಕಾವ್ಯವು ಹೇಗೆ ಮತ್ತು ಯಾಕೆ ರಚಿಸಲ್ಪಟ್ಟಿತು ಎಂದು ತಿಳಿಸುವ ಕತೆಯೊಂದರ ಚೌಕಟ್ಟಿದೆ. ಋಷಿ ವಾಲ್ಮೀಕಿ, ಬೇಟೆಗಾರನೊಬ್ಬ ಕಾಡಿನಲ್ಲಿ ಮೈಥುನದಲ್ಲಿ ತೊಡಗಿದ್ದ ಕ್ರೌಂಚಪಕ್ಷಿಗಳತ್ತ ಬಾಣ ಬಿಟ್ಟಿದ್ದನ್ನು ನೋಡುತ್ತಾನೆ. ಬಾಣ ನಾಟಿದ ಗಂಡುಹಕ್ಕಿ ನೆಲಕ್ಕೆ ಉರುಳುತ್ತದೆ; ಹೆಣ್ಣು ಹಕ್ಕಿ ತನ್ನ ಪ್ರಿಯಕರನ ಸುತ್ತ ಹಾರುತ್ತ ಆಕ್ರಂದಿಸುತ್ತದೆ. ವಾಲ್ಮೀಕಿ ಇದನ್ನು ಕಂಡು ಶೋಕಭರದಲ್ಲಿ ಬೇಟೆಗಾರನನ್ನು ಶಪಿಸುತ್ತಾನೆ. ಆದರೆ ತನ್ನ ಶಾಪ ಛಂದೋಬದ್ಧವಾಗಿರುವುದನ್ನು ಅಂದರೆ ಶೋಕ ಶ್ಲೋಕವಾಗಿರುವುದನ್ನು ಕಂಡು ಚಕಿತನಾಗುತ್ತಾನೆ. ವಾಲ್ಮೀಕಿ ತನ್ನ ಕಾವ್ಯವನ್ನು ಅದೇ ಛಂದಸ್ಸಿನಲ್ಲಿ ರಚಿಸುತ್ತಾನೆ. ಕಾವ್ಯದ ಆರಂಭದಲ್ಲೇ ಬರುವ ಈ ಕ್ರೌಂಚಪಕ್ಷಿಗಳ ಜೋಡಿಯ ಬೇರ್ಪಡುವಿಕೆ, ಮತ್ತು ವಿಷಾದ, ಕಾವ್ಯದಲ್ಲಿ ಉದ್ದಕ್ಕೂ ಪುನರಾವರ್ತನೆಗೊಳ್ಳುವ ಒಂದು ವಿನ್ಯಾಸವಾಗಿದೆ. ಇದು ನೈಜ ಘಟನೆಗಳ ನಿರೂಪಣೆ ಅಲ್ಲ; ಬದಲಿಗೆ ಕವಿಕಲ್ಪನೆಯ ಸೃಷ್ಟಿ ಎಂಬ 'ಸ್ವ'ದ ಪ್ರಜ್ಞೆ ರಾಮಾಯಣದಲ್ಲಿ ಅಂತರ್ಗತವಾಗಿದೆ. ರಾಮಾಯಣದ ಹಾಗೆ ಮಹಾಭಾರತ ಕೂಡ ''ಹೇಳಲ್ಪಟ್ಟ ಕತೆ''. ಅದು ಪ್ರಾರಂಭವಾಗುವುದು ಹೀಗೆ, ''ಶ್ರೀ ವ್ಯಾಸಮಹರ್ಷಿಗಳು ತಮ್ಮ ಶಿಷ್ಯನಾದ ವೈಶಂಪಾಯನನಿಗೆ ಹೇಳಿದ ಮಹಾಭಾರತ ಕಥೆಯನ್ನು ವೈಶಂಪಾಯನನು ಜನಮೇಜಯ ರಾಜನಿಗೆ ಅವನು ಮಾಡಿದ ಸರ್ಪಯಾಗ ಕಾಲದಲ್ಲಿ ಹೇಳಿದನು. ಅದನ್ನು ಕೇಳಿದ್ದ ಉಗ್ರಶ್ರವನೆಂಬ ಸೂತಪುರಾಣಿಕನು ನೈಮಿಷಾರಣ್ಯದಲ್ಲಿ ಶೌನಕನೆಂಬ ಕುಲಪತಿಯು ನಡೆಸುತ್ತಿದ್ದ ದ್ವಾದಶ ವಾರ್ಷಿಕ ಯಜ್ಞಕ್ಕೆ ಹೋಗಿದ್ದಾಗ ಅಲ್ಲಿ ಸೇರಿದ್ದ ಋಷಿಗಳ ಅಪೇಕ್ಷೆಯಂತೆ ಆ ಕಥೆಯನ್ನು ಅವರಿಗೆ ಹೇಳಿದನು.'' (ವಚನ ಭಾರತ: ಎ. ಆರ್. ಕೃಷ್ಣಶಾಸ್ತ್ರಿ, ಗೀತಾ ಬುಕ್ ಹೌಸ್, ಮೈಸೂರು, ೧೯೫೦ – ಪುಟ ೬೭). ಮಹಾಭಾರತದಲ್ಲಿ ಅದರ ಕರ್ತೃ ವ್ಯಾಸನೂ ಒಂದು ಪಾತ್ರ. ಹಾಗೆಯೇ ವಾಲ್ಮೀಕಿಯೂ ರಾಮಾಯಣದಲ್ಲಿ ಒಂದು ಪಾತ್ರ. ಎರಡೂ ಕೂಡ ತೃತೀಯ ಪುರುಷದಲ್ಲಿ ಚಿತ್ರಿತವಾಗಿರುವಂತಹವು.

ರಾಮಾಯಣ ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಭಾಷೆಯಿಂದ ಭಾಷೆಗೆ ಹಾಗೂ ಅಕ್ಷರ ಮಾಧ್ಯಮದಿಂದ ಇತರ ಮಾಧ್ಯಮಗಳಿಗೆ ಸಂಚರಿಸಿದಾಗ ರೂಪಾಂತರ, ಪಾಠಾಂತರ, ಭಾವಾಂತರ (ಗಮನಿಸಿ: ಮಕ್ಕೀಕಾಮಕ್ಕಿ ಅನುವಾದವಲ್ಲ)ಗಳ ಜೊತೆ ಮೌಲ್ಯಗಳ ಪಲ್ಲಟದ ಪ್ರಕ್ರಿಯೆಗೂ ಒಳಗಾಗಿದೆ ಎಂಬುದು ರಾಮಾನುಜನ್‌ರ ಪ್ರಬಂಧದ ಇನ್ನೊಂದು ಮುಖ್ಯ ಪ್ರಮೇಯ. ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಅನೇಕ ಸಂಗತಿಗಳು, ಸಂಸ್ಕೃತೇತರ ರಾಮಾಯಣಗಳಲ್ಲಿ ಕಾಣಸಿಗುತ್ತವೆ. ಕಥಾನಕದ ಘಟನೆಗಳು ಮತ್ತು ಪಾತ್ರಚಿತ್ರಣದ ವಿವರಗಳಲ್ಲಿಯೂ ವ್ಯತ್ಯಾಸಗಳಿವೆ. ರಾಮ, ರಾವಣ, ಸೀತೆ, ಲಕ್ಷ್ಮಣ, ಹನುಮಂತರನ್ನು ವಾಲ್ಮೀಕಿ ರಾಮಾಯಣದ ಆಶಯಗಳಿಗೆ ತದ್ವಿರುದ್ಧವಾಗಿ ಚಿತ್ರಿಸಿದ ಸ್ಥಳೀಯ ರಾಮಾಯಣಗಳಿಗೆ ರಾಮಾನುಜನ್ ತನ್ನ ಪ್ರಬಂಧದಲ್ಲಿ ಅನೇಕ ಉದಾಹರಣೆಗಳನ್ನು ಕೊಡುತ್ತಾರೆ. ಪಾತಿವ್ರತ್ಯ, ಲೈಂಗಿಕತೆ, ಮನುಷ್ಯ ಮತ್ತು ನಿಸರ್ಗಗಳ ನಡುವಿನ ಸಂಬಂಧ, ನೀತಿ- ಅನೀತಿಗಳ ಪರಿಕಲ್ಪನೆ – ಈ ಮೂಲಭೂತ ವಿಷಯಗಳಲ್ಲಿ ವಿವಿಧ ರಾಮಾಯಣಗಳ



ನಡುವೆ ಒಮ್ಮತವಿಲ್ಲ. ಇದನ್ನು ಎತ್ತಿತೋರಿಸುವುದರ ಮೂಲಕ ರಾಮಾನುಜನ್ ಭಾರತೀಯ ಸಂಸ್ಕೃತಿ ಕುರಿತು ವಸಾಹತುಶಾಹೀ ಗ್ರಹಿಕೆಗಳನ್ನೇ ಬುಡಮೇಲು ಮಾಡುತ್ತಾರೆ. ೧೯ನೆಯ ಶತಮಾನದಲ್ಲಿ ಭಾರತವನ್ನು ಆಳಿದ ಇಂಗ್ಲೆಂಡ್ ಮತ್ತು ಇತರ ಐರೋಪ್ಯ ದೇಶಗಳ ಪಂಡಿತರು ಸಂಸ್ಕೃತದ ವೇದ ಪುರಾಣಗಳನ್ನೂ ವ್ಯಾಸ, ವಾಲ್ಮೀಕಿ, ಕಾಳಿದಾಸ ಮತ್ತು ಇತರರ ಸಂಸ್ಕೃತ ಕಾವ್ಯಗಳನ್ನೂ ಐರೋಪ್ಯ ಭಾಷೆಗಳಿಗೆ ಭಾಷಾಂತರಿಸಿದ ನಂತರ ಭಾರತೀಯ ಸಾಹಿತ್ಯ (ಅಂತಹದ್ದೊಂದು ಇದೆ ಎಂಬ ವಿಚಾರ ಕೂಡ ವಸಾಹತುಶಾಹಿಯ ಬಳುವಳಿ)ವೆಂದರೆ ಸಂಸ್ಕೃತ ಸಾಹಿತ್ಯ; ಭಾರತೀಯ ಪರಂಪರೆ ಎಂದರೆ ಸಂಸ್ಕೃತ ಮೂಲದ ತಾತ್ವಿಕತೆ, ಮತ್ತು ಆಚಾರವಿಚಾರಗಳು ಎಂಬ ವಿಚಾರ ಚಾಲ್ತಿಗೆ ಬಂದು ಎಲ್ಲೆಡೆ ಮಾನ್ಯತೆ ಪಡೆದುಕೊಂಡಿತು. 'ಓರಿಯಂಟಲಿಸಂ' ಎಂದು ಕರೆಯಲಾಗುವ ಈ ವಸಾಹತುಶಾಹಿ ದೃಷ್ಟಿಕೋನ ಈಗ ಎಲ್ಲೆಡೆ ವಿದ್ವಾಂಸರಿಂದ ವಿಮರ್ಶೆ ಮತ್ತು ಪ್ರತಿರೋಧಗಳನ್ನು ಎದುರಿಸುತ್ತಿದೆ. ಭಾರತೀಯ ಸಂಸ್ಕೃತಿ ಕುರಿತ ಓರಿಯಂಟಲಿಸ್ಟ್ ಗ್ರಹಿಕೆಗಳನ್ನು ತಿರಸ್ಕರಿಸಿದ ಸಮಕಾಲೀನ ಭಾರತೀಯ ವಿದ್ವಾಂಸರಲ್ಲಿ ಎ. ಕೆ. ರಾಮಾನುಜನ್ ಅಗ್ರಗಣ್ಯರು. ಧರ್ಮ ಮತ್ತು ಸಂಸ್ಕೃತಿ ಕುರಿತ ವಸಾಹತುಶಾಹಿ ಧೋರಣೆಗಳನ್ನೇ ತಮ್ಮ ಅಧಿಕೃತ ಸಿದ್ಧಾಂತವನ್ನಾಗಿಸಿಕೊಂಡಿರುವ ಬಿ.ಜೆ.ಪಿ.ಯ ದೊಣ್ಣೆನಾಯಕರು ರಾಮಾನುಜನ್‌ರ ಪ್ರಬಂಧದ ವಿರುದ್ಧ ದೊಂಬಿ ನಡೆಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

ಆದರೆ ಈ ಪ್ರಕರಣದ ಕುರಿತು ಕನ್ನಡಿಗರು ತಳೆದ ಗಾಢ ಮೌನದ ಧೋರಣೆ ಮಾತ್ರ ಸಖೇದಾಶ್ಚರ್ಯ ಹುಟ್ಟಿಸುತ್ತದೆ. ದೆಹಲಿಯಲ್ಲಿ ಅ.ಭಾ.ವಿ.ಪ. ತನ್ನ ಹಿಂಸಾತ್ಮಕ ಪ್ರತಿಭಟನೆ ನಡೆಸಿದ ಮರುವಾರವೇ ಆ ಕುರಿತು ಹಿಂದು ಪತ್ರಿಕೆಯ ತನ್ನ ಅಂಕಣದಲ್ಲಿ ರಾಮಚಂದ್ರ ಗುಹ ಹೀಗೆ ಬರೆದರು: "ಮುನ್ನೂರು ಅಥವಾ ಮುನ್ನೂರಕ್ಕೂ ಹೆಚ್ಚು ರಾಮಾಯಣಗಳಿವೆ. ರಾಮ ಮತ್ತಿತರ ದೇವತೆಗಳ ಕುರಿತ ಭಕ್ತ ಆಚರಣೆಗಳ

೩೦,೦೦೦ಕ್ಕೂ ಮಿಕ್ಕು ಸ್ಥಳೀಯ ಸಂಪ್ರದಾಯಗಳಿವೆ. ತನ್ನ ಔದಾರ್ಯ ಮತ್ತು ವೈವಿಧ್ಯದಲ್ಲಿ ಸಾಟಿಯೇ ಇಲ್ಲದ ಧರ್ಮ ಇದು. ಉತ್ಕೃಷ್ಟ ಸಾಹಿತ್ಯ, ಸಂಗೀತ ಮತ್ತು ಇತರ ಕಲೆಗಳಿಗೆ ಪ್ರೇರಣೆ ನೀಡಿರುವುದೂ ಈ ಬಗೆಯ ಹಿಂದು ಧರ್ಮವೇ. ದಿ|| ರಾಮಾನುಜನ್ ತನ್ನ ಜೀವನದುದ್ದಕ್ಕೂ ನಡೆಸಿದ ಸಂಶೋಧನೆ ಮತ್ತು ಬರವಣಿಗೆಗಳಿಗೆ ವಸ್ತುವಾಗಿರುವುದೂ ಇದೇ ಹಿಂದೂ ಧರ್ಮ. ಈ ಧರ್ಮದ ಸ್ವಘೋಷಿತ ರಕ್ಷಕರು ನಾಶಮಾಡಲು ಹೊರಟಿರುವುದೂ ಇದೇ ಹಿಂದೂ ಧರ್ಮವನ್ನು.'' (ದ ಹಿಂದು : ೦೨-೦೩-೦೮ – ಭಾನುವಾರ ಪುರವಣಿ). ಇಂಗ್ಲಿಷ್ ವಾರಪತ್ರಿಕೆ ಔಟ್‌ಲುಕ್, ಅ.ಭಾ.ವಿ.ಪ.ದ ದಾಂಧಲೆಯನ್ನು ಪ್ರಸ್ತಾಪಿಸಿ ರಾಮಾನುಜನ್‌ರ ಪ್ರಬಂಧದ ಆಯ್ದ ಭಾಗಗಳನ್ನು ಪ್ರಕಟಿಸಿತು. (OutLook - 17-03-2008). ಫ್ರಂಟ್‌ಲೈನ್ ಪತ್ರಿಕೆ ರಾಮಾನುಜನ್ ಕುರಿತು ವಿಸ್ತೃತ ಬರಹವೊಂದನ್ನು ಪ್ರಕಟಿಸಿತು. ಜನಪ್ರಿಯ ಟೀವಿ ಚಾನೆಲ್ ಎನ್‌ಡಿಟಿವಿ ವಿವಾದದ ಕುರಿತು ಒಂದು ಚರ್ಚೆಯನ್ನು ಬಿತ್ತರಿಸಿತು. ಆದರೆ ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ವಾರ್ತಾಭಾರತಿ ದಿನಪತ್ರಿಕೆ ಮತ್ತು ಲಂಕೇಶ್ (ಸಂ. ಗೌರಿ)ಗಳನ್ನು ಬಿಟ್ಟರೆ ಬೇರೆ ಯಾವ ಪತ್ರಿಕೆಯೂ ಘಟನೆಯ ಬಗ್ಗೆ ಒಂದು ಸಾಲನ್ನೂ ಪ್ರಕಟಿಸಲಿಲ್ಲ; ಯು. ಆರ್. ಅನಂತಮೂರ್ತಿಯವರನ್ನು ಬಿಟ್ಟರೆ ಬೇರೆ ಯಾವ ಲೇಖಕನೂ ಈ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ರಾಮಾನುಜನ್ ಜಗತ್ತಿನಾದ್ಯಂತ ವಿದ್ವಾಂಸರ ಗೌರವ ಆದರಗಳಿಗೆ ಪಾತ್ರನಾಗಿರುವ ಸಂಶೋಧಕ, ಭಾಷಾ ಶಾಸ್ತ್ರಜ್ಞ ಹಾಗೂ ಅನುವಾದಕ. ಅದಕ್ಕಿಂತ ಮುಖ್ಯವಾಗಿ, ಅವರು ಕನ್ನಡದ ಓರ್ವ ಶ್ರೇಷ್ಠ ಕವಿ ಹಾಗೂ ಗದ್ಯ ಲೇಖಕ. ಕನ್ನಡದ ಸ್ವಾಭಿಮಾನದ ಕೂಗು ಈಗ ಎಲ್ಲೆಡೆ ಕರ್ಕಶವಾಗಿ ಮೊಳಗುತ್ತಿದೆ. ಆದರೆ ಕನ್ನಡದ ಶ್ರೇಷ್ಠ ಲೇಖಕನೊಬ್ಬನ ವಿದ್ವತ್‌ಪೂರ್ಣ ಲೇಖನವನ್ನು ದೆಹಲಿಯಲ್ಲಿ ಸುಟ್ಟದ್ದು ರಾಜ್ಯದಲ್ಲಿ ಯಾರಿಗೂ ಕಳವಳ ಉಂಟುಮಾಡಲಿಲ್ಲ. ಇವತ್ತಿಗೂ ಕರ್ನಾಟಕದ ಸಾಹಿತ್ಯಾಸಕ್ತರಲ್ಲಿ ಹೆಚ್ಚಿನವರಿಗೆ ಇಂತಹ ಒಂದು ಪ್ರಕರಣ ನಡೆದಿರುವುದೇ ಗೊತ್ತಿಲ್ಲ. ಕರ್ನಾಟಕವನ್ನು ಈ ಬಗ್ಗೆ ಗಾಢ ಅಜ್ಞಾನದಲ್ಲಿ ಇಟ್ಟಿರುವುದಕ್ಕಾಗಿ ನಾವು ಕನ್ನಡದ ಪ್ರತಿಷ್ಠಿತ ಪತ್ರಿಕೆಗಳಿಗೆ ಕೃತಜ್ಞರಾಗಿರಬೇಕಾಗಿದೆ! ರಾಮಾನುಜನ್ ಪ್ರಬಂಧದ ವಿರುದ್ಧ ಅ.ಭಾ.ವಿ.ಪ. ನಡೆಸಿದ ದಾಂಧಲೆ, ರಾಮಜನ್ಮಭೂಮಿಯಿಂದ ರಾಮಸೇತುವಿನವರೆಗೆ ರಾಮನನ್ನು ಕೇಂದ್ರವಾಗಿಟ್ಟುಕೊಂಡು ಸಂಘಪರಿವಾರ ದೇಶಾದ್ಯಂತ ನಡೆಸಿದ ಹಿಂಸಾತ್ಮಕ ಚಳುವಳಿಯ ಭಾಗವೇ ಆಗಿದೆ. ಹಾಗಿದ್ದೂ ಕನ್ನಡದ ಮಾಧ್ಯಮಗಳು ಈ ಪ್ರಕರಣವನ್ನು ಮುಚ್ಚಿಹಾಕಿರುವುದು, ಸಂಘ ಪರಿವಾರದ ಫ್ಯಾಸಿಸ್ಟ್ ರಾಜಕೀಯದಲ್ಲಿ ಅವು ಶಾಮೀಲಾಗಿರುವುದರ ಸಂಕೇತವಾಗಿದೆ. ಕರ್ನಾಟಕವನ್ನು ಗಾಢ ಕತ್ತಲು ಆವರಿಸಿಕೊಳ್ಳುತ್ತಿರುವುದರ ಮುನ್ಸೂಚನೆ ಇದು.

ಜಿ. ರಾಜಶೇಖರ್
ವಿಷ್ಣು ಸಂದನ, ಚಾಕ್ಲೇಟ್ ಫ್ಯಾಕ್ಟರಿ ಸಮೀಪ
ಕೊಳಂಬೆ, ಉಡುಪಿ- ೫೭೬ ೧೦೧



# ವಾಸ್ತವಕ್ಕೊಂದಿಷ್ಟು ಥ್ಯಾಂಕ್ಸ್

ತಲೆಯ ನೇವರಿಸುತ್ತಲೇ ಕೇಳುತ್ತಾಳೆ ವಾಸ್ತವದ ಗೆಳತಿ
ನೂರು ಗಂಟಿನ ಪ್ರಶ್ನೆಗಳ !!
ಶೋಧನೆಗೆ, ಪರಿಶೋಧನೆಗೆ ಹಚ್ಚುತ್ತಾಳೆ ದ್ವಂದ್ವಗಳ ದಾಟಿ
ವಂಶವೃಕ್ಷದ ಟಿಸಿಲುಗಳಿಗೆ ಕೊಡಲಿ ಪೆಟ್ಟು ಕೊಟ್ಟು !!

ಬದುಕು ಬಲುಹಿನ ನಿಧಿಯು – ಕವಿಯೊಬ್ಬ ಹಾಡಿದ್ದ;
ಇದ್ದುದರಿಂದ ಇರದುದರೆಡೆಗೆ ತುಡಿಯುತ್ತದೆ – ಎಂದ ಇನ್ನೊಬ್ಬ;
ಸಮರಸವೇ ಜೀವನವೆಂದರೆ ಒಬ್ಬ,
ಬಂದದ್ದೆಲ್ಲ ಬರಲಿ ಗೋವಿಂದನ ದಯೆ ಇರಲಿ ಮೊರೆಯಿಟ್ಟ ಮತ್ತೊಬ್ಬ.
ಆದರೆ !!
ದರ್ಶಿಸಲಾಗದ ಅಸ್ಪರ್ಶ ಆದರ್ಶ ಯಾವ ಲೆಕ್ಕ ?
ಸಮೀಕರಣ ತಿಳಿಯದೆ ಬೆಪ್ಪುತಕ್ಕಡಿಯಾಗಿ
ತಕ್ಕಡಿಯ ಒಂದು ತಟ್ಟೆಯಾಗಿ, ಸಮನಿಸದ ಮುಳ್ಳು
ಎದೆಯ ಮೀಟಿತಾದರೂ ನೋವು ನುಂಗಿ ನಗುವಲ್ಲಿ ತೇಲುತ್ತೇನೆ !?

ಕಾರಣ ಹುಡುಕಿ ಹೊರಟರೆ ತಪ್ಪಿಲ್ಲ ಗೆಳತಿಯ ಪ್ರಶ್ನೆಯಲ್ಲಿ !
ಒಪ್ಪಿತವಾಗಿಹುದಲ್ಲ ಮನದ ಮೂಲೆಯಲ್ಲಿ !
ನಂಬಲಾಗದ ಸತ್ಯ : ನಂಬಬಹುದಾದ ಸುಳ್ಳು
ಮಗುವಿನಾಯ್ಕೆಗೆ ಅಡ್ಡಗಟ್ಟುವರಾರು ?

ನನ್ನ ನಂತರದ ಜೀವ ವಿಮೆಯ ಬೆಲೆ ನಾನರಿಯೆ !
ಬದುಕು ನೀರ ಮೇಲಣ ಗುಳ್ಳೆ, ಅದೆ ಹಳೆಯ ಜೊಳ್ಳು
ಪ್ರಸ್ತುತ ಪ್ರಸವಿಸಿದರೆ ಗಸಗಸೆ ಪಾಯಸವೂ ಕಸಿವಿಸಿಯಾಗುವುದೇಕೆ ?
ಹೆರುವವಳಿಗಲ್ಲವೇ ತಿಳಿಯುವುದು ಬೇನೆಯ ಬೇನೆ !!
ಅಳುವ ಕಂದನ ತುಟಿಯು ಹವಳದ ಕುಡಿ ಹಂಗೆ..
ಒಡಲ ಜೋಗುಳದಲ್ಲಿ ನೋವರಸಬಹುದೇ ?

ಇತಿಹಾಸ ಮರೆಯದ ವಾಸ್ತವ ಯಾರ ಹಂಗಿನಲ್ಲಿಲ್ಲ
ಅದಕೆಂದೇ ಅಭಿನಂದಿಸಬೇಕು ನನ್ನ ವಾಸ್ತವದ ಗೆಳತಿಯ
ಕಣ್ಣು ತೆರೆಸಿ ಕನಸಿಗೊಂದರ್ಥ ಬಿಡಿಸಿದವಳ !!
ಇದೋ ಜೋಡುಗೈ ತಾಳ ದಣಿವು ಮರೆತ
ನಿನ್ನ ಮನದಾಳದ ಪದಗಳಿಗೆ !!
ಒಡಲ ಕಡಲ ಮಥಿಸಿ ಬಂದ ಬೇವು ಬೆರೆತ ಬೆಲ್ಲದ ಹಾಡಿಗೆ !!

ವಿಜಯ ಧಾರವಾಡ
ಜಿ. ಐ. ಬಾಗೇವಾಡಿ ಮಹಾವಿದ್ಯಾಲಯ, ನಿಪ್ಪಾಣಿ, ಜಿಲ್ಲೆ: ಬೆಳಗಾವಿ

*(ಹಿಂದಿನ ಸಂಚಿಕೆಯಿಂದ ಮುಂದುವರೆದಿದೆ)*

ಎ. ಕೆ. ರಾಮಾನುಜನ್

# ಮುನ್ನೂರು ರಾಮಾಯಣಗಳು!?



## ಆಗ್ನೇಯ ಏಷ್ಯಾದ ನಿದರ್ಶನ

ಭಾರತವನ್ನು ಬಿಟ್ಟು ನಾವು ಆಗ್ನೇಯ ಏಷ್ಯಾದ ಕಡೆ ಹೋದ ಹಾಗೆ ರಾಮಕಥೆಯ ಬಗೆಬಗೆಯ ವಕ್ತವ್ಯಗಳನ್ನು ಟಿಬೆಟ್, ಥಾಯ್ಲೆಂಡ್, ಬರ್ಮ, ಲಾವೋಸ್, ಕಾಂಬೋಡಿಯ, ಮಲೇಶ್ಯಾ, ಜಾವಾ ಮತ್ತು ಇಂಡೋನೇಶ್ಯಾಗಳಲ್ಲಿ ಕಾಣಬಹುದು. ಇವುಗಳಲ್ಲಿ ಒಂದು ನಿದರ್ಶನವನ್ನು, ಅಂದರೆ ಥಾಯ್ 'ರಾಮಕೀರ್ತಿ'ಯನ್ನು ಪರಿಶೀಲಿಸೋಣ. ಸಂತೋಷ ದೇಸಾಯಿ ಅವರ ಪ್ರಕಾರ, ಥಾಯ್ ಜನಜೀವನದ ಮೇಲೆ ರಾಮಕಥೆ ಬೀರಿದ ಪ್ರಭಾವ ಅಸಾಧಾರಣವಾದುದು. ಬೇರಾವ ಹಿಂದೂ ಕಲ್ಪನೆಯೂ ಥಾಯ್ ಜೀವನದ ಮೇಲೆ ಈ ಬಗೆಯ ಪ್ರಭಾವ ಬೀರಿಲ್ಲ (ದೇಸಾಯಿ ೧೯೮೦). ಬೌದ್ಧ ದೇವಾಲಯಗಳ ಭಿತ್ತಿಗಳಲ್ಲಿ ಕಂಡುಬರುವ ಚಿತ್ರಗಳು, ಹಳ್ಳಿಪಟ್ಟಣಗಳಲ್ಲಿ ಪ್ರದರ್ಶಿಸಲ್ಪಡುವ ನಾಟಕಗಳು, ಅವರ ನೃತ್ಯರೂಪಕಗಳು – ಇವೆಲ್ಲ ರಾಮನ ಕಥೆಯಲ್ಲಿ ಮೈದಾಳುತ್ತವೆ. 'ರಾಜಾರಾಮ' ಎಂಬ ಅಭಿಧಾನದ ಕೆಲವು ಅರಸರು ಒಬ್ಬರಾದ ಮೇಲೊಬ್ಬರಂತೆ ಥಾಯ್ ನುಡಿಯಲ್ಲಿ ರಾಮಾಯಣದ ಕಥೆಯನ್ನು ಬರೆದರು. ಮೊದಲ ರಾಜಾರಾಮ ರಾಮಾಯಣ ರೂಪದಲ್ಲಿ ಐವತ್ತು ಸಾವಿರ ಸಾಲುಗಳನ್ನು ಬರೆದರೆ ಎರಡನೆಯ ರಾಜಾರಾಮ ನೃತ್ಯಕ್ಕಾಗಿ ಹೊಸ ಪ್ರಸಂಗಗಳನ್ನು ರಚಿಸಿದ. ಆರನೆಯ ರಾಜಾರಾಮ ಮತ್ತೆ ಕೆಲವು ಪ್ರಸಂಗಗಳನ್ನು ಬರೆದ. ಇವುಗಳಲ್ಲಿ ಹೆಚ್ಚಿನವುಗಳು ವಾಲ್ಮೀಕಿಯ ಕಾವ್ಯಕ್ಕೆ ಋಣಿಯಾಗಿವೆ. ರಾಮನ ಕಥೆಗಳೊಂದಿಗೆ ಥಾಯ್ಲೆಂಡ್‌ನ ಲೋಪ್ ಬುರಿ (ಸಂಸ್ಕೃತ ಲವಪುರಿ), ಖಿಡ್ಡಿನ್ (ಸಂಸ್ಕೃತದ ಕಿಷ್ಕಿಂಧಾ) ಮತ್ತು ಅಯುತಿಯ (ಸಂಸ್ಕೃತದ ಅಯೋಧ್ಯೆ) ಮೊದಲಾದ ಸ್ಥಳಗಳು ಹಾಗೂ ಥಾಯ ಕಲೆ ತಳುಕು ಹಾಕಿಕೊಂಡಿವೆ.

ಥಾಯ್ 'ರಾಮಕೀರ್ತಿ' ಅಥವಾ 'ರಾಮಕೀನ್', ಮಾನವ, ಹಾಗೂ ವಾನರ – ಈ ಮೂರು ಬಗೆಯ ಪಾತ್ರಗಳ ಉಗಮದೊಂದಿಗೆ ಆರಂಭವಾಗುತ್ತದೆ. ಎರಡನೆಯ ಭಾಗದಲ್ಲಿ ಸೋದರರು ರಾಕ್ಷಸರ ಜೊತೆಗೆ ನಡೆಸಿದ ಮೊದಲ ಮುಖಾಮುಖಿ, ರಾಮನ ಮದುವೆ, ವನವಾಸ, ಸೀತಾಪಹರಣ, ಕಪಿವೀರನ ಭೇಟಿ ಮೊದಲಾದ ವಿಚಾರಗಳನ್ನು ಬಣ್ಣಿಸಲಾಗಿದೆ. ಯುದ್ಧ ಸಿದ್ಧತೆ, ಲಂಕೆಗೆ ಹನುಮಂತನ ಹಾರಾಟ, ಲಂಕಾ ದಹನ, ಸೇತುಬಂಧ, ಲಂಕೆಗೆ ಮುತ್ತಿಗೆ, ರಾವಣನ ವಧೆ ಹಾಗೂ ರಾಮಸೀತೆಯರ ಪುನರ್ಮಿಲನವನ್ನು ಕೂಡ ಈ ಭಾಗದಲ್ಲಿ ಬಣ್ಣಿಸಲಾಗಿದೆ. ಮೂರನೆಯ ಭಾಗದಲ್ಲಿ ಲಂಕೆಯಲ್ಲಿ ನಡೆಯುವ ದಂಗೆಯನ್ನಡಗಿಸಲು ರಾಮ ತನ್ನ ಸಹೋದರರನ್ನು ಕಳುಹಿಸಿದ ವೃತ್ತಾಂತವನ್ನು ನಿರೂಪಿಸಲಾಗಿದೆ. ಈ ಭಾಗದಲ್ಲಿ ಸೀತಾ ಪರಿತ್ಯಾಗ, ಆಕೆಯ ಪುತ್ರಸಂತಾನ, ರಾಮನ ಜೊತೆ ಯುದ್ಧ, ಸೀತೆ ಭೂಮಿ ಪಾಲಾಗುವುದು, ರಾಮಸೀತೆಯರ ಸಮಾಗಮಕ್ಕಾಗಿ ದೇವತೆಗಳು ಪ್ರತ್ಯಕ್ಷವಾಗುವುದು – ಮೊದಲಾದ ಪ್ರಕರಣಗಳ ನಿರೂಪಣೆ ಇದೆ. ಇದು ವಾಲ್ಮೀಕಿ ರಾಮಾಯಣವನ್ನು ಹೋಲುವ ಹಾಗೆ ಕಂಡರೂ ಕೆಲವೊಂದು ಅಂಶಗಳಲ್ಲಿ ವ್ಯತ್ಯಾಸಗಳಿಂದ ಕೂಡಿದೆ. ಉದಾಹರಣೆಗೆ, ದಕ್ಷಿಣ ಭಾರತದ ಜಾನಪದ ರಾಮಾಯಣಗಳಲ್ಲಿ ಕಂಡುಬರುವ ಹಾಗೆ (ಕೆಲವು ಜೈನ, ಬಂಗಾಳಿ ಹಾಗೂ ಕಾಶ್ಮೀರಿ ರಾಮಾಯಣಗಳಲ್ಲಿರುವಂತೆ) ಸೀತಾಪರಿತ್ಯಾಗಕ್ಕೆ ವೈಚಾರಿಕವಾದ ಒಂದು ನಾಟಕೀಯ ತಿರುವು ನೀಡಲಾಗಿದೆ. ರಾಮಲಕ್ಷ್ಮಣರು ಬಲು ಹಿಂದೆ ಕಾಡಿನಲ್ಲಿ ಶೂರ್ಪನಖಿಯ ಕಿವಿ ಮೂಗುಗಳನ್ನು ಕತ್ತರಿಸಿದ್ದರಷ್ಟೆ. ಆ ಶೂರ್ಪನಖಿಯ ಮಗಳಿಗೆ ಸೀತೆಯ ಮೇಲೆ ಸಿಟ್ಟು. ತನ್ನ ತಾಯಿಯ ರೂಪವಿಕಾರಕ್ಕೆ ಸೀತೆಯೇ ಕಾರಣವೆಂದು ಭಾವಿಸಿ ಆಕೆ ಪ್ರತೀಕಾರ ಬಗೆಯಲು ಸಮಯ ಕಾಯುತ್ತಿದ್ದಳು. ಅವಳು ಅಯೋಧ್ಯೆಗೆ ಬಂದು ಸೀತೆಯ ದಾಸಿಯಾಗುತ್ತಾಳೆ. ರಾವಣನ ಚಿತ್ರ ಬಿಡಿಸಿ ತೋರಿಸಲು ಕುಮ್ಮಕ್ಕು ನೀಡುತ್ತಾಳೆ. ಅದು ಅಳಿಸಲಾಗದ

'ರಾಮಾಯಣ' ಎಂಬುದು ಒಂದು ಮಹಾಕಾವ್ಯ. ವಾಲ್ಮೀಕಿ ಬರೆದದ್ದು ಇದು ಎಂದು ಪ್ರಸಿದ್ಧವಾಗಿದೆ. ಆದರೆ ಅದೊಂದೇ ರಾಮಾಯಣವಲ್ಲ, ಅನೇಕ ರಾಮಾಯಣಗಳಿವೆ. ಹಾಗೆಂದರೆ ಆಶ್ಚರ್ಯಪಡಬೇಕಾಗಿಲ್ಲ, ಜನರು ವಿಭಿನ್ನ ರೀತಿಗಳಲ್ಲಿ ಅದನ್ನು ತಮ್ಮದಾಗಿಸಿಕೊಂಡರು. ಅಂತಹ ಅದ್ಭುತ ಕಥಾನಕ ಅದು. ರಾಮಾಯಣದ ಬೇರೆ ಬೇರೆ ರೂಪಗಳನ್ನು ಪರಿಚಯಿಸುವ ಶ್ರೀ ಎ. ಕೆ. ರಾಮಾನುಜನ್ ಅವರ ಪ್ರಬಂಧವನ್ನು ಇಲ್ಲಿ ಸಾದರಪಡಿಸಲಾಗಿದೆ. ದೆಹಲಿ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಓದಬೇಕಾದ ಪ್ರಬಂಧವೆಂದು ಇದನ್ನು ಸೇರಿಸಲಾಗಿತ್ತು. ಬೌದ್ಧಿಕ ದಿವಾಳಿತನ ಮತ್ತು ಸಾಂಸ್ಕೃತಿಕ ಬಾಲಿಶತನಕ್ಕೆ ಹೆಸರಾದ ಒಂದು ಪಂಥದವರು ಅದನ್ನು ವಿರೋಧಿಸಿ ಇತಿಹಾಸ ವಿಭಾಗಕ್ಕೆ ನುಗ್ಗಿ ಹಲ್ಲೆ ನಡೆಸಿದ್ದು ಆತಂಕದ ವಿಷಯ. ರಾಮಾಯಣದ ಬಗ್ಗೆ ಗೌರವವಿರುವವರು ಹಾಗೆ ಮಾಡುವುದಿಲ್ಲ, ಮಾಡಬಾರದು.

ಚಿತ್ರವಾಗುತ್ತದೆ. (ಕೆಲವು ವಕ್ತವ್ಯಗಳ ಪ್ರಕಾರ ಆ ಚಿತ್ರ ಸೀತೆಯ ಶಯ್ಯಾಗೃಹದಲ್ಲಿ ಸಜೀವವಾಗುತ್ತದೆ) ಮತ್ತು ರಾಮನ ಗಮನ ಸೆಳೆಯುತ್ತದೆ. ಅಸೂಯೆಯಿಂದ ಕೆಂಡಮಂಡಲನಾದ ರಾಮನು ಸೀತೆಯನ್ನು ಕೊಲ್ಲ ಬೇಕೆಂದು ಆಜ್ಞಾಪಿಸುತ್ತಾನೆ. ಲಕ್ಷ್ಮಣನು ಸೀತೆಯ ಮೇಲಿನ ಅನುಕಂಪದಿಂದ ಅವಳನ್ನು ಕೊಲ್ಲದೆ ಕಾಡಿನಲ್ಲಿ ಬಿಟ್ಟುಬಿಡುತ್ತಾನೆ. ಕೊಂದದ್ದಕ್ಕೆ ಪುರಾವೆಯಾಗಿ ಜಿಂಕೆಯ ಹೃದಯವನ್ನು ರಾಮನಿಗೆ ತಂದು ತೋರಿಸುತ್ತಾನೆ.

ರಾಮ ಸೀತೆಯರ ಪುನರ್ಮಿಲನ ಕೂಡ ವಿಭಿನ್ನವಾಗಿದೆ. ಸೀತೆ ಜೀವಂತವಾಗಿದ್ದಾಳೆ ಎಂದು ರಾಮನಿಗೆ ತಿಳಿದಾಗ ರಾಮ ಸತ್ತಿದ್ದಾನೆ ಎಂದು ಚಾರನ ಮೂಲಕ ಹೇಳಿ ಕಳುಹಿಸಿ ಆಕೆ ಅರಮನೆಗೆ ಬರುವಂತೆ ಮಾಡುತ್ತಾನೆ. ಸೀತೆ ರಾಮನನ್ನು ಕಾಣಲು ಧಾವಿಸಿ ಬರುತ್ತಾಳೆ. ಆದರೆ ಉಪಾಯವಾಗಿ ರಾಮ ತನ್ನನ್ನು ಕರೆಸಿಕೊಂಡಿದ್ದಾನೆಂದು ತಿಳಿದಾಗ ಆಕೆ ಕೋಪ ಗೊಳ್ಳುತ್ತಾಳೆ. ಕೋಪಾವೇಶದಲ್ಲಿ ಆಕೆ ತನ್ನನ್ನು ನುಂಗು ಎಂದು ಭೂಮಿತಾಯಿಯನ್ನು ಪ್ರಾರ್ಥಿಸುತ್ತಾಳೆ. ಹನುಮಂತ ಅವಳಿಗಾಗಿ ಎಲ್ಲೆಲ್ಲೋ ಹುಡುಕಿ ಕಡೆಗೂ ಅವಳನ್ನು ಕಂಡು ತನ್ನೊಡನೆ ಬರುವಂತೆ ಕೋರುತ್ತಾನೆ. ಆದರೆ ಆಕೆ ಹಿಂದಿರುಗಲು ನಿರಾಕರಿಸುತ್ತಾಳೆ. ಕಡೆಗೆ ಶಿವನೇ ಬಂದು ಅವರಿಬ್ಬರನ್ನೂ ಒಂದುಗೂಡಿಸುತ್ತಾನೆ.

ಜೈನ ಹಾಗೂ ದಕ್ಷಿಣ ಭಾರತದ ಜಾನಪದ ಕಾವ್ಯಗಳಲ್ಲಿ ಕಂಡುಬರುವ ಸೀತೆಯ ಜನನ ವೃತ್ತಾಂತವು ವಾಲ್ಮೀಕಿಯಲ್ಲಿ ನಿರೂಪಿಸಿದ್ದಕ್ಕಿಂತ ಭಿನ್ನವಾಗಿದೆ. ದಶರಥನು ಯಾಗ ಮಾಡಿ ಅನ್ನದ ಪಿಂಡವನ್ನು (ವಾಲ್ಮೀಕಿ ರಾಮಾಯಣದಲ್ಲಿ ಪಾಯಸ) ಸ್ವೀಕರಿಸುತ್ತಾನೆ. ಒಂದು ಕಾಗೆ ಅನ್ನದ ಪಿಂಡದಿಂದ ಕೆಲವು ಅಗುಳುಗಳನ್ನು ಎತ್ತಿಕೊಂಡು ಹೋಗಿ ರಾವಣನ ಹೆಂಡತಿಗೆ ಒಪ್ಪಿಸಿದರೆ ಆಕೆ ಅದನ್ನು ತಿಂದು ಸೀತೆಗೆ ಜನ್ಮ ನೀಡುತ್ತಾಳೆ. ಮಗಳೇ ತಂದೆಯ ಸಾವಿಗೆ ಕಾರಣಳಾಗುತ್ತಾಳೆ ಎಂಬ ಭವಿಷ್ಯವಾಣಿಯಿಂದಾಗಿ ಕಂಗೆಟ್ಟ ರಾವಣ ಸೀತೆಯನ್ನು ಸಾಗರದಲ್ಲಿ ಮುಳುಗಿಸುತ್ತಾನೆ. ಸಮುದ್ರ ದೇವತೆಯು ಸೀತೆಯನ್ನು ಕಾಪಾಡಿ ಜನಕನ ಬಳಿಗೆ ಕರೆದೊಯ್ಯುತ್ತಾಳೆ.

ರಾಮನು ವಿಷ್ಣುವಿನ ಅವತಾರವಾದರೂ ಥಾಯ್ಲೆಂಡಿನಲ್ಲಿ ಆತ ಶಿವನ ಅಧೀನ ದೈವ. ಸಾಮಾನ್ಯವಾಗಿ ಆತನನ್ನು ಮಾನುಷವೀರನೆಂದು ಪರಿಗಣಿಸಲಾಗುತ್ತದೆ; 'ರಾಮಕೀರ್ತಿ'ಯನ್ನು ಧಾರ್ಮಿಕ ಕಾವ್ಯವೆಂದಾಗಲಿ ಅಥವಾ ಜನಜೀವನವನ್ನು ರೂಪಿಸುವ ಆದರ್ಶಕೃತಿ ಎಂದಾಗಲಿ ಅಲ್ಲಿ ಪರಿಗಣಿಸಲಾಗಿಲ್ಲ. ಥಾಯ್ ಜನರು ಸೀತಾಪಹರಣ ಹಾಗೂ ರಾಮ ರಾವಣರ ಯುದ್ಧವರ್ಣನೆಯ ಭಾಗಗಳನ್ನು ಬಹಳವಾಗಿ ಇಷ್ಟಪಡುತ್ತಾರೆ. ಹಿಂದೂ ರಾಮಾಯಣಗಳ ಹೃದಯವೆನಿಸಿದ ಅಗಲಿಕೆ ಹಾಗೂ ಮಿಲನಗಳು ಅವರಿಗೆ ಅಷ್ಟು ಮುಖ್ಯವಲ್ಲ. ಬದಲಾಗಿ ಯುದ್ಧವು ಸೃಷ್ಟಿಸುವ ಉತ್ಸುಕತೆ, ಉದ್ರೇಕ, ಯುದ್ಧತಂತ್ರಗಳ ವಿವರಗಳು ಹಾಗೂ ವಿವಿಧ ಆಯುಧಗಳ ಬಣ್ಣನೆ ಅವರಿಗೆ ಬಲು ಇಷ್ಟ. ಬೇರೆಲ್ಲ ವಕ್ತವ್ಯಗಳಿಗೆ ಹೋಲಿಸಿದರೆ ಇದರಲ್ಲಿ 'ಯುದ್ಧಕಾಂಡವು' ಅತ್ಯಂತ ವಿವರಗಳಿಂದ ಕೂಡಿದೆ. ಆದರೆ ಅದು ಕನ್ನಡ ಜಾನಪದೀಯ ವಕ್ತವ್ಯಗಳಲ್ಲಿ ಅಷ್ಟು ಮುಖ್ಯವಾದ ಭಾಗವಲ್ಲ. ಯುದ್ಧದ ವರ್ಣನೆಗೆ ಥಾಯ್ ಕಾವ್ಯದಲ್ಲಿ ನೀಡಿರುವ ಒತ್ತು ಬಹಳ ಮಹತ್ತ್ವದ್ದೆಂದು ದೇಸಾಯಿ ಹೇಳುತ್ತಾರೆ. ಏಕೆಂದರೆ, ಥಾಯ್ ಇತಿಹಾಸವು ರಕ್ತರಂಜಿತ ಕಾಳಗಗಳಿಂದ ತುಂಬಿದೆ. ಬದುಕಿ ಉಳಿವುದೇ ಆ ಜನರ ಮುಖ್ಯ ಕಾಳಜಿಯಾಗಿತ್ತು. 'ರಾಮಕೀನ್'ನಲ್ಲಿ ಕೌಟುಂಬಿಕ ಮೌಲ್ಯಗಳು ಮತ್ತು ಆಧ್ಯಾತ್ಮಿಕತೆಗೆ ವಿಶೇಷ ಗಮನ ನೀಡಲಾಗಿಲ್ಲ. ಥಾಯ್ ರಸಿಕರಿಗೆ ರಾಮನಿಗಿಂತಲೂ ಹನುಮಂತನೇ ಹೆಚ್ಚು ಪ್ರಿಯನಾದವನು. ಹಿಂದೂ ರಾಮಾಯಣಗಳಲ್ಲಿ ಚಿತ್ರಿತವಾದ ರೀತಿಯಲ್ಲಿ ಹನುಮಂತನನ್ನು ಇದರಲ್ಲಿ ಚಿತ್ರಿಸಲಾಗಿಲ್ಲ. ಇದರಲ್ಲಿ ಹನುಮಂತ ಬ್ರಹ್ಮಚಾರಿಯೂ ಅಲ್ಲ, ಪರಮಭಕ್ತನೂ ಅಲ್ಲ. ಇಲ್ಲಿ ಹನುಮಂತನು ಹೆಣ್ಗಳ ಕಣ್ಮಣಿ. ವಾಲ್ಮೀಕಿ ಅಥವಾ ಕಂಬ ರಾಮಾಯಣದಲ್ಲಿ ಲಂಕಾಪಟ್ಟಣದಲ್ಲಿ ರಾಕ್ಷಸರಾಣಿಯರ ಅಂತಃಪುರ ಪ್ರವೇಶಿಸಿ ಪರಸ್ತ್ರೀಯರನ್ನು ನೋಡುವುದು ಅನೈತಿಕವೆಂದು ಹನುಮಂತ ಭಾವಿಸಿದರೆ ಈ ವಕ್ತವ್ಯದಲ್ಲಿ ಆತ ಹಾಗೆ ಭಾವಿಸುವುದಿಲ್ಲ.

ರಾವಣನನ್ನು ಕೂಡ ಇಲ್ಲಿ ವಿಭಿನ್ನವಾಗಿ ಚಿತ್ರಿಸಲಾಗಿದೆ. 'ರಾಮಕೀರ್ತಿ'ಯಲ್ಲಿ ರಾವಣನ ಜ್ಞಾನಾನುಭವಗಳನ್ನು ಕೊಂಡಾಡಲಾಗಿದೆ. ಅನುರಾಗದಿಂದಾಗಿ ಆತ ಸೀತಾಪಹರಣ ಮಾಡಿದ್ದೆಂದು ಸಹಾನುಭೂತಿಯಿಂದ ಕಾಣಲಾಗಿದೆ. ರಾವಣನು ಒಂದು ಹೆಣ್ಣಿಗಾಗಿ ಕುಟುಂಬ, ರಾಜ್ಯ, ಹೆಚ್ಚೇಕೆ ತನ್ನ ಜೀವವನ್ನೇ ತ್ಯಾಗಮಾಡಿರುವುದನ್ನು ಕೇಳಿ ಥಾಯ್ ಜನರ ಮನ ಕರಗುತ್ತದೆ. ಸಾವಿನ ಸಂದರ್ಭದಲ್ಲಿ ಅವನಾಡಿದ ಮಾತುಗಳು ೧೯ನೇ ಶತಮಾನದ ಪ್ರಸಿದ್ಧ ಪ್ರೇಮಕಾವ್ಯಕ್ಕೆ ವಸ್ತುವನ್ನು ಒದಗಿಸಿದೆ. ಥಾಯ್ ಕಾವ್ಯದ ಪಾತ್ರಗಳು ವಾಲ್ಮೀಕಿ ಚಿತ್ರಿಸಿದ ಪಾತ್ರಗಳ ಹಾಗಲ್ಲ, ಈ ಪಾತ್ರಗಳು ತಪ್ಪು ಮಾಡುತ್ತವೆ; ಒಳಿತು ಕೆಡುಕಿನ ಸಮ್ಮಿಶ್ರಣದಂತಿವೆ; ಈ ಕಾವ್ಯದಲ್ಲಿ ರಾವಣನ ಅಧಃಪತನದಿಂದ ಮನ ಮರುಗುತ್ತದೆ.




ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಆವರಣದ ಸೆನೆಟ್ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಟಿಸಿರುವ, 'ಮಕ್ಕಳ ಬೆಳವಣಿಗೆ ಮತ್ತು ನಾವು', 'ಶಿಕ್ಷಣ ರೂಪಾಂತರ', 'ಶಿಕ್ಷಣದಲ್ಲಿ ಮನೋವಿಜ್ಞಾನ', 'ಕಲಿಕೆಯಲ್ಲಿ ಕಲೆ' ಮತ್ತು 'ವನ ಸಂಜೀವನ' - ಈ ಐದು ಶೈಕ್ಷಣಿಕ ಮಹತ್ವದ ಕೃತಿಗಳ ಲೋಕಾರ್ಪಣೆ ನಡೆಯಿತು. ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಡಾ|| ಗುರುರಾಜ ಕರಜಗಿ ಅವರು ಪುಸ್ತಕಗಳನ್ನು ಅನಾವರಣಗೊಳಿಸಿದರು. ಚಿತ್ರದಲ್ಲಿ ಎಡದಿಂದ ಬಲಕ್ಕೆ ಆರ್. ಎಸ್. ರಾಜಾರಾಮ್, ರೋಷನ್ ಸಾಹಿ, ಪ್ರೊ|| ಪದ್ಮ ಸಾರಂಗಪಾಣಿ, ಡಾ|| ಗುರುರಾಜ ಕರಜಗಿ, ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ಮಹಾಬಲೇಶ್ವರ ರಾವ್, ಜಿ. ಎಸ್. ಜಯದೇವ್, ಸುನಿತಾ ರಾವ್, ನಾಗೇಶ ಹೆಗಡೆ.



ವಾಲ್ಮೀಕಿಯಲ್ಲಿ ರಾವಣನ ವಧೆಯಾಯಿತೆಂದು ತಿಳಿದು ಜನ ಸಂಭ್ರಮಿಸುತ್ತಾರೆ. ಆದರೆ ಇದರಲ್ಲಿ ಆ ಬಗೆಯ ಸಂಭ್ರಮದ ಆಚರಣೆಗೆ ಎಡೆ ಇಲ್ಲ.

**ವಿಭಿನ್ನತೆಯ ವಿನ್ಯಾಸಗಳು**

ವಾಲ್ಮೀಕಿಯು ಸಂಸ್ಕೃತದಲ್ಲಿ ನಿರೂಪಿಸಿದ ಒಂದು ಕಥೆಯಷ್ಟೇ ಅಲ್ಲದೆ ಇನ್ನೂ ಹಲವರು ನಿರೂಪಿಸಿದ ಮೂಲಭೂತ ವ್ಯತ್ಯಾಸಗಳನ್ನೊಳಗೊಂಡ ವಿವಿಧ ರಾಮ ಕಥೆಗಳು ನಮ್ಮ ಮುಂದೆ ಇವೆ. ಇದುವರೆಗೆ ನಾವು ಗಮನಿಸದೇ ಇರುವ ಕೆಲವು ವ್ಯತ್ಯಾಸಗಳನ್ನು ಇಲ್ಲಿ ಸೂಚಿಸುತ್ತೇನೆ. ಉದಾಹರಣೆಗೆ, ಸಂಸ್ಕೃತ ಹಾಗೂ ಇತರ ಭಾರತೀಯ ಭಾಷೆಗಳಲ್ಲಿ ಈ ಕಥೆಗೆ ಎರಡು ಮುಕ್ತಾಯಗಳಿವೆ. ರಾಮ ಸೀತೆ ಇಬ್ಬರೂ ಅಯೋಧ್ಯೆಗೆ ಮರಳಿ ಬಂದು ಪಟ್ಟಾಭಿಷಿಕ್ತರಾಗುವುದರೊಂದಿಗೆ ಕಥೆ ಮುಗಿಯುತ್ತದೆ. ಇನ್ನೊಂದು : ಲಂಕೆಯಲ್ಲಿ ಅಶೋಕ ವನದಲ್ಲಿದ್ದ ಸೀತೆ ಪತಿತಳು ಎಂಬ ಲೋಕಾಪವಾದ ಉಂಟಾಗುತ್ತದೆ. ಇದು ರಾಜನಾದ ರಾಮನ ಪ್ರತಿಷ್ಠೆಗೆ ಕಳಂಕ ತರುವುದಾದ್ದರಿಂದ ಆಕೆಯನ್ನು ಆತ ಮರಳಿ ಕಾಡಿಗಟ್ಟುತ್ತಾನೆ. ಅಲ್ಲಿ ಆಕೆ ವಾಲ್ಮೀಕಿಯ ಆಶ್ರಮದಲ್ಲಿ ಅವಳಿಗಳಿಗೆ ಜನ್ಮ ನೀಡುತ್ತಾಳೆ. ಆ ಮಕ್ಕಳು ವಾಲ್ಮೀಕಿಯಿಂದ ರಾಮಾಯಣವನ್ನೂ ಯುದ್ಧವಿದ್ಯೆಯನ್ನೂ ಚೆನ್ನಾಗಿ ಕಲಿಯುತ್ತಾರೆ. ಯುದ್ಧದಲ್ಲಿ ರಾಮನ ಸೈನ್ಯವನ್ನು ಸೋಲಿಸುತ್ತಾರೆ. ಹೃದಯಸ್ಪರ್ಶಿ ಸನ್ನಿವೇಶದಲ್ಲಿ ಇವರೇ ತನ್ನ ಮಕ್ಕಳೆಂದು ತಿಳಿಯದ ರಾಮನ ಮುಂದೆ 'ರಾಮಾಯಣ'ವನ್ನು ಹಾಡುತ್ತಾರೆ. ಇದು ಇನ್ನೊಂದು ಮುಕ್ತಾಯವಾಗಿದ್ದು ವಾಲ್ಮೀಕಿ ಹಾಗೂ ಕಂಬ ರಾಮಾಯಣದಲ್ಲಿ ಪ್ರಕ್ಷಿಪ್ತವೆಂದು ಪರಿಗಣಿಸಲಾಗಿದೆ. ಈ ಎರಡೂ ಮುಕ್ತಾಯಗಳು ಒಟ್ಟು ಕೃತಿಗೆ ವಿಶಿಷ್ಟವಾದ ಮೆರುಗು ನೀಡಿವೆ. ಮೊದಲನೆಯದರಲ್ಲಿ ವನವಾಸ ಅನುಭವಿಸಿದ ರಾಜ ರಾಣಿ ರಾಜ್ಯಕ್ಕೆ ಹಿಂತಿರುಗಿ ಬಂದದ್ದರ ಸಂಭ್ರಮ ವ್ಯಕ್ತವಾಗುತ್ತದೆ. ಅಲ್ಲದೆ ಪುನರ್ಮಿಲನ, ಪಟ್ಟಾಭಿಷೇಕ ಹಾಗೂ ಶಾಂತಿಪಾಲನೆಯ ವಿವರಗಳ ಮೂಲಕ ಕಥಾ ಮಂಡಲ ಪೂರ್ಣವಾಗುತ್ತದೆ. ಎರಡನೆಯದರಲ್ಲಿ, ಅವರ ಸಂತಸ ಅಲ್ಪಕಾಲಿಕವಾಗಿದ್ದು ಮತ್ತೆ ಒಬ್ಬರನ್ನೊಬ್ಬರು ಅಗಲಬೇಕಾಗಿ ಬರುತ್ತದೆ. ಇದರಿಂದಾಗಿ ವಿಪ್ರಲಂಭವೇ ಒಟ್ಟು ಕೃತಿಯ ಮುಖ್ಯ ಮನಃಸ್ಥಿತಿಯಾಗಿಬಿಡುತ್ತದೆ. ಇದನ್ನು ಬೇಕಾದರೆ ದುರಂತ ಮನಃಸ್ಥಿತಿ ಎನ್ನಲೂಬಹುದು. ಏಕೆಂದರೆ, ಸೀತೆ ಅಪಮಾನ ತಾಳಲಾರದೆ ಬಾಯಿತೆರೆದ ಭೂಮಿಯಲ್ಲಿ ಸೇರಿಹೋಗಿ ತಾನು ಎಲ್ಲಿಂದ ಬಂದಳೋ ಅಲ್ಲಿಗೇ ಮರಳುತ್ತಾಳೆ. ನೇಗಿಲ ಸೀಳಿನಿಂದ ಬಂದ ಸೀತೆ ಮತ್ತೆ ಭೂಮಿಯಲ್ಲಿ ಲೀನವಾಗುವ ಈ ವಿವರವು ಸಸ್ಯ ಚಕ್ರದ ಸಂಕೇತವೆನಿಸುತ್ತದೆ. ಸೀತೆಯು ಬೀಜದಂತೆ; ನೀಲಮೇಘಶ್ಯಾಮನಾದ ರಾಮನು ಮಳೆಯಂತೆ. ಸೀತೆಯು ಅಗ್ನಿಪರೀಕ್ಷೆಯಲ್ಲಿ ಗೆದ್ದು ತನ್ನ ಪಾತಿವ್ರತ್ಯವನ್ನು ಸಾಬೀತು ಪಡಿಸುತ್ತಾಳೆ. ಆದರೆ ಇದು ಅಲ್ಪಕಾಲಿಕ; ಮತ್ತೆ ಸೀತೆಗೆ ವನವಾಸವೇ ಗತಿಯಾಯಿತು. ಫಲವತ್ತತೆ ಹಾಗೂ ಮಳೆಯ ಬಗೆಗಿನ ಹಲವು ಉಲ್ಲೇಖಗಳನ್ನು ಗಮನಿಸಿ. ಶಿವನ ಪ್ರತಿರೂಪವೆನಿಸಿದ ಯೋಗಿ ಸ್ವರೂಪಿಗಳಿಗೆ ರಾಮನ ವಿರೋಧ (ಅಹಲ್ಯೆಯ ಕತೆಯಲ್ಲಿ ಕಂಬ ಇದನ್ನು ಖಚಿತ ಗೊಳಿಸಿದ್ದಾನೆ), ಆತನ ವಂಶದ ಪೂರ್ವಜನು ಗಂಗೆಯನ್ನು ಬಯಲು ಪ್ರದೇಶಕ್ಕೆ ತಂದದ್ದು, ಅಂತೆಯೇ ಲೋಮಪಾದನ ರಾಜ್ಯಕ್ಕೆ ಮಳೆ ತಂದ ಋಷ್ಯಶೃಂಗನ ಕಥೆ ಹಾಗೂ ಈತನೇ ಮುಂದೆ ದಶರಥನ ಪುತ್ರಕಾಮೇಷ್ಟಿ ಯಾಗದ ನೇತೃತ್ವವನ್ನು ವಹಿಸಿದ್ದು, ಇವೆಲ್ಲವೂ ಪರಿಶೀಲನಾರ್ಹವಾಗಿವೆ. ಪ್ರಕೃತಿಯ ಬಗೆಗೆ ನಿರಂತರವಾದ ಉಲ್ಲೇಖಗಳ ಮೂಲಕ ಈ ಬಗೆಯ ಮಿಥ್ಯೆಗಳು, ಇತರ ದನಿಗಳು ನಮ್ಮ ಕಿವಿಯ ಮೇಲೆ ಬೀಳುವ ಹಾಗೆ ಮಾಡುತ್ತವೆ. ಸೀತೆಯ ಹುಡುಕಾಟದಲ್ಲಿ ರಾಮನಿಗೆ ಪಕ್ಷಿಪ್ರಾಣಿಗಳು ಸಹಕಾರ ನೀಡುತ್ತವೆ. ವಾಲ್ಮೀಕಿ ರಾಮಾಯಣದಲ್ಲಿ ಪಕ್ಷಿಗಳು ಹಾಗೂ ವಾನರರ ಇರುಪಿಕೆಯು ಕಾವ್ಯಾತ್ಮಕ ಅಗತ್ಯವಾಗಿದೆ. ಅಂತೆಯೇ ಜೈನದೃಷ್ಟಿಯ ಪ್ರಕಾರ ಇವೆಲ್ಲ ಅಸಹಜವಾಗಿವೆ. ಪ್ರತಿಯೊಂದು ಮುಕ್ತಾಯವೂ ಕಥೆಯ ವಿವಿಧ ಪರಿಣಾಮಗಳನ್ನು ಬೆಳಕಿಗೆ ತರುವುದಲ್ಲದೆ ಒಟ್ಟು ವಕ್ತವ್ಯವು ಅದರ ಕಾವ್ಯಾತ್ಮಕ ನಿಲುವನ್ನೂ ಪಲ್ಲಟಗೊಳಿಸುತ್ತದೆ.

ಇದೇ ರೀತಿ ವಿವಿಧ ಆರಂಭಗಳ ಬಗ್ಗೆಯೂ ಹೀಗೆಯೇ ಹೇಳಬಹುದು. ವಾಲ್ಮೀಕಿಯು ತನ್ನ ಕೃತಿಯಲ್ಲಿ ಶೋಕದಿಂದ ಶ್ಲೋಕ ಉತ್ಪನ್ನವಾದ ತನ್ನ ಕಥೆಯಿಂದಲೇ ಕಾವ್ಯವನ್ನು ಆರಂಭಿಸುತ್ತಾನೆ. ವಾಲ್ಮೀಕಿಯ ಕಾವ್ಯದ ಆರಂಭದಲ್ಲಿ ಕಂಡುಬರುವ ಈ ಪ್ರಕರಣವು ಕೃತಿಗೆ ಸ್ವಯಂ ಎಚ್ಚರದ ಸುಂದರ ರೂಪವನ್ನು ನೀಡುತ್ತದೆ. ಇನ್ನೂ ಮುಂದುವರಿದು ಹೇಳುವುದಾದರೆ, ಪಕ್ಷಿಯ ಸಾವು ಹಾಗೂ ಬದುಕಿ ಉಳಿದ ಹಕ್ಕಿಯ ಆಕ್ರಂದನವು ರಾಮ ಕಥೆಯ ವಕ್ತವ್ಯಕ್ಕೆ ಒಂದು ಸಂವಾದಿ ಆಶಯವಾಗಿ ಪರಿಣಮಿಸುತ್ತದೆ. ಕೆಲವೊಂದು ನಿರ್ಣಾಯಕ ಗಳಿಗೆಗಳಲ್ಲಿ ಪ್ರಾಣಿಬಲಿಯ ಲಯಬದ್ಧ ಪುನರಾವರ್ತನೆ ಕೂಡ ಕಾವ್ಯದಲ್ಲಿ ಕಂಡುಬರುತ್ತದೆ. ದಶರಥನು ಆನೆಯೆಂದು ಭಾವಿಸಿ ಬಾಣ ಪ್ರಯೋಗಿಸಿದರೆ ಅದು ತನ್ನ ಕುರುಡು ತಂದೆ ತಾಯಿಗಳಿಗಾಗಿ ಕಮಂಡಲುವಿನಲ್ಲಿ ಜಲ ಸಂಗ್ರಹಿಸುತ್ತಿರುವ ಋಷಿ ಪುತ್ರನ ಸಾವಿಗೆ ಕಾರಣವಾಗುತ್ತದೆ. ಇದರಿಂದಾಗಿ ಆತ ಶಾಪಗ್ರಸ್ತನಾಗುತ್ತಾನೆ. ಪರಿಣಾಮವಾಗಿ ಮುಂದೆ ರಾಮನ ವನವಾಸ ಹಾಗೂ ತಂದೆ ಮಗನ ಅಗಲುವಿಕೆ ಸಂಭವಿಸುತ್ತವೆ. ಮಾಯಾ ಸ್ವರ್ಣಮೃಗವನ್ನು (ಜಿಂಕೆಯ ರೂಪದ ರಾಕ್ಷಸ) ಬೆನ್ನಟ್ಟಿ ಕೊಲ್ಲುತ್ತಾನೆ. ಅದು ಸಾಯುವಾಗ ರಾಮನ ದನಿಯಲ್ಲಿ ಲಕ್ಷ್ಮಣನನ್ನು ಕರೆಯುತ್ತದೆ. ಇದರಿಂದಾಗಿ ಆತ ಸೀತೆಯನ್ನು ಒಂಟಿಯಾಗಿ ಬಿಟ್ಟು ರಾಮನ ಬಳಿಗೆ ಧಾವಿಸುತ್ತಾನೆ. ಆಗ ರಾವಣ ಸೀತೆಯನ್ನು ಅಪಹರಿಸುತ್ತಾನೆ. ರಾವಣ ಆಕೆಯನ್ನು ಕದ್ದೊಯ್ಯುತ್ತಿರುವಾಗ ಸಂಪಾತಿ ಪಕ್ಷಿಯು ಪ್ರತಿರೋಧ ವ್ಯಕ್ತಪಡಿಸುತ್ತದೆ. ಆಗ ರಾವಣ ತನ್ನ ಖಡ್ಗದಿಂದ ಆದನ್ನು ಕೊಲ್ಲುತ್ತಾನೆ. ಕಾವ್ಯದ ಉಪೋದ್ಘಾತದಲ್ಲಿ ಪಕ್ಷಿಯ ಸಾವು ಮತ್ತು ಬದುಕುಳಿದ ಹಕ್ಕಿಯ ಆಕ್ರಂದನವು ಕಾವ್ಯದ ವಿವಿಧ ಘಟ್ಟಗಳಲ್ಲಿ ಕಂಡುಬರುವ ಪತಿ ಪತ್ನಿ, ತಂದೆ ತಾಯಿ, ಸೋದರ-ಪುತ್ರರ ಅಗಲುವಿಕೆಗೆ ಚಾಲನೆ ನೀಡಿದೆ.


ನಿಂ ಪಕ್ಷದ ಪ್ರಣಾಳಿಕೆ ರಾಜ್ಯದ ಜನತೆಗೆ ಅರ್ಥವಾಗಿಲ್ಲ ಅಂತ ಕಾಣುತ್ತೆ...! ಅದ್ಕೆ ಸೋಲ್ಸಿರಬೇಕು!!

ಪ್ರತಿಯೊಂದು ಪ್ರಮುಖ ಕೃತಿಯ ಉಪೋದ್ಘಾತವು ಕೂಡ ಕಥಾವಸ್ತು ಹಾಗೂ ಪ್ರತಿಮೆಗಳ ವಿಶಿಷ್ಟ ವಿನ್ಯಾಸದ ಬಗ್ಗೆ ಮೊದಲೇ ಸುಳಿವು ನೀಡುತ್ತ ಕಾವ್ಯದ ಸಾಮರಸ್ಯವನ್ನು ಕಾಪಾಡುತ್ತದೆ.

ಈ ಎಲ್ಲ ರಾಮಾಯಣಗಳಲ್ಲಿ ಕಂಡುಬರುವ ಇನ್ನೊಂದು ಬಗೆಯ ಅಂತರವೆಂದರೆ ಮುಖ್ಯ ಪಾತ್ರ ಚಿತ್ರಣಗಳಲ್ಲಿ ಕಂಡುಬರುವ ವ್ಯತ್ಯಾಸ. ವಾಲ್ಮೀಕಿಯು ಕಾವ್ಯದ ಆರಂಭದಲ್ಲಿ ರಾಮ ಹಾಗೂ ಆತನ ಪೂರ್ವೇತಿಹಾಸದ ಬಗ್ಗೆ ಗಮನ ಹರಿಸಿದರೆ ವಿಮಲಸೂರಿಯ ಜೈನ ರಾಮಾಯಣ ಮತ್ತು ಥಾಯ್ ಮಹಾಕಾವ್ಯವು ರಾಮನ ಬಗ್ಗೆ ಹೆಚ್ಚು ಲಕ್ಷ್ಯ ಹರಿಸುವುದಿಲ್ಲ. ಇದಕ್ಕೆ ಬದಲಾಗಿ ರಾವಣನ ವಂಶಾವಳಿ ಹಾಗೂ ಆತನ ಸಾಹಸಗಳ ಬಗ್ಗೆ ಗಮನ ಹರಿಸುತ್ತದೆ. ಕನ್ನಡದ ಹಳ್ಳಿಯ ವಕ್ತವ್ಯವೊಂದು ಸೀತೆಯ ಜನನ, ವಿವಾಹ, ಅಗ್ನಿಪರೀಕ್ಷೆ ಇತ್ಯಾದಿ ವಿಚಾರಗಳನ್ನು ವಿಶೇಷವಾಗಿ ಗಮನಿಸುತ್ತದೆ. 'ಅಧ್ಯಾತ್ಮ ರಾಮಾಯಣ' ಹಾಗೂ ತಮಿಳಿನ 'ಶತಕಂಠ ರಾವಣ' ಮೊದಲಾದ ಅನಂತರದ ಕೆಲವು ಕೃತಿಗಳು ಸೀತೆಗೆ ನಾಯಕ ಸ್ಥಾನವನ್ನು ನೀಡುತ್ತವೆ. ಹತ್ತು ತಲೆಯ ರಾವಣ ರಾಮನಿಂದ ವಧಿಸಲ್ಪಟ್ಟ. ಆದರೆ ನೂರು ತಲೆಯ ರಾವಣನನ್ನು ಗೆಲ್ಲಲು ರಾಮನಿಂದಾಗುವುದಿಲ್ಲ. ಆಗ ಸೀತೆ ತಾನೇ ಯುದ್ಧದಲ್ಲಿ ನೂರು ತಲೆಯ ರಾವಣನನ್ನು ವಧಿಸುತ್ತಾಳೆ (ಶುಲ್ಮನ್ ೧೯೭೯). ವ್ಯಾಪಕ ಬಾಯ್ಮಾತಿನ ಪರಂಪರೆಯನ್ನುಳ್ಳ ಸಂತಾಲ ಬುಡಕಟ್ಟಿನ ಜನರು ಸೀತೆಯನ್ನು ಕುಲಟೆ ಎಂದು ಭಾವಿಸುತ್ತಾರೆ. ವಾಲ್ಮೀಕಿ ಹಾಗೂ ಕಂಬ ರಾಮಾಯಣವನ್ನು ಓದಿಕೊಂಡು ಹಿಂದೂ ನಂಬಿಕೆಗಳನ್ನೇ ಬೆಳೆಸಿಕೊಂಡವರಿಗೆ ಇದರಿಂದ ನಿಜಕ್ಕೂ ಭಾರಿ ಆಘಾತವಾಗುತ್ತದೆ. ಸಂತಾಲರ ಪ್ರಕಾರ ರಾವಣ ಮತ್ತು ಲಕ್ಷ್ಮಣ ಇಬ್ಬರೂ ಸೀತೆಯ ದೇಹಸುಖವನ್ನುಂಡಿದ್ದಾರೆ. ಆಗ್ನೇಯ ಏಷ್ಯಾದ ಗ್ರಂಥಗಳಲ್ಲಿ ನಾವು ಈ ಹಿಂದೆ ಗಮನಿಸಿದ ಹಾಗೆ, ಹನುಮಂತನು ಮಂಗನ ಮುಖ ಹೊತ್ತ ಬ್ರಹ್ಮಚಾರಿ ಏಂಟನೇನಲ್ಲ. ಆತ ಹಲವು ಪ್ರೇಮಪ್ರಕರಣಗಳಲ್ಲಿ ಮಗ್ನನಾಗಿರುವ ಹೆಣ್ಗಳ ಕಣ್ಮಣಿ. ಕಂಬ ಮತ್ತು ತುಳಸಿ ರಾಮಾಯಣಗಳಲ್ಲಿ ರಾಮ ಒಬ್ಬ ದೇವರು. ಜೈನಗ್ರಂಥಗಳಲ್ಲಿ ಆತ ತನ್ನ [illegible] ಜನ್ಮದಲ್ಲಿರುವ ಅಹಿಂಸಾಪರನಾದ ಜಿನಧರ್ಮಿ. ಹೀಗಾಗಿ ಆತ ರಾವಣನನ್ನು ಕೊಲ್ಲಲಾರ. ರಾವಣನಾದರೋ ಉದಾತ್ತ ದೊರೆ; ಆದರೆ ಕರ್ಮವಶದಿಂದಾಗಿ ಸೀತೆಯಲ್ಲಿ ಅನುರಕ್ತನಾಗುತ್ತಾನೆ. ತನ್ನ ಸಾವಿಗೆ ತಾನೇ ಕಾರಣನಾಗುತ್ತಾನೆ. ಆದರೆ [illegible] ಗ್ರಂಥಗಳಲ್ಲಿ ಇದೇ ರಾವಣನನ್ನು ರಾಮಪಿಪಾಸುವಾದ ದುರಹಂಕಾರಿ ರಾಕ್ಷಸ ಎಂದು ಬಣ್ಣಿಸಲಾಗಿದೆ. ಹೀಗೆ ಪ್ರಮುಖವಾದ ಪಾತ್ರಗಳ ಪರಿಕಲ್ಪನೆಯಲ್ಲೇ ಕೆಲವೊಂದು ಮೂಲಭೂತ ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳು ಎಷ್ಟು ವಿಪರೀತವಾಗಿವೆ ಎಂದರೆ ಒಂದು [illegible]

ಇನ್ನೊಂದು ಪರಿಕಲ್ಪನೆಗೆ ಹೊಂದುವಂಥದ್ದೇ ಅಲ್ಲ. ಸೀತೆಯನ್ನು ರಾಮ ಹೇಗೆ ಕಾಡಿಗೆ ಅಟ್ಟಿದ ಎಂಬುದರ ಬಗ್ಗೆ ನಾವು ನೂರಾರು ವ್ಯಾಖ್ಯಾನ ಹಾಗೂ ತರ್ಕಗಳನ್ನು ಮಾಡಬಹುದು. ಇವುಗಳಲ್ಲಿ ಎಲ್ಲವೂ ಒಂದಕ್ಕಿಂತ ಹೆಚ್ಚು ಗ್ರಂಥಗಳಲ್ಲಿ ಹಾಗೂ ಒಂದಕ್ಕಿಂತ ಹೆಚ್ಚು ಪಠ್ಯಸಮುದಾಯದಲ್ಲಿ (ಹಿಂದೂ, ಜೈನ ಅಥವಾ ಬೌದ್ಧ) ಕಂಡುಬಂದಿವೆ.

ರಾಮ, ಲಕ್ಷ್ಮಣ, ಸೀತೆ ಹಾಗೂ ಸೀತೆಯನ್ನು ಅಪಹರಿಸುವ ದುಷ್ಟ ರಾವಣ ಈ ಒಂದು ಸಂಬಂಧದ ತೆಳುವಾದ ಹಂದರವನ್ನು ಬಿಟ್ಟರೆ ರಾಮಕಥೆಗಳಿಗೆ ಒಂದು ಸಮಾನ ಮೂಲ ಎಂಬುದಿದೆಯೇ ? ವಿಟ್ಗೆಂಗ್‌ಸ್ಟನ್ ಅವರು ಹೇಳುವಂತೆ ಕೆಲವು ಕುಟುಂಬ ಸಂಬಂಧಗಳಿಂದ ಈ ಕಥೆಗಳು ಹೆಣೆಯಲ್ಪಟ್ಟಿವೆಯೇ ? ಅಥವಾ ಇದು ಅರಿಸ್ಟಾಟಲ್‌ನ ಹಲಸಿನಹಣ್ಣು ಕತ್ತರಿಸುವ ಚೂರಿಯ ಹಾಗೋ ? ಒಮ್ಮೆ ತತ್ತ್ವಜ್ಞಾನಿ ಅರಿಸ್ಟಾಟಲ್ ''ಈ ಚೂರಿ ನಿನ್ನಲ್ಲಿ ಎಷ್ಟು ಸಮಯದಿಂದ ಇದೆ ?'' ಎಂದು ಒಬ್ಬ ವಯಸ್ಸಾದ ಬಡಗಿಯನ್ನು ಕೇಳಿದ. ಆಗ ಆ ಬಡಗಿ ''ಈ ಚೂರಿ ಕಳೆದ ಮೂವತ್ತು ವರ್ಷಗಳಿಂದಲೂ ಇದೆ. ಕೆಲವು ಬಾರಿ ನಾನು ಅದರ ಅಲಗು ಬದಲಾಯಿಸಿದ್ದೇನೆ. ಮತ್ತೆ ಒಂದೆರಡು ಸಲ ಅದರ ಹಿಡಿ ಬದಲಾಯಿಸಿದ್ದೇನೆ. ಆದರೆ ಇದು ಅದೇ ಮೊದಲಿನ ಚೂರಿ'' ಎಂದನಂತೆ. ಈ ಸಂಬಂಧಗಳ ಸಂರಚನೆಯ ಒಂದು ನೆರಳು 'ರಾಮಾಯಣ' ಎಂಬ ಹೆಸರಿನ ಮೇಲೆ ಬಿದ್ದಿದೆ ಎಂಬುದು ಎಲ್ಲ ವಕ್ತವ್ಯಗಳ ಪರಿಶೀಲನೆಯಿಂದ ತಿಳಿದುಬರುತ್ತದೆ. ಆದರೆ ಸೂಕ್ಷ್ಮವಾಗಿ ಒಳಹೊಕ್ಕು ನೋಡಿದಾಗ ಒಂದು ಇನ್ನೊಂದರ ಹಾಗಿಲ್ಲ ಎಂಬುದು ವೇದ್ಯವಾದೀತು. ಇದು ಒಂದೇ ಹೆಸರಿನ ಒಂದಷ್ಟು ಜನರ ಗುಂಪಿನ ಹಾಗೆ. ಹೆಸರಿನ ಕಾರಣದಿಂದಾಗಿ ಮಾತ್ರ ಅವರಲ್ಲಿ ಸಮಾನತೆ ಇರಬಹುದು. ಉಳಿದಂತೆ ಒಬ್ಬರು ಇನ್ನೊಬ್ಬರಲ್ಲ.



### ಅನುವಾದ

ರಾಮಾಯಣದ ಈ ಎಲ್ಲ ಪಠ್ಯಗಳ ನಡುವೆ ಪರಸ್ಪರ ಸಂಬಂಧವಿದೆ. ಅವೆಲ್ಲ ಒಂದೆರಡು ಪಠ್ಯಗಳ ಸುತ್ತ ಹೆಣೆದ ಅನುವಾದಗಳು. ವಾಲ್ಮೀಕಿ, ವಿಮಲಸೂರಿ – ಮುಂತಾದವರ ಕಾವ್ಯಗಳ ಪ್ರೇರಣೆಯಿಂದ ರಾಮಾಯಣದ ಅನುವಾದಗಳು ಪ್ರಕಟವಾಗಿವೆ ಎಂದು ಭಾವಿಸಲು ಅವಕಾಶವಿದೆ.

ಪಠ್ಯಗಳ ನಡುವಣ ಅನುವಾದ ಸಂಬಂಧಗಳನ್ನು ಮೂರು ನೆಲೆಗಳಲ್ಲಿ ಪರಿಶೀಲಿಸಬಹುದು.

ಪಠ್ಯ ೧ ಹಾಗೂ ಪಠ್ಯ ೨ರ ನಡುವೆ ಅನುಲೋಮ ಹೋಲಿಕೆಯಿದೆ. ಇಂಥ ಅನುವಾದಗಳನ್ನು ನಾವು 'ಮೂಲನಿಷ್ಠ ಅಥವಾ ಐಕಾನಿಕ್' ಎನ್ನಬಹುದು. ಉದಾಹರಣೆಗೆ ಚಾಪ್‌ಮನ್ ಹೋಮರನ ಕಾವ್ಯವನ್ನು ಅನುವಾದ ಮಾಡುವಾಗ ಮೂಲದ ಪಾತ್ರಗಳು, ಘಟನೆಗಳ ಕ್ರಮಾನುಗತಿ, ಪ್ರತಿಮೆ, ಹೋಲಿಕೆಗಳು ಈ ಎಲ್ಲ ಕಾವ್ಯವಿನ್ಯಾಸ ಹಾಗೂ ಮಾರ್ದವತೆಯನ್ನು ಉಳಿಸಿಕೊಳ್ಳುವುದರ ಜೊತೆಗೆ ಮೂಲ ಕಾವ್ಯದ ಛಂದಸ್ಸನ್ನೂ ಅನುಸರಿಸಿ ಅನುವಾದ ಮಾಡುತ್ತಾನೆ. ವ್ಯತ್ಯಾಸವೆಂದರೆ ಭಾಷೆ ಮಾತ್ರ. ಮೂಲ ಗ್ರೀಕ್, ಆದರೆ ಅನುವಾದ ಇಂಗ್ಲಿಷ್‌ನಲ್ಲಿದೆ. ವಾಲ್ಮೀಕಿಯ ರಾಮಾಯಣವನ್ನು ಕಂಬನು ತಮಿಳಿನಲ್ಲಿ ಪುನರ್ಕಥನಿಸುವಾಗ ಆತ ಪ್ರಕರಣಗಳ ಅನುಸ್ಯೂತತೆಯನ್ನು, ತಂದೆ, ಮಗ, ಸೋದರರು, ಮಡದಿಯರು, ಶತ್ರುಗಳು, ಮಿತ್ರರು ಈ ಸಂಬಂಧಗಳ ರಚನೆಯನ್ನು ನಿಷ್ಠೆಯಿಂದ ಪಾಲಿಸುತ್ತಾನೆ. ಆತನ ಕಾವ್ಯ ವಾಲ್ಮೀಕಿಯ ಕಾವ್ಯಕ್ಕಿಂತ ತುಂಬ ದೊಡ್ಡದು. ತಮಿಳಿನ ಇಪ್ಪತ್ತಕ್ಕೂ ಹೆಚ್ಚು ಛಂದಃ ಪ್ರಕಾರಗಳನ್ನು ಅದರಲ್ಲಿ ಬಳಸಲಾಗಿದೆ. ವಾಲ್ಮೀಕಿಯು ಬಹುತೇಕ ಅನುಷ್ಟುಪ್ ಶ್ಲೋಕ ಛಂದಸ್ಸನ್ನು ಮಾತ್ರ ಬಳಸಿದ್ದಾನೆ.

ಕಥಾಭಿತ್ತಿಯ ದೃಷ್ಟಿಯಿಂದ ಸಾಮಾನ್ಯವಾಗಿ ಪಠ್ಯ ೨ – ಪಠ್ಯ ೧ಕ್ಕೆ ನಿಷ್ಠವಾಗಿರುತ್ತದೆ. ಆ ಕಥಾಭಿತ್ತಿಗೆ ಸ್ಥಳೀಯ ವಿವರಗಳು, ಜಾನಪದಾಂಶಗಳು, ಕಾವ್ಯಪರಂಪರೆ, ಪ್ರತಿಮೆ, ಪ್ರತೀಕ ಇತ್ಯಾದಿಗಳೆಲ್ಲವನ್ನು ಮತ್ತೆ ತುಂಬಲಾಗುತ್ತದೆ. ತಮಿಳಿನ ಕಂಬನ ವಕ್ತವ್ಯ ಹಾಗೂ ಬಂಗಾಳಿಯ ಕೃತ್ತಿವಾಸನ ವಕ್ತವ್ಯ ಇದಕ್ಕೆ ನಿದರ್ಶನವಾಗಿವೆ. ಬಂಗಾಳಿ ರಾಮಾಯಣದಲ್ಲಿ ಬಂಗಾಳಿ ಮದುವೆಯ ಆಚರಣೆ, ಭಕ್ಷ್ಯಭೋಜ್ಯ ಇತ್ಯಾದಿಗಳ ವಿವರಣೆಯಿಂದಾಗಿ ರಾಮನ ಮದುವೆಯು ಬಹುತೇಕ ಬಂಗಾಳಿ ಮದುವೆಯಾಗಿ ಮಾರ್ಪಟ್ಟಿದೆ (ಸೇನ್ ೧೯೨೦). ಇಂಥ ಪಠ್ಯವನ್ನು ನಾವು 'ಮಾರ್ಗದರ್ಶಕ' ಪಠ್ಯ ಎನ್ನಬಹುದು. ಏಕೆಂದರೆ, ಒಂದು ನಿರ್ದಿಷ್ಟ ಸ್ಥಳೀಯ ಪರಿಸರ-ಸಂದರ್ಭದಲ್ಲಿ ಪಠ್ಯ ರಚನೆಯಾಗಿದ್ದು ಆ ಸ್ಥಳೀಯ ಪರಿಸರದ ಪ್ರಸ್ತಾಪಗಳು/ಘಟನಾವಳಿಗಳು ಪಠ್ಯದಲ್ಲಿ ಕಾಣಸಿಗುತ್ತವೆ. ಅವುಗಳಿಗೆ ವಿಶೇಷ ಮಹತ್ವವೂ ಪ್ರಾಪ್ತವಾಗುತ್ತದೆ. ಆ ಪ್ರಸ್ತಾಪಗಳನ್ನು ಕೈಬಿಟ್ಟರೆ ಅರ್ಥವಂತಿಕೆಗೂ ಕೆಲವೊಮ್ಮೆ ಕುಂದುಂಟಾಗಬಹುದು. ಹೀಗಾಗಿ ರಾಮಾಯಣವೆಂದರೆ ಕೇವಲ ವ್ಯಕ್ತಿಗತ ಪಠ್ಯಗಳ ಕಂತೆಯಲ್ಲ; ಅದು ವೈವಿಧ್ಯಮಯ ಪ್ರಯತ್ನಗಳ ಒಂದು ಮಾರ್ಗ – ಜಾತಿ ಎನ್ನಬಹುದು.

ನಾವು ಈಗಾಗಲೆ ನೋಡಿರುವಂತೆ ಪಠ್ಯ ೧ರ ಕಥಾಭಿತ್ತಿ ಹಾಗೂ ಪಾತ್ರಗಳನ್ನು ಪಠ್ಯ ೨ ಅತ್ಯಂತ ಮಿತವಾಗಿ ಉಪಯೋಗಿಸಿಕೊಂಡು ಸಂಪೂರ್ಣ ಬೇರೆಯೇ ಆದ ಹೊಸ ವಿಚಾರಗಳನ್ನು ನಿರೂಪಿಸುತ್ತದೆ. ಹೀಗೆ ಮಾಡುತ್ತಾ ಕೆಲವೊಮ್ಮೆ ಅದು ತನಗಿಂತ ಹಿಂದೆ ಇದ್ದ ಕಥನಗಳನ್ನು ಬುಡಮೇಲು ಮಾಡಿ 'ಪ್ರತಿ ಪಠ್ಯ'ವನ್ನು ಸೃಷ್ಟಿಸುತ್ತದೆ. ಇಂಥ ಅನುವಾದವನ್ನು ನಾವು 'ಸಾಂಕೇತಿಕ' ಎಂದು ಕರೆಯಬಹುದು. ಅನುವಾದ ಎಂಬ ಪದಕ್ಕೇ ಇಲ್ಲಿ ಗಣಿತದ ಪರಿಕಲ್ಪನೆ ಬಂದು ಸೇರಿಕೊಳ್ಳುತ್ತದೆ. ಅಂದರೆ ಇದು ಇನ್ನೊಂದು ಸಾಂಕೇತಿಕ ವ್ಯವಸ್ಥೆ ಅಥವಾ ಪಾತಳಿಗೆ ಸಂಬಂಧಗಳ ಒಂದು ಸಂರಚನೆಯನ್ನು ಹೊದಿಸುವ ಪ್ರಯತ್ನ. ಹೀಗಾದಾಗ, ರಾಮಕಥೆಯು ಒಟ್ಟು ಸಾಂಸ್ಕೃತಿಕ ಪರಿಧಿಯಲ್ಲಿನ ಹೆಸರು, ಪಾತ್ರಗಳು, ಘಟನೆಗಳು ಮತ್ತು ಆಶಯಗಳ ಹಂಚಿಕೊಳ್ಳುವಿಕೆಯ ಎರಡನೆಯ ಭಾಷೆಯಾಗಿ ಪರಿಣಮಿಸುತ್ತದೆ. ಇದರಿಂದಾಗಿ ಕಥಾ ನಿರೂಪಣೆ ಮಾಡಿರುವ ಭಾಷೆಯಲ್ಲಿನ ಪಠ್ಯ ೧ ಒಂದು ವಿಚಾರವನ್ನು ಹೇಳಿದರೆ ಪಠ್ಯ ೨ ಅದಕ್ಕಿಂತ ಸ್ವಲ್ಪ

ಬೇರೆಯಾಗಿ, ಕೆಲವೊಮ್ಮೆ ತೀರ ವ್ಯತಿರಿಕ್ತವಾಗಿ ಅದೇ ವಿಚಾರವನ್ನು ನಿರೂಪಿಸುತ್ತದೆ. ಹಿಂದೂ ಕಲ್ಪನೆಯ ವಾಲ್ಮೀಕಿ ರಾಮಾಯಣ, ವಿಮಲಸೂರಿಯ ಜೈನ ಪಠ್ಯ, ಆಗ್ನೇಯ ಏಷ್ಯಾದ ಥಾಯ್ ಭಾಷೆಯ 'ರಾಮಕೀರ್ತಿ' ಇವೆಲ್ಲ ಒಂದು ಇನ್ನೊಂದರ ಸಾಂಕೇತಿಕ ಅನುವಾದಗಳು.

ಮೂಲನಿಷ್ಠ ಅನುವಾದವೂ ಸೇರಿದಂತೆ ಎಲ್ಲ ಅನುವಾದಗಳಲ್ಲೂ ಈ ಮೂರು ಅಂಶಗಳಿರುತ್ತವೆ ಎಂಬುದನ್ನು ನಾವು ಮರೆಯಬಾರದು. ಗೋಲ್ಡ್‌ಮನ್ (೧೯೮೪) ಮತ್ತು ಇತರ ವಿದ್ವಾಂಸರ ತಂಡ ವಾಲ್ಮೀಕಿ ರಾಮಾಯಣದ ಆಧುನಿಕ ಅನುವಾದ ಪ್ರಕಟಿಸಿದ್ದು ಸಂಸ್ಕೃತ ಹೆಸರುಗಳು, ಶ್ಲೋಕಗಳ ಸಂಖ್ಯೆ, ಘಟನಾವಳಿಗಳ ಅನುಕ್ರಮ ಇತ್ಯಾದಿಗಳ ದೃಷ್ಟಿಯಿಂದ ಅದು 'ಮೂಲನಿಷ್ಠ'ವಾಗಿದೆ. ಆದರೆ, ಅದೇ ವೇಳೆಗೆ ಅನುವಾದವು ಇಂಗ್ಲಿಷ್ ನುಡಿಕಟ್ಟಿನಲ್ಲಿದೆ. ಇಪ್ಪತ್ತನೆಯ ಶತಮಾನದ ದೃಷ್ಟಿಕೋನದಿಂದ ಬರೆದ ಪ್ರಸ್ತಾವನೆ ಹಾಗೂ ವಿವರಣಾತ್ಮಕ ಅಡಿಟಿಪ್ಪಣಿಗಳು ಅದರಲ್ಲಿರುವುದರಿಂದ ಅದು ಸಾಂಕೇತಿಕವೂ ಆಗಿದೆ. ಆದರೆ ಈ ಮೂರು ಬಗೆಯ ಸಂಬಂಧಗಳ ಪರಸ್ಪರ ಪ್ರಮಾಣ ಕಂಬ ಹಾಗೂ ಗೋಲ್ಡ್‌ಮನ್ ಇಬ್ಬರಲ್ಲೂ ವ್ಯತ್ಯಸ್ತವಾಗುತ್ತದೆ. ಮೇಲಾಗಿ ನಾವು ಈ ಎರಡೂ ಕೃತಿಗಳನ್ನು ಬೇರೆ ಬೇರೆ ಕಾರಣಗಳಿಗಾಗಿ ಬೇರೆ ಬೇರೆ ಕಲಾತ್ಮಕ ನಿರೀಕ್ಷೆಗಳನ್ನಿಟ್ಟುಕೊಂಡು ಓದುತ್ತೇವೆ. ಪ್ರೌಢವಾದ ಆಧುನಿಕ ಇಂಗ್ಲಿಷ್ ಅನುವಾದವನ್ನು ನಾವು ಮೂಲ ವಾಲ್ಮೀಕಿಯ ಕೃತಿಯ ಪರಿಚಯದ ದೃಷ್ಟಿಯಿಂದ ಓದುತ್ತೇವೆ. ಅಲ್ಲದೆ ಅದು ಮೂಲಕ್ಕೆ ಎಷ್ಟರಮಟ್ಟಿಗೆ ನಿಷ್ಠವಾಗಿದೆ ಎಂಬುದನ್ನು ತುಲನೆಮಾಡಿ ಅದರ ಯಶಸ್ಸನ್ನು ಬೆಲೆಕಟ್ಟುತ್ತೇವೆ. ನಾವು ಕಂಬ ರಾಮಾಯಣವನ್ನು ಓದುವುದು ಕಂಬನನ್ನು ಓದಲೆಂದೇ. ನಾವು ಆತನ ಮೌಲ್ಯನಿರ್ಣಯ ಮಾಡುವುದು ಆತನ ಕಾವ್ಯದಲ್ಲಿ ರೂಪಿತವಾದ ಮಾನದಂಡಗಳಿಂದಲೇ ಹೊರತು ಆತನ ಕಾವ್ಯ ವಾಲ್ಮೀಕಿಯ ಕಾವ್ಯಕ್ಕೆ ಎಷ್ಟರಮಟ್ಟಿಗೆ ನಿಷ್ಠವಾಗಿದೆ ಎಂಬುದರಿಂದಲ್ಲ. ಕೆಲವೊಮ್ಮೆ ಆತನ ಕಾವ್ಯ ವಾಲ್ಮೀಕಿಯಿಂದ ಎಷ್ಟರಮಟ್ಟಿಗೆ ಭಿನ್ನವಾಗಿದೆ ಎಂಬುದನ್ನು ಪರಿಶೀಲಿಸುತ್ತೇವೆ. ಒಂದು ಪ್ರಕರಣದಲ್ಲಿ ಮೂಲ ಪಠ್ಯದ ಜೊತೆಗಿರುವ ಸಾಮ್ಯಗಳನ್ನು ನಾವು ಇಷ್ಟಪಟ್ಟರೆ ಇನ್ನೊಂದು ಪ್ರಕರಣದಲ್ಲಿ ವ್ಯತ್ಯಾಸಗಳ ಸವಿಯನ್ನು ಸವಿಯುತ್ತೇವೆ.

ಇನ್ನೂ ಮುಂದುವರಿದು ಹೇಳುವುದಾದರೆ, ರಾಮಾಯಣಗಳ ಸಾಂಸ್ಕೃತಿಕ ಪರಿಸರಗಳು ಅಂತಹ ಸಂಬಂಧ ಹೊಂದಿದ್ದು ಪಾತ್ರಗಳು, ಸನ್ನಿವೇಶಗಳು, ಭೌಗೋಲಿಕ ಸ್ಥಿತಿಗತಿ, ಘಟನೆಗಳು, ಸಂಬಂಧಗಳು, ಲಿಖಿತ ಹಾಗೂ ಮೌಖಿಕ ವಿಚಾರಗಳು, ನುಡಿಕಟ್ಟುಗಳು, ಪ್ರದರ್ಶನ ಕಲೆಗಳು, ಗಾದೆಗಳು ಇವೆಲ್ಲವನ್ನೂ ಹಂಚಿಕೊಳ್ಳುತ್ತವೆ. ಒಂದು ಘಟನೆ, ಚರ್ಚೆ, ಹಗರಣ ಮುಂದುವರಿಯುತ್ತಲೇ ಇದ್ದರೆ ನಾವು ''ಏನಿದು ಈ ರಾಮಾಯಣ, ಸಾಕು ನಿಲ್ಲಿಸಿ'' ಎನ್ನುತ್ತೇವೆ. ತಮಿಳಿನಲ್ಲಿ ಅಗಲ ಕಿರಿದಾದ ಕೊಠಡಿಯನ್ನು 'ಕಿಷ್ಕಿಂಧ' ಎನ್ನುತ್ತಾರೆ (ಕನ್ನಡದಲ್ಲೂ ಕೂಡ). ಮಂದಮತಿಯೋರ್ವನ ಬಗ್ಗೆ ಇರುವ ಗಾದೆ ಮಾತು ಹೀಗಿದೆ : ''ರಾತ್ರಿಯಿಡೀ ರಾಮಾಯಣ ಕೇಳಿ ಬೆಳಗ್ಗೆ ರಾಮ ಸೀತೆಗೆ ಏನಾಗಬೇಕು ಎಂದು ಕೇಳಿದ ಹಾಗೆ.'' ಬಂಗಾಳಿ ಅಂಕಗಣಿತದ ಪುಸ್ತಕವೊಂದರಲ್ಲಿ ಒಂದು ಪ್ರಶ್ನೆ ಹೀಗಿದೆ : ''ಹನುಮಂತನು ಗೋಡೆಯನ್ನು ಕಟ್ಟಿದ. ಮತ್ತೆ ತುಂಟತನದಿಂದ ಅದರ ಸ್ವಲ್ಪಭಾಗವನ್ನು ಕೆಡವಿದ. ಉಳಿದ ಗೋಡೆಯ ಆಯ ಅಳತೆ ಏನು ?'' ನಾವು ಶೋಭಾನೆ ಹಾಡುಗಳು, ಕಥನ ಕಾವ್ಯಗಳು, ಸ್ಥಳ ಪುರಾಣಗಳು, ಚಿತ್ರಕಲೆ, ಶಿಲ್ಪಕಲೆ ಮತ್ತು ಹಲವು ಪ್ರದರ್ಶನ ಕಲೆಗಳನ್ನು ಈ ನಿದರ್ಶನಗಳ ಜೊತೆಗಿಟ್ಟು ಪರಿಶೀಲಿಸಬಹುದು. ವೈವಿಧ್ಯಮಯವಾದ ಈ ಪಠ್ಯಗಳು ತಮ್ಮ ಹಿಂದಣ ಪಠ್ಯಗಳ ಜೊತೆ ನೇರ ಸಂಪರ್ಕ ಹೊಂದಿವೆ. ತಮಗೆ ಬೇಕಾದುದನ್ನು ಸ್ವೀಕರಿಸಿ ಬೇಡವಾದುದನ್ನು ನಿರಾಕರಿಸುತ್ತವೆ. ಜೊತೆಗೆ ಒಂದು ಸಮಾನ ಮಾಹಿತಿಸಿಂಧುವಿನ ಮೂಲಕ ಪರಸ್ಪರ ಸಂಬಂಧಗಳನ್ನು ಬೆಸೆದುಕೊಂಡಿವೆ. ಒಂದು ರೂಪಕವನ್ನು ಬಳಸಬಹುದಾದರೆ ಪ್ರತಿಯೊಬ್ಬ ಕವಿಯೂ ಈ ಸಿಂಧುವಿನೊಳಗೆ ಮುಳುಗಿ ಮುತ್ತು ರತ್ನಗಳನ್ನು ಆಯ್ದು ತಂದು ಒಂದು ಹೊಸ ಕಥಾ ಸನ್ನಿವೇಶ ಹಾಗೂ ವಿನ್ಯಾಸದೊಡನೆ ತನ್ನ ಕೃತಿ ರಚನೆ ಮಾಡುತ್ತಾನೆ. ''ಕುರಿಗಳಿಂದ ಸಿಂಹವು ರೂಪುಗೊಳ್ಳುತ್ತದೆ'' ಎಂದು ವೆಲೆರಿ ಹೇಳುವ ಹಾಗೆ ಖಂಡ ಕಾವ್ಯಗಳಿಂದ ಮಹಾಕಾವ್ಯಗಳು ಜನ್ಮ ತಳೆಯುತ್ತವೆ. ಅದೇ ರೀತಿ ಕುರಿಗಳು ಕೂಡ ಸಿಂಹಗಳಿಂದ ರೂಪುಗೊಳ್ಳುತ್ತವೆ. ಒಂದು ಜನಪದ ಕಥೆಯ ಪ್ರಕಾರ ರಾಮ ರಾವಣರ ಸಂಗ್ರಾಮದ ಬಳಿಕ ಹನುಮಂತನು ಬೆಟ್ಟದ ತುದಿಯಲ್ಲಿ ಕುಳಿತು ಮೂಲ ರಾಮಾಯಣವನ್ನು ರಚಿಸಿ ಅದನ್ನು ದಿಕ್ಕುದಿಕ್ಕಿಗೆ ಪಸರಿಸಿದ; ಈಗ ನಮ್ಮ ಮುಂದಿರುವ ರಾಮಾಯಣಕ್ಕಿಂತ ಅದು ಗಾತ್ರದಲ್ಲಿ ಹಲವು ಪಟ್ಟು ದೊಡ್ಡದಾಗಿದ್ದಿತು. ವಾಲ್ಮೀಕಿಗೆ ಅದರ ಒಂದು ತುಣುಕನ್ನು ಮಾತ್ರವೇ ಸೆರೆಹಿಡಿಯಲು ಸಾಧ್ಯವಾಯಿತಂತೆ. ಈ ಅರ್ಥದಲ್ಲಿ ಯಾವುದೇ ಪಠ್ಯವು ಕೂಡ ಮೂಲಪಠ್ಯವಲ್ಲ. ಯಾವುದೇ ವಕ್ತವ್ಯವೂ ಕೂಡ ಕೇವಲ ಪುನರ್‌ವಕ್ತವ್ಯವಲ್ಲ. ಪಠ್ಯವನ್ನು ಯಾವುದೋ ಒಂದು ಗ್ರಂಥದಲ್ಲಿ ಅಡಕಗೊಳಿಸಬಹುದಾದರೂ ಕಥೆಗೆ ಮುಕ್ತಾಯವೆಂಬುದಿಲ್ಲ. ಭಾರತದಲ್ಲಿ ಮತ್ತು ಆಗ್ನೇಯ ಏಷ್ಯಾದಲ್ಲಿ 'ರಾಮಾಯಣ' ಮತ್ತು 'ಮಹಾಭಾರತ'ಗಳನ್ನು ಯಾರೂ ಇದೇ ಮೊದಲ ಬಾರಿ ಓದುತ್ತಿರುವುದು ಎಂಬ ಹಾಗೆ ಓದುವುದೇ ಇಲ್ಲ. ರಾಮಾಯಣ ಹಾಗೂ ಭಾರತದ ಕಥೆಗಳು ಈ ನೆಲದಲ್ಲಿ ''ಸದಾ ಸರ್ವದಾ ಸಿದ್ಧ''ವಾಗಿರುತ್ತವೆ.

## ನಗು

ನಗು
ಮನುಷ್ಯನ ಪ್ರತಿಬಿಂಬವಾದರೇ
ಹಿರಿಯರ ನಗು
ತುಟಿಯಂಚಲಿ ಹೊಮ್ಮುತ್ತದೆ
ಕಿರಿಯರ ನಗು
ಹೃದಯಾಂತರಾಳದಿಂದ ಚಿಮ್ಮುತ್ತದೆ

**ರೋಹಿಣಿ ಸತ್ಯ**

ರಾಮಾಯಣದ ಬಗೆಗಿನ ಒಂದು ಜನಪದ ಕಥೆಯೊಂದಿಗೆ ಈ ಲೇಖನ ಪ್ರಾರಂಭಿಸಿದೆ. ಈಗ ಇದನ್ನು ಮುಗಿಸುವ ಮೊದಲು ರಾಮನ ಉಂಗುರ ಮತ್ತು ಹನುಮಂತನ ಬಗ್ಗೆ ಇನ್ನೊಂದು ತೆಲುಗು ಜನಪದ ಕಥೆಯನ್ನು ಹೇಳುವುದು ಉಚಿತವೆನಿಸುತ್ತದೆ. ರಾಮಾಯಣವು ಬೀರುವ ಪ್ರಭಾವ ಹಾಗೂ ನೀವು ನಿಜಕ್ಕೂ ಪರಿಣಾಮಕಾರಿ ಕಥೆಯೊಂದನ್ನು ಕೇಳಿದಾಗ ಆಗುವ ಪ್ರಭಾವವನ್ನು ಕುರಿತಾದ ಕಥೆಯಿದು. ಮೂರ್ಖನೂ ಕೂಡ ಪ್ರಭಾವಕ್ಕೆ ಒಳಗಾಗದಿರಲಾರ. ಕಥೆಯ ಕ್ರಿಯೆ ಹಾಗೂ ಘಟನಾವಳಿಗಳು ಅವನನ್ನು ಮುತ್ತಿಕೊಂಡುಬಿಡುತ್ತವೆ. ಕೇಳುವವನು ಮೂಕಪ್ರೇಕ್ಷಕನಾಗಿ ಉಳಿಯದೆ ಮಹಾಕಾವ್ಯದ ಪ್ರಪಂಚದಲ್ಲಿ ಧುಮುಕಿಬಿಡುತ್ತಾನೆ. ವಾಸ್ತವ ಮತ್ತು ಕಲ್ಪನೆಯ ನಡುವಣ ವಿಭಾಜಕ ರೇಖೆ ಕಣ್ಮರೆಯಾಗುತ್ತದೆ.

**ನೀವು ನಿಜಕ್ಕೂ ಕಿವಿಗೊಟ್ಟು ಕೇಳಿದಾಗ...**

ಹಳ್ಳಿ ಗಮಾರನೊಬ್ಬ ಸುಸಂಸ್ಕೃತಳೂ ಸಂಸ್ಕಾರವಂತಳೂ ಆದವಳೊಬ್ಬಳನ್ನು ಮದುವೆಯಾದ. ಅವಳು ಅವನ ಅಭಿರುಚಿಯನ್ನು ತಿದ್ದುವುದಕ್ಕೆ ಬಹಳ ಪ್ರಯತ್ನಪಟ್ಟಳು. ಆದರೆ ಕಲೆ, ಸಂಗೀತ, ಸಾಹಿತ್ಯ ಯಾವುದರಲ್ಲೂ ಅವನಿಗೆ ಆಸಕ್ತಿಯಿರಲಿಲ್ಲ.

ಒಂದು ಸಲ ರಾಮಾಯಣ ಮಹಾಕಾವ್ಯವನ್ನು ವಾಚನಮಾಡುವ ಒಬ್ಬರು ಗಮಕಿಗಳು ಆ ಹಳ್ಳಿಗೆ ಬಂದರು. ಪ್ರತಿದಿನ ಸಂಜೆ ಅವರು ರಾಮಾಯಣ ಕಾವ್ಯದ ಶ್ಲೋಕಗಳನ್ನು ಹಾಡಿ ಅದರ ಅರ್ಥವನ್ನು ವಿವರಿಸುತ್ತಿದ್ದರು. ಇದೊಂದು ಅಪೂರ್ವ ರಸದೌತಣವೆಂದು ಭಾವಿಸಿ ಹಳ್ಳಿಗೆ ಹಳ್ಳಿಯೇ ಕಾವ್ಯವಾಚನ ಕೇಳಲು ಸೇರುತ್ತಿತ್ತು.

ಹಳ್ಳಿ ಗಮಾರನ ಹೆಂಡತಿ ತನ್ನ ಗಂಡನಿಗೆ ಬಗೆಬಗೆಯಾಗಿ ಹೇಳಿ ಕಾವ್ಯವಾಚನವನ್ನು ಕೇಳಲು ಒತ್ತಾಯಮಾಡಿದಳು. ಎಂದಿನಂತೆ ಅವನು ಗೊಣಗಿದ. ಆದರೂ ಅವನಿಗೆ ಅವಳನ್ನು ಹಾಸ್ಯಮಾಡಬೇಕೆಂದೆನಿಸಿತು. ಹೀಗಾಗಿ ಅವನು ಒಂದು ಸಂಜೆ ಕಾವ್ಯವಾಚನ ಕಾರ್ಯಕ್ರಮಕ್ಕೆ ಹೋಗಿ ಹಿಂದುಗಡೆ ಕುಳಿತುಕೊಂಡ. ಇಡೀ ರಾತ್ರಿ ನಡೆಯುವ ಈ ಕಾರ್ಯಕ್ರಮದುದ್ದಕ್ಕೂ ಅವನಿಗೆ ಎಚ್ಚರವಾಗಿರಲು ಸಾಧ್ಯವಾಗಲಿಲ್ಲ. ಅಲ್ಲಿಯೇ ಮಲಗಿಬಿಟ್ಟ. ಬೆಳಗಿನ ಜಾವ, ಕಾವ್ಯದ ಒಂದು ಆಶ್ವಾಸನದ ವಾಚನ ಮುಗಿಸಿದ ಗಮಕಿಗಳು ಮಂಗಲ ಶ್ಲೋಕ ಹಾಡಿದರು. ಪದ್ಧತಿಯಂತೆ ಪ್ರಸಾದ ವಿತರಣೆ ಮಾಡಿದರು. ಮಲಗಿದ ಈ ಗಮಾರನ ಬಾಯಲ್ಲಿ ಯಾರೋ ಪ್ರಸಾದ ಹಾಕಿದರು. ಕೂಡಲೇ ಅವನು ಎಚ್ಚೆತ್ತು ಮನೆಗೆ ತೆರಳಿದ. ತನ್ನ ಗಂಡ ರಾತ್ರಿ ಇಡೀ ಕಾವ್ಯವಾಚನ ಕೇಳಿ ಬಂದದ್ದರಿಂದ ಹೆಂಡತಿಗೆ ಬಹಳ ಸಂತೋಷವಾಯಿತು. ''ರಾಮಾಯಣ ಕಾವ್ಯದ ವಾಚನ ಹೇಗಿತ್ತು?'' ಎಂದು ಆಕೆ ಕುತೂಹಲದಿಂದ ಕೇಳಿದಳು. ಆಗ ಅವನು ''ಸಿಹಿಯಾಗಿತ್ತು'' ಎಂದ. ಇದರಿಂದ ಹೆಂಡತಿಗೆ ಖುಷಿಯಾಯಿತು.

ಮರುದಿನ ಮತ್ತೆ ಹೆಂಡತಿಯ ಒತ್ತಾಯದ ಮೇರೆಗೆ ಅವನು ಕಾವ್ಯವಾಚನ ನಡೆಯುವಲ್ಲಿಗೆ ಬಂದು ಗೋಡೆಗೆ ಒರಗಿ ಕುಳಿತ. ಸ್ವಲ್ಪ ಹೊತ್ತಿನಲ್ಲೇ ಅವನಿಗೆ ಜೋಂಪು ಹತ್ತಿತು. ಆ ದಿವಸ ತುಂಬಾ ಜನ ಸೇರಿದ್ದರು. ಹೀಗಾಗಿ ಒಬ್ಬ ಹುಡುಗ ಅವನ ಹೆಗಲಮೇಲೆ ಆರಾಮವಾಗಿ ಕುಳಿತು ತೆರೆದ ಕಣ್ಣುಬಾಯಿಗಳಿಂದ ಕಥೆ ಕೇಳಿದ. ಬೆಳಗ್ಗೆ ಯಥಾಪ್ರಕಾರ ಕಾವ್ಯವಾಚನ ಮುಗಿಯಿತು. ಎಲ್ಲರೂ ಎದ್ದುಹೊರಟರು. ಹಳ್ಳಿ ಗಮಾರನ ಹೆಗಲಮೇಲೆ ಕುಳಿತಿದ್ದ ಹುಡುಗ ಮೊದಲೇ ಹೊರಟುಹೋಗಿದ್ದ. ಹಳ್ಳಿ ಗಮಾರನಿಗೆ ಹೆಗಲು ನೋಯುತ್ತಿತ್ತು. ಅವನು ಮನೆಗೆ ಹೋದಾಗ ಕಾರ್ಯಕ್ರಮ ಹೇಗಿತ್ತು ಎಂದು ಹೆಂಡತಿ ಕೇಳಿದಳು. ''ಬೆಳಗಾಗುವ ಹೊತ್ತಿಗೆ ಅದು ಭಾರವಾಗ್ತಾ ಭಾರವಾಗ್ತಾ ಹೋಯಿತು'' ಎಂದ. ಆಗ ಹೆಂಡತಿ ''ಕಥೆ ಇರುವುದೇ ಹಾಗೆ'' ಎಂದಳು. ಕೊನೆಗೂ ತನ್ನ ಗಂಡ ಕಾವ್ಯದ ಮಹತ್ವ ಹಾಗೂ ಅದರಲ್ಲಿ ಅಡಕವಾಗಿರುವ ಭಾವನೆಗಳಿಗೆ ಸ್ಪಂದಿಸು

ತ್ತಿದ್ದಾನೆಂದು ಅವಳಿಗೆ ಬಹಳ ಸಂತೋಷವಾಯಿತು.

ಮೂರನೆಯ ದಿನ ಕೂಡ ಆತ ಹಿಂದುಗಡೆ ಕುಳಿತು ಕೊಂಡ. ಅವನಿಗೆ ಬಹಳ ನಿದ್ದೆ ಬಂದಿತು. ನೆಲದ ಮೇಲೆ ಮಲಗಿಕೊಂಡು ಗೊರಕೆ ಹೊಡೆದ. ಬೆಳಗಿನ ಜಾವ, ಅವನಿಗೆ ಎಚ್ಚರವಾಗುವ ಸ್ವಲ್ಪ ಮೊದಲು ಒಂದು ನಾಯಿ ಬಂದು ಅವನ ಬಾಯಿಗೆ ಉಚ್ಚೆ ಹೊಯ್ದು ಹೋಯಿತು. ಮನೆಯಲ್ಲಿ ಅವನ ಹೆಂಡತಿ ''ಹೇಗಿತ್ತು'' ಎಂದು ಕೇಳಿದಾಗ ಅವನು ತುಟಿಯನ್ನು ಸವರಿಕೊಂಡು, ಮುಖ ಕಿವುಚಿಕೊಂಡು ''ಭಯಂಕರ. ತುಂಬ ಉಪ್ಪು ಉಪ್ಪಾಗಿತ್ತು'' ಎಂದು ಹೇಳಿದ. ಏನೋ ಹೆಚ್ಚು ಕಡಿಮೆ ಆಗಿದೆ ಎಂದು ಹೆಂಡತಿಗೆ ಹೊಳೆಯಿತು. ಅವಳು ಪಟ್ಟುಹಿಡಿದು ಅವನ ಬಾಯಿ ಬಿಡಿಸಿದಳು. ಕಾವ್ಯವಾಚನ ಕಾರ್ಯಕ್ರಮ ನಡೆಯುತ್ತಿದ್ದಾಗ ಅವನು ನಿದ್ರೆ ಹೊಡೆಯುತ್ತಿದ್ದ ಎಂಬುದು ತಿಳಿಯಿತು. ನಾಲ್ಕನೆಯ ದಿನ, ಅವನ ಜೊತೆಗೆ ಅವಳೂ ಬಂದಳು. ಅವಳು ಅವನನ್ನು ಮೊದಲ ಸಾಲಿನಲ್ಲೇ ಕುಳ್ಳಿರಿಸಿದಳು. ಏನೇ ಆಗಲಿ, ಎಚ್ಚರವಾಗಿಯೇ ಇರಬೇಕೆಂದು ಎಚ್ಚರಿಕೆ ನೀಡಿದಳು. ಅವನು ಬಹಳ ವಿಧೇಯತೆಯಿಂದ ಮೊದಲ ಸಾಲಿನಲ್ಲಿ ಕುಳಿತು ಆಲಿಸಿದ. ಸ್ವಲ್ಪ ಹೊತ್ತಿನಲ್ಲೇ ಕಥೆಯಲ್ಲಿ ಬರುವ ಪಾತ್ರಗಳು – ಸಾಹಸಗಳು ಅವನ ಮನ ಸೂರೆ ಗೊಂಡವು. ಆ ದಿನ ಗಮಕಿಗಳು ಸೀತೆಯನ್ನು ಕಂಡು ರಾಮನ ಮುದ್ರೆಯುಂಗುರವನ್ನು ಆಕೆಗೆ ಕೊಡಲು ಹನುಮಂತ ಹೇಗೆ ಸಮುದ್ರವನ್ನು ಹಾರಿದ ಎಂಬ ಭಾಗವನ್ನು ಹಾಡಿ ತೋರಿಸುತ್ತಿದ್ದರು. ಹನುಮಂತ ಹಾರುತ್ತಿರುವಾಗ ಅವನ ಕೈಯಲ್ಲಿದ್ದ ಮುದ್ರೆಯುಂಗುರ ಜಾರಿ ಸಮುದ್ರದ ನೀರಿಗೆ ಬಿದ್ದಿತು. ಆದಷ್ಟು ಬೇಗನೆ ಆ ಉಂಗುರವನ್ನು ನೀರಿಂದ ಮೇಲೆತ್ತಿ ರಾಕ್ಷಸರ ರಾಜ್ಯದಲ್ಲಿ ರುವ ಸೀತೆಗೆ ಒಪ್ಪಿಸಬೇಕು. ಹನುಮಂತನಿಗೆ ಏನು ಮಾಡುವುದೆಂದು ತೋಚದೆ ಕೈ ಕೈ ಹೊಸಕಿಕೊಳ್ಳುತ್ತಿದ್ದ. ಮೊದಲ ಸಾಲಿನಲ್ಲಿ ತದೇಕಚಿತ್ತದಿಂದ ಕೇಳುತ್ತಿದ್ದ ಗಂಡ ಗಟ್ಟಿಯಾಗಿ ಕೂಗಿ ಹೇಳಿದ : ''ಹನುಮಂತ ನೀನೇನೂ ತಲೆ ಬಿಸಿ ಮಾಡಿಕೊಳ್ಳಬೇಡ. ನಾನು ನಿನಗೆ ತಂದು ಕೊಡುತ್ತೇನೆ.'' ಆ ಕೂಡಲೆ ಅವನು ಸಮುದ್ರಕ್ಕೆ ಹಾರಿ, ಅದರ ತಳದಲ್ಲಿದ್ದ ಉಂಗುರವನ್ನು ಹೊರತೆಗೆದು ಹನುಮಂತನಿಗೆ ಕೊಟ್ಟ!

ಪ್ರತಿಯೊಬ್ಬರಿಗೂ ಅಚ್ಚರಿಯೋ ಅಚ್ಚರಿ. ಇವನು ಬಹಳ ಅಸಾಧಾರಣ ವ್ಯಕ್ತಿ ಇರಬೇಕು, ಅವನ ಮೇಲೆ ರಾಮ ಹಾಗೂ ಹನುಮಂತನ ಕೃಪಾಕಟಾಕ್ಷ ಇರಬೇಕು ಎಂದೆಲ್ಲ ಅವರು ಭಾವಿಸಿದರು. ಅಂದಿನಿಂದ ಜನ ಅವನನ್ನು ತಮ್ಮ ಹಳ್ಳಿಯ ಓರ್ವ ಹಿರಿಯ ವ್ಯಕ್ತಿ ಎಂಬ ಗೌರವದಿಂದ ಕಾಣತೊಡಗಿದರು. ಅವನೂ ಕೂಡ ಹಾಗೆಯೇ ವರ್ತಿಸಿದ. ಒಂದು ಕಥೆಯನ್ನು ಅದರಲ್ಲೂ ಮುಖ್ಯವಾಗಿ ರಾಮಾಯಣವನ್ನು ನೀವು ನಿಜಕ್ಕೂ ಕಿವಿಗೊಟ್ಟು ಕೇಳಿದಾಗ ಆಗುವುದು ಹೀಗೇ.

ಎ. ಕೆ. ರಾಮಾನುಜನ್
ಅನುವಾದ : **ಪ್ರೊ॥ ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ॥ ಟಿ.ಎಂ.ಎ. ಪೈ ಶಿಕ್ಷಣ ಕಾಲೇಜು
ಉಡುಪಿ - ೫೭೬ ೧೦೨

# ಗಾಂಧಿಯೊಡನೆ ಮಾತು–ಕತೆ



ಸತ್ಯ ಹೇಳಿ,
ಗಾಂಧಿ ಸತ್ತ.
ಸುಳ್ಳು ಹೇಳಿ,
ಬದುಕಿದ್ದೇನೆ, ಬದುಕುತ್ತಿದ್ದೇನೆ;
ವಿಪರ್ಯಾಸವಾದರೂ ಸತ್ಯ.

ಗಾಂಧಿ
ನಿನ್ನ ತತ್ವಗಳನ್ನೆಲ್ಲಾ ಗಾಳಿಗೆ
ತೂರಿದ್ದೇವೆ,
ಹರಡಲಿಯೆಂದು.
ಸಿದ್ಧಾಂತಗಳಿಗೆಲ್ಲ ಗೋರಿ
ಕಟ್ಟಿದ್ದೇವಲ್ಲ; ಭದ್ರವಾಗಿರಲೆಂದು.

ನಿನ್ನ ಕೂಗಿಗೆ
ಎದ್ದು ನಿಲ್ಲುತ್ತಿದ್ದ ದೇಶಕ್ಕೀಗ, ಕಿವುಡು.
ನೀ ಕಿತ್ತೆಸೆದ ದಾಸ್ಯದ ಚಾದರ ಮತ್ತೆ
ಹೊದ್ದು ಮಲಗಿದೆ, ಜೊತೆಗೆ
ಕಣ್ಣು ಕುರುಡು.

ಕಾಲನೊಡನೆ ಓಡಲಾಗದೆ
ನಿನ್ನ ಗಡಿಯಾರ ಸ್ತಬ್ಧ
ಚರಕಕ್ಕೆ ಕೀಲೆಣ್ಣೆಯಿಲ್ಲವೇನೋ ?
ಕರ್ಕಶ ಶಬ್ದ

ಏಕೋ ಗೊತ್ತಿಲ್ಲ
ನೀ ಹೋದ ಮೇಲೆ,
ಎಲ್ಲ ಲೆಕ್ಕಗಳುತ್ತರ, ಶೂನ್ಯಕ್ಕೆ
ಹತ್ತಿರ.
ಕೂಡಬೇಕಾದದ್ದನ್ನೆಲ್ಲ ಕಳೆಯುತ್ತಿದ್ದೇವೆ.
ಕಳೆಯಬೇಕಾದದ್ದನ್ನೆಲ್ಲ ಕೂಡುತ್ತಿದ್ದೇವೆ.

ಗಾಂಧಿ, ನಿನ್ನ ಕ್ಷಮೆಯಿರಲಿ
ನನಗೆ-ನನ್ನಂಥವರಿಗೆ.
ಪುರುಸೊತ್ತಾದರೆ, ಮತ್ತೆ ಬಾ
ಈ ಜಗಕೆ, ಲೋಕದಾ ಹಿತಕೆ.

ಮೃತ್ಯುಂಜಯ ಎಂ. ಸಾಲಿಮಠ್
೨೦೯, ೩ನೇ 'ಟಿ' ಕ್ರಾಸ್, ೨ನೇ ಬ್ಲಾಕ್, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯



ಸಂಖ್ಯಾಶಾಸ್ತ್ರಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡಿದ್ದಲ್ಲದೆ ಮಹಲನೋಬಿಸ್ ಅವರು ಭಾರತದಲ್ಲಿ ಆ ಶಾಸ್ತ್ರದ ಬೆಳವಣಿಗೆಗಾಗಿ ತುಂಬ ಶ್ರಮಿಸಿದರು. ಕೆಲವು ಅರೆಕಾಲಿಕ ಸಹಾಯಕರೊಂದಿಗೆ ಮತ್ತು ಕೇವಲ ಕೆಲವು ನೂರು ರೂಪಾಯಿಗಳ ವಾರ್ಷಿಕ ಬಜೆಟ್‌ನೊಂದಿಗೆ ಅವರು ೧೯೩೧ರಲ್ಲಿ ಸ್ಥಾಪಿಸಿದ ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಇನ್‌ಸ್ಟಿಟ್ಯೂಟು ೧೯೭೨ರಲ್ಲಿ ಅವರು ಗತಿಸುವ ವೇಳೆಗೆ ೨೦೦೦ ಜನ ಸಿಬ್ಬಂದಿಯುಳ್ಳ ಮತ್ತು ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿದ ಸಂಸ್ಥೆಯಾಯಿತು. ಕೃಷಿ, ಉದ್ಯಮ, ಆಡಳಿತ ಮುಂತಾದವಕ್ಕೆ ಸಂಬಂಧಿಸಿದಂತೆ ನಮ್ಮ ರಾಷ್ಟ್ರ ಎದುರಿಸಿದ ಸಮಸ್ಯೆಗಳ ಪರಿಹಾರಕ್ಕೆ ಆ ಸಂಸ್ಥೆ ನೀಡಿದ ನೆರವು ಗಮನಾರ್ಹ. ಎರಡನೆಯ ಪಂಚವಾರ್ಷಿಕ ಯೋಜನೆ ತಯಾರಿಸುವುದರಲ್ಲಿ ಮಹಲನೋಬಿಸ್ ಅವರ ಪಾತ್ರ ಪ್ರಧಾನವಾದುದು.

# ಪಿ. ಸಿ. ಮಹಲನೋಬಿಸ್

ಗಣಿತ ಶಾಸ್ತ್ರದ ಒಂದು ಪ್ರಕ್ರಿಯೆ ಎಂದು ಪರಿಗಣಿಸಲಾಗಿದ್ದ ವಿಧಾನವೊಂದನ್ನು ಹಲವಾರು ಕ್ಷೇತ್ರಗಳಲ್ಲಿ ಬಳಸಿ, ಆ ಮೂಲಕ ಸಂಖ್ಯಾಶಾಸ್ತ್ರ ಎಂಬ ಪ್ರತ್ಯೇಕ ಶಾಸ್ತ್ರವಾಗಿ ಅದನ್ನು ಬೆಳೆಸಿದವರಲ್ಲಿ ಬ್ರಿಟನ್ನಿನ ಆರ್.ಎ. ಫಿಷರ್ ಪ್ರಮುಖರು. ಅವರ ಮೊತ್ತಮೊದಲ ಅನುಯಾಯಿಗಳಲ್ಲಿ ಒಬ್ಬರಾಗಿದ್ದು, ಆ ಶಾಸ್ತ್ರ ಭಾರತದಲ್ಲಿ ಬೆಳೆಯಲು ತಕ್ಕ ಅಡಿಪಾಯ ಹಾಕಿದ ಜಗತ್ಪ್ರಸಿದ್ಧ ವಿಜ್ಞಾನಿ ಪ್ರಶಾಂತ ಚಂದ್ರ ಮಹಲನೋಬಿಸ್ ಜನಿಸಿ ಮೊನ್ನೆ ಜೂನ್ ೨೯ಕ್ಕೆ ೧೧೫ ವರ್ಷ.

ಸಂಖ್ಯಾಶಾಸ್ತ್ರದಲ್ಲಿ ಸಂಭವನೀಯತೆಯ ಲೆಕ್ಕಾಚಾರಕ್ಕೆ ಪ್ರಾಶಸ್ತ್ಯ. ಅದಕ್ಕೆ ಒಂದು ಉದಾಹರಣೆ : ಯಾವುದೇ ಒಂದು ವರ್ಷ ಜೀವವಿಮೆಯ ಒಂದು ಕಂಪೆನಿಯಲ್ಲಿ ಜೀವವಿಮೆ ಮಾಡಿದ ಹಲವು ಲಕ್ಷ ಜನರೆಲ್ಲ ಅಲ್ಲಿಂದ ಒಂದೆರಡು ತಿಂಗಳಲ್ಲಿಯೇ ಸಾವನ್ನಪ್ಪಿದರೆ, ಅವರೆಲ್ಲರ ವಾರಸುದಾರರಿಗೂ ಹಣ ತೆತ್ತು ಆ ಕಂಪೆನಿ ದಿವಾಳಿಯಾಗಿ ಬಿಡುವುದು ಖಂಡಿತವಷ್ಟೆ. ಆದರೆ ಹಾಗಾಗುವ ಸಂಭವನೀಯತೆ ಹೆಚ್ಚು ಕಡಮೆ ಸೊನ್ನೆ. ಏಕೆಂದರೆ ಗೊತ್ತಾದ ವಯೋಮಿತಿಯಲ್ಲಿರುವ ಮತ್ತು ಆರೋಗ್ಯದಿಂದಿರುವ ಒಂದು ಲಕ್ಷ ಜನರನ್ನು ಲೆಕ್ಕಕ್ಕೆ ತೆಗೆದುಕೊಂಡರೆ, ಅವರಲ್ಲಿ ಅಪಘಾತಕ್ಕೊಳಗಾಗಿ ಅಥವಾ ಮಾರಕವ್ಯಾಧಿ ತಗಲಿ ಅನಿರೀಕ್ಷಿತವಾಗಿ ಅಕಾಲ ಮರಣಕ್ಕೆ ತುತ್ತಾಗುವವರ ಸಂಖ್ಯೆ ಶೇಕಡ ಒಂದು ಅಥವಾ ಎರಡರಷ್ಟು ಸಹ ಇರುವುದಿಲ್ಲವೆಂಬುದು ಅನುಭವಕ್ಕೆ ಬಂದಿದೆ. ಆದುದರಿಂದಲೇ ಜೀವವಿಮೆ ಕಂಪೆನಿಗಳು ಧೈರ್ಯವಾಗಿ ವಿಮೆ ನೀಡುತ್ತವೆ; ಆದರಿಂದ ಯಥೇಚ್ಛ ಲಾಭ ಗಳಿಸಿ ಅಭಿವೃದ್ಧಿಯಾಗುತ್ತವೆ.

ಜನಸಮುದಾಯಗಳಂತೆಯೇ ಪ್ರಾಣಿ ಪಕ್ಷಿಗಳು, ಗಿಡಮರಗಳು, ಅಚೇತನ ವಸ್ತುಗಳು ಮುಂತಾದ ಯಾವುದೇ ಸಮುದಾಯವೊಂದಕ್ಕೆ ಸಂಬಂಧಿಸಿದ ಅಂಕಿ ಅಂಶಗಳನ್ನು ಸಂಗ್ರಹಿಸಿ, ಆ ಅಂಕಿ ಅಂಶಗಳನ್ನು ವಿಶ್ಲೇಷಿಸಿ ನಂಬಿಕೆಗರ್ಹವಾದ ತೀರ್ಮಾನಗಳಿಗೆ ಬರುವುದು ಸಂಖ್ಯಾಶಾಸ್ತ್ರದ ಕ್ರಮ. ವಾಸ್ತವವಾಗಿ ಅಣು ಪರಮಾಣುಗಳ ಸಮುದಾಯಗಳಿಗೆ ಈ ವಿಧಾನವನ್ನು ಅನ್ವಯಿಸಿ ಉಪಯುಕ್ತ ಫಲಿತಾಂಶಗಳನ್ನು ಪಡೆಯುವ ಪರಿಪಾಠವನ್ನು ಭೌತವಿಜ್ಞಾನಿಗಳು ಹತ್ತೊಂಬತ್ತನೆಯ ಶತಮಾನದಲ್ಲಿಯೇ ರೂಢಿಗೆ ತಂದರು. ಅನಂತರದ ದಿನಗಳಲ್ಲಿ ಈ ವಿಧಾನವನ್ನು ಜೀವವಿಜ್ಞಾನದಲ್ಲಿ ವಿಕಾಸ ಸಿದ್ಧಾಂತದ ಸಮಸ್ಯೆಗಳಿಗೆ ಬಳಸಿದರು; ಜನಗಣತಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಬಳಸಿದರು; ಇದೆಲ್ಲದಕ್ಕಾಗಿ ವಿಶೇಷ ವಿಧಿವಿಧಾನಗಳನ್ನು ನಿರ್ಮಿಸಿಕೊಂಡರು. ಅದರ ಪರಿಣಾಮವಾಗಿ ಅದಕ್ಕೆ ಪ್ರತ್ಯೇಕ ಶಾಸ್ತ್ರದ ಸ್ಥಾನ ದೊರೆತದ್ದು ಕಳೆದ ಶತಮಾನದ ಎರಡು ಮತ್ತು ಮೂರನೆಯ ದಶಕಗಳಲ್ಲಿ. ಆ ಅವಧಿಯಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಯಾಗಿ ಕೇಂಬ್ರಿಜ್‌ನಲ್ಲಿದ್ದ ಮಹಲನೋಬಿಸ್ ಅವರು ಅದರಲ್ಲಿ ಆಸಕ್ತಿ ಬೆಳೆಸಿಕೊಂಡರು.

ಮಹಲನೋಬಿಸ್ ಅವರು ಹುಟ್ಟಿದ್ದು ೧೮೯೩ರ ಜೂನ್ ೨೯ರಂದು, ಕಲ್ಕತ್ತೆಯಲ್ಲಿ. ಡಿಗ್ರಿ ಹಂತದವರೆಗಿನ ಶಾಲಾಶಿಕ್ಷಣವನ್ನೂ ಆ ನಗರದಲ್ಲಿಯೇ ನಡೆಸಿ, ಅವರು ಕಲ್ಕತ್ತ ಪ್ರೆಸಿಡೆನ್ಸಿ ಕಾಲೇಜಿನ ವಿದ್ಯಾರ್ಥಿಯಾದರು. ಆಗ ಆ ಕಾಲೇಜಿನಲ್ಲಿ ಎಂಥ ಅತಿರಥ ಮಹಾರಥರಿದ್ದರು ಎಂಬುದು ಗಮನಾರ್ಹ. ಸರ್ ಜಗದೀಶ್ ಚಂದ್ರ ಬೋಸ್ ಭೌತವಿಜ್ಞಾನದ ಪ್ರಾಧ್ಯಾಪಕರು. ಸರ್ ಪಿ. ಸಿ. ರೇ ರಸಾಯನ ವಿಜ್ಞಾನದ ಪ್ರಾಧ್ಯಾಪಕರು. ವಿದ್ಯಾರ್ಥಿಯಾಗಿದ್ದ ಮಹಲನೋಬಿಸ್ ಅವರ ಸಹಪಾಠಿ, ಎನ್. ಆರ್. ಧರ್, ಅವರಿಗಿಂತ ಒಂದು ವರ್ಷ ಕೆಳಗಿನ ತರಗತಿಯಲ್ಲಿ ಮೇಘನಾದ್ ಸಹಾ, ಜೆ. ಸಿ. ಘೋಷ್, ಸತ್ಯೇಂದ್ರನಾಥ ಬೋಸ್, ಜೆ. ಎನ್. ಮುಖರ್ಜಿ ಮುಂತಾದವರಿದ್ದರು. ಈ ಎಲ್ಲರೂ ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿದ ವಿಜ್ಞಾನಿಗಳು. ಇದುವರೆಗೆ ಕೇವಲ ೨೫-೩೦ ಮಂದಿ ಭಾರತೀಯರಿಗೆ ಮಾತ್ರ ದೊರೆತಿರುವ ಎಫ್.ಆರ್.ಎಸ್. (ಫೆಲೊ ಆಫ್ ದಿ ರಾಯಲ್ ಸೊಸೈಟಿ) ಪ್ರಶಸ್ತಿ ಪಡೆದ ನಾಲ್ಕು ಜನ ಏಕಕಾಲದಲ್ಲಿ ಅಲ್ಲಿದ್ದರೆಂಬುದು ಗಮನಾರ್ಹ: ಅಧ್ಯಾಪಕರಾಗಿದ್ದ ಜೆ. ಸಿ. ಬೋಸ್ ಮತ್ತು ವಿದ್ಯಾರ್ಥಿಗಳಾಗಿದ್ದ ಮೇಘನಾದ್ ಸಹಾ, ಮಹಲನೋಬಿಸ್ ಮತ್ತು ಸತ್ಯೇಂದ್ರನಾಥ ಬೋಸ್.

**ಜೆ. ಆರ್. ಲಕ್ಷ್ಮಣರಾವ್**

ಅಂಥ ವಾತಾವರಣದಲ್ಲಿ ವ್ಯಾಸಂಗ ಮಾಡಿದ ಮಹಲನೋಬಿಸ್ ತಮ್ಮ ೧೯ನೆಯ ವಯಸ್ಸಿನಲ್ಲಿ ಬಿ.ಎಸ್‌ಸಿ. (ಆನರ್ಸ್) ಡಿಗ್ರಿ ಪಡೆದು ಮರುವರ್ಷ ಉನ್ನತ ಶಿಕ್ಷಣಕ್ಕಾಗಿ ಕೇಂಬ್ರಿಜ್ ವಿಶ್ವವಿದ್ಯಾನಿಲಯಕ್ಕೆ ತೆರಳಿದರು. ಅಲ್ಲಿ ಭೌತವಿಜ್ಞಾನ ಮತ್ತು ಗಣಿತವನ್ನು ವ್ಯಾಸಂಗಮಾಡಿ ಎಂ.ಎ. ಡಿಗ್ರಿ ಪಡೆದು ೧೯೧೫ರಲ್ಲಿ ಭಾರತಕ್ಕೆ ಹಿಂದಿರುಗಿದರು. ಆ ವರ್ಷವೇ ಅವರು ಕಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ಭೌತವಿಜ್ಞಾನದ ಪ್ರಾಧ್ಯಾಪಕರಾಗಿ ನೇಮಕಗೊಂಡರು. ಏಳು ವರ್ಷಗಳ ತರುವಾಯ ಆ ವಿಭಾಗದ ಮುಖ್ಯಸ್ಥರಾಗಿ ೧೯೪೫ರ ವರೆಗೂ ಆ ವಿಭಾಗದ ಅಭಿವೃದ್ಧಿಗಾಗಿ ಶ್ರಮಿಸಿದರು. ಕೇಂಬ್ರಿಜ್‌ನಲ್ಲಿದ್ದಾಗ ಅವರು ಸಂಖ್ಯಾಶಾಸ್ತ್ರದಲ್ಲಿ ಆಸಕ್ತರಾದುದರ ಪರಿಣಾಮವಾಗಿ, ಜೊತೆಜೊತೆಗೇ ಆ ಕ್ಷೇತ್ರದಲ್ಲಿ ಮೌಲಿಕ ಸಂಶೋಧನೆ ನಡೆಸಿ ಅಂತಾರಾಷ್ಟ್ರೀಯ ಮನ್ನಣೆ ಪಡೆದರು; ೧೯೩೧ರಲ್ಲಿ ಆ ಕ್ಷೇತ್ರದ ಸಂಶೋಧನೆಗೇ ಮೀಸಲಾದ ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಇನ್‌ಸ್ಟಿಟ್ಯೂಟ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಅದರ ನಿರ್ದೇಶಕರಾದರು. ೧೯೪೫ರಲ್ಲಿ ಕಲ್ಕತ್ತ ವಿಶ್ವವಿದ್ಯಾನಿಲಯವು ಸಂಖ್ಯಾಶಾಸ್ತ್ರದ ಸ್ನಾತಕೋತ್ತರ ವಿಭಾಗವನ್ನು ಸ್ಥಾಪಿಸಿದಾಗ ಅವರು ಭೌತವಿಜ್ಞಾನ ವಿಭಾಗದ ಜವಾಬ್ದಾರಿಯನ್ನು ಬೇರೊಬ್ಬರಿಗೆ ವಹಿಸಿ, ಸಂಖ್ಯಾಶಾಸ್ತ್ರ ವಿಭಾಗದ ಮುಖ್ಯಸ್ಥರಾಗುವುದು ಅನಿವಾರ್ಯವಾಯಿತು.

೧೯೪೮ರಲ್ಲಿ ಮಹಲನೋಬಿಸ್ ಅವರು ವಿಶ್ವವಿದ್ಯಾನಿಲಯದ ಸೇವೆಯಿಂದ ಔಪಚಾರಿಕ ನಿವೃತ್ತಿ ಪಡೆದು ಎಮೆರಿಟಸ್ ಪ್ರಾಧ್ಯಾಪಕರಾಗಿ ಮುಂದುವರಿದರು. ೧೯೪೯ರಲ್ಲಿ ಅವರು ಭಾರತ ಸರ್ಕಾರದ ಸಂಖ್ಯಾಶಾಸ್ತ್ರೀಯ ಸಲಹೆಗಾರರಾಗಿ ನೇಮಕಗೊಂಡರು; ೧೯೫೫ರಲ್ಲಿ ಯೋಜನಾ ಆಯೋಗದ ಸದಸ್ಯರಾದರು. ವಿಶ್ವಸಂಸ್ಥೆಯ ಹಲವಾರು ಸಮಿತಿಗಳ ನೇತಾರರಾಗಿ ದುಡಿದರು.

ಸಂಖ್ಯಾಶಾಸ್ತ್ರದಲ್ಲಿ ಮಹಲನೋಬಿಸ್ ಅವರ ಹೆಸರು ಚಿರಸ್ಥಾಯಿಯಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ. ಅವರು ನೀಡಿರುವ ಎರಡು ಅಮೂಲ್ಯ ಕೊಡುಗೆಗಳು ಅದಕ್ಕೆ ಕಾರಣ. ಅವುಗಳಲ್ಲಿ 'ಅಂತರ' ಎಂಬ ಕಲ್ಪನೆ ಒಂದು. ಅಡಕೆ ಮರ ಮತ್ತು ತೆಂಗಿನ ಮರಗಳು ಹತ್ತಿರದ ಸಂಬಂಧಿಗಳು, ಆದರೆ ತೆಂಗಿನ ಮರಕ್ಕೂ ಹುಣಿಸೆ ಮರಕ್ಕೂ ತುಂಬ ಅಂತರ ಎಂಬುದು ಅರ್ಥವಾಗುವ ಮಾತಷ್ಟೆ. ಈ ಅಂತರ ಎಂಬುದಕ್ಕೆ ಬೆಲೆ ನಿರ್ಧರಿಸಿ ಅದನ್ನು ಲೆಕ್ಕಾಚಾರಗಳಲ್ಲಿ ಬಳಸಿಕೊಳ್ಳುವಲ್ಲಿ ಮಹಲನೋಬಿಸ್ ಯಶಸ್ವಿಯಾಗಿದ್ದಾರೆ. ಒಂದು ಉದಾಹರಣೆ ತೆಗೆದುಕೊಳ್ಳೋಣ. ಚದರಾಕೃತಿಯನ್ನು ವೃತ್ತ ಎಂದು ತಪ್ಪಾಗಿ ಭಾವಿಸಿಕೊಳ್ಳುವ ಸಂಭವನೀಯತೆ ಸೊನ್ನೆ ತಾನೆ. ಆದರೆ ಅಂಡಾಕೃತಿಯು ಹಿಗ್ಗಲಿಸಿದ ವೃತ್ತದಂತಿರುವುದರಿಂದ ಅದನ್ನು ವೃತ್ತ ಎಂದು ತಪ್ಪಾಗಿ ಭಾವಿಸಿಕೊಳ್ಳುವ ಸಂಭವನೀಯತೆ ಸೊನ್ನೆಗಿಂತ ಹೆಚ್ಚು. ಅಂಡಾಕೃತಿಯ ಹಿಗ್ಗಲಿಕೆ ಕಡಮೆಯಾದಷ್ಟೂ ಅದನ್ನು ವೃತ್ತವೆಂದು ತಪ್ಪಾಗಿ ಭಾವಿಸಿಕೊಳ್ಳುವ ಸಂಭವನೀಯತೆ ಹೆಚ್ಚುತ್ತ ಹೋಗುವುದಷ್ಟೆ. ಹಿಗ್ಗಲಿಕೆ ಅತ್ಯಂತ ಕಡಮೆಯಾಗಿ ಅದು ವೃತ್ತವೇ ಆಗಿಹೋದರೆ? ಆಗ ಆ ಸಂಭವನೀಯತೆ ೧ (ಒಂದು) ಆಗಿಬಿಡುತ್ತದೆ. ಈಗ ಅಡಕೆ ಮರ ಮತ್ತು ತೆಂಗಿನ ಮರಗಳ ವಿಷಯಕ್ಕೆ ಬರೋಣ. ಅಡಕೆ ಮರವನ್ನು ತೆಂಗಿನ ಮರ ಎಂದು ತಪ್ಪಾಗಿ ಭಾವಿಸಿಕೊಳ್ಳುವ ಸಂಭವನೀಯತೆ ಸೊನ್ನೆಗಿಂತ ಹೆಚ್ಚು, ೧ಕ್ಕಿಂತ ಕಡಮೆಯಷ್ಟೆ. ಅದು x ಆಗಿದ್ದರೆ (1-x) ಅನ್ನು ಅವುಗಳ ನಡುವಿನ ಅಂತರ ಎಂದು ತೆಗೆದುಕೊಳ್ಳತಕ್ಕುದೆಂಬುದು ಮಹಲನೋಬಿಸ್ ಅವರ ಸಲಹೆ. ಇದು ಸಂಖ್ಯಾಶಾಸ್ತ್ರೀಯ ಲೆಕ್ಕಾಚಾರಗಳಲ್ಲಿ ತುಂಬ ಪರಿಣಾಮಕಾರಿಯಾಗಿ ಕಂಡುಬಂದಿದೆ.

ಮಾದರಿ ಸಮೀಕ್ಷೆಗಳನ್ನು ನಡೆಸುವ ಶಿಷ್ಟ ರೀತಿ ರಿವಾಜುಗಳನ್ನು ರೂಪಿಸಿದುದು ಅವರ ಎರಡನೆಯ ಮುಖ್ಯ ಕೊಡುಗೆ. ಭಾರತೀಯ ಸ್ತ್ರೀಯರಲ್ಲಿ ಸಾಕ್ಷರತೆ ಎಷ್ಟಿದೆ ಎಂಬ ಪ್ರಶ್ನೆಗೆ ಉತ್ತರ ಬೇಕಾದರೆ ಜನಗಣತಿ ಮುಗಿಯುವವರೆಗೂ ಕಾಯಬೇಕಾಗಿಲ್ಲ. ರಾಷ್ಟ್ರದ ಆಯ್ದ ಬೇರೆ ಬೇರೆ ಕಡೆ ಒಂದೊಂದರಲ್ಲೂ ಐದಾರು ಸಾವಿರ ಜನರುಳ್ಳ ಹತ್ತಿಪ್ಪತ್ತು ಮಾದರಿ ಜನಸಮುದಾಯಗಳಲ್ಲಿ ಸಮೀಕ್ಷೆ ನಡೆಸಿದರಾಯಿತು. ಅದರಿಂದ ದೊರೆಯುವ ಫಲಿತಾಂಶಕ್ಕೂ ಸಂಪೂರ್ಣ ಜನಗಣತಿಯಿಂದ ದೊರೆಯುವ ಫಲಿತಾಂಶಕ್ಕೂ ಗಮನಾರ್ಹ ವ್ಯತ್ಯಾಸ ಬರದಿರುವಂತೆ ಮಾದರಿ ಜನಸಮುದಾಯಗಳನ್ನು ಆಯ್ದುಕೊಳ್ಳುವ ವಿಧಿವಿಧಾನಗಳನ್ನು ರೂಪಿಸುವಲ್ಲಿ ಅವರು ಪ್ರಮುಖ ಪಾತ್ರ ವಹಿಸಿದರು.

ಸಂಖ್ಯಾಶಾಸ್ತ್ರಕ್ಕೆ ಹೀಗೆ ಅಮೂಲ್ಯ ಕೊಡುಗೆಗಳನ್ನು ನೀಡಿದ್ದಲ್ಲದೆ ಮಹಲನೋಬಿಸ್ ಅವರು ಭಾರತದಲ್ಲಿ ಆ ಶಾಸ್ತ್ರದ ಬೆಳವಣಿಗೆಗಾಗಿ ತುಂಬ ಶ್ರಮಿಸಿದರು. ಕೆಲವು ಅರೆಕಾಲಿಕ ಸಹಾಯಕರೊಂದಿಗೆ ಮತ್ತು ಕೇವಲ ಕೆಲವು ನೂರು ರೂಪಾಯಿಗಳ ವಾರ್ಷಿಕ ಬಜೆಟ್‌ನೊಂದಿಗೆ ಅವರು ೧೯೩೧ರಲ್ಲಿ ಸ್ಥಾಪಿಸಿದ ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಇನ್‌ಸ್ಟಿಟ್ಯೂಟು ೧೯೭೨ರಲ್ಲಿ ಅವರು ಗತಿಸುವ ವೇಳೆಗೆ ೨೦೦೦ ಜನ ಸಿಬ್ಬಂದಿಯುಳ್ಳ ಮತ್ತು ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿದ ಸಂಸ್ಥೆಯಾಯಿತು. ಕೃಷಿ, ಉದ್ಯಮ, ಆಡಳಿತ ಮುಂತಾದವಕ್ಕೆ ಸಂಬಂಧಿಸಿದಂತೆ ನಮ್ಮ ರಾಷ್ಟ್ರ ಎದುರಿಸಿದ ಸಮಸ್ಯೆಗಳ ಪರಿಹಾರಕ್ಕೆ ಆ ಸಂಸ್ಥೆ ನೀಡಿದ ನೆರವು ಗಮನಾರ್ಹ. ಎರಡನೆಯ ಪಂಚವಾರ್ಷಿಕ ಯೋಜನೆ ತಯಾರಿಸುವುದರಲ್ಲಿ ಮಹಲನೋಬಿಸ್ ಅವರ ಪಾತ್ರ ಪ್ರಧಾನವಾದುದು.

ಮಹಲನೋಬಿಸ್ ಅವರನ್ನು ಅರಸಿಕೊಂಡು ಬಂದ ಪ್ರಶಸ್ತಿಗಳು ಅನೇಕ. ೧೯೪೫ರಲ್ಲಿ ಅವರು ಎಫ್.ಆರ್.ಎಸ್. ಪ್ರಶಸ್ತಿಗೆ ಆಯ್ಕೆಯಾದರು. ಬ್ರಿಟನ್, ಅಮೆರಿಕಾ, ಫ್ರಾನ್ಸ್, ರಷ್ಯಾ ಮುಂತಾದ ರಾಷ್ಟ್ರಗಳ ವಿದ್ವನ್ಮಂಡಲಿಗಳು ಅವರಿಗೆ ಗೌರವ ಸದಸ್ಯತ್ವವನ್ನು ನೀಡಿದವು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ನೀಡುವ ವೆಲ್ಡನ್ ಪದಕ ಮತ್ತು ಕಲ್ಕತ್ತ ವಿಶ್ವವಿದ್ಯಾನಿಲಯದ ಸರ್ವಾಧಿಕಾರಿ ಪದಕಗಳು ಅವರಿಗೆ ದೊರೆತುವು. ೧೯೬೮ರಲ್ಲಿ ಅವರು ಪದ್ಮಭೂಷಣರಾದರು. ಸಾರ್ಥಕವಾದ ತುಂಬು ಜೀವನ ನಡೆಸಿದ ಮಹಲನೋಬಿಸ್ ತಮ್ಮ ೭೯ನೆಯ ಹುಟ್ಟುಹಬ್ಬದ ಹಿಂದಿನ ದಿನ, ೧೯೭೨ರ ಜೂನ್ ೨೮ರಂದು ಮಡಿದರು.

ಜೆ. ಆರ್. ಲಕ್ಷ್ಮಣರಾವ್
ನಂ. ೨೩೪, 'ಮೈತ್ರಿ', ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯

# ವ್ಯವಸ್ಥೆ - ಅವ್ಯವಸ್ಥೆ

ವ್ಯವಸ್ಥೆ ನೋಡಿ
ನಗಬಾರದು
ಹಾಸ್ಯಾಸ್ಪದವಾಗುತ್ತದೆ
ವ್ಯವಸ್ಥೆ ನೋಡಿ
ಅಳಬಾರದು
ಮರುಕ ಉಕ್ಕುತ್ತದೆ
ದಯನೀಯ
ಸ್ಥಿತಿಯುಂಟಾಗುತ್ತದೆ
ವ್ಯವಸ್ಥೆ ನೋಡಿ
ಸ್ಪಂದಿಸಬಾರದು
ದುರ್ಬಲತೆ ಮೆರೆಯುತ್ತದೆ
ಸಬಲತೆ ಸಾಯುತ್ತದೆ
ಹಾಗಾದರೆ ವ್ಯವಸ್ಥೆಯ
ಕಂಡು ಏನು ಮಾಡಬೇಕು... !?
ಏನಿಲ್ಲ, ಅಂಥದ್ದೇನೂ
ಮಾಡಬೇಕಿಲ್ಲ.
ಆದರೆ ನಗಬೇಕಿಲ್ಲ
ಸ್ಪಂದನೆಯ ಅಗತ್ಯವಿಲ್ಲ
ಬದಲಾಗಿ, ಸ್ವಲ್ಪ ಏಳಿ, ಎದ್ದೇಳಿ
ಮಾತಾಡಿ, ಹೋರಾಡಿ
ಕ್ರಾಂತಿ ತನ್ನಿಂತಾನೇ ಸೃಷ್ಟಿಯಾಗುತ್ತದೆ
ವ್ಯವಸ್ಥೆಯೊಳಗಣ ಅವ್ಯವಸ್ಥೆ
ಗೋಚರವಾಗುತ್ತದೆ
ಕೆಲವೊಮ್ಮೆ ಸರಿಯಾಗುತ್ತದೆ!

ಪಿ. ಸುಬ್ರಹ್ಮಣ್ಯ ಭಟ್
ಉಪನ್ಯಾಸಕ, ತುಂಬೆ ಪದವಿ ಪೂರ್ವ ಕಾಲೇಜು
ತುಂಬೆ - ೫೭೪ ೧೭೦
ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ





ಅವ ಪಾಕಿಸ್ತಾನಕ್ಕೆ ಹೋಗುವವ. ಆದರೆ ಆ ನೆಲ ಬಿಡುತ್ತೇನೆ, ಸ್ವಲ್ಪ ದುಡ್ಡು ಕೊಡಿ ಎಂದು ಧನಿಗಳಲ್ಲಿ ಚೌಕಾಸಿ ಮಾಡಿ, ಸಿಕ್ಕಿದ ದುಡ್ಡಲ್ಲಿ ಬಂಗಾರ ತೆಗೆದುಕೊಂಡು ಪಾಕಿಸ್ತಾನಕ್ಕೆ ಹೊರಡಬೇಕಾಗಿತ್ತು. ಪಾಕಿಸ್ತಾನಕ್ಕೆ ಹೋಗಬೇಕೆಂದಿದ್ದರೆ ಬಂಗಾರ ಸುಲಭವಾಗಿ ಸಿಗುತ್ತಿತ್ತು. ಬದಲಾಗಿ, ಅವ ಇರುವ ಬಂಗಾರ ಮಾರಿ ನೆಲ ಉಳಿಸಿಕೊಳ್ಳಲು ಹೊರಟ. ''ಅವನಿಗೆ ಈ ನೆಲದ ಪ್ರೀತಿ ಇಲ್ಲ; ದೇಶಬಿಟ್ಟು ಅಮೆರಿಕಾದ ಪೌರತ್ವ ಪಡೆದವರಿಗೆ ದೇಶ ಭಕ್ತಿ ಇದೆ ಎನ್ನುವುದು ಯಾವ ಲೆಕ್ಕಾಚಾರ'' ಎಂದು ಕೇಳಿದೆ. ಕೆಲವರು ಮೌನವಾದರು. ಮತ್ತೆ ಮಾತು ಬೇರೆ ಕಡೆ ಹೊರಳಿತು. ಈ ಘಟನೆಯ ನಂತರ ಇಬ್ರಾಯಿ ನನ್ನ ನೆನಪಲ್ಲಿ ಗಟ್ಟಿಯಾಗಿ ಉಳಿದ.

# ಪಡ್ಯಾರಿನ ಪಾಠಗಳು

## (ದಕ್ಷಿಣ ಕನ್ನಡ ಜೀವನ : ಅಂದು-ಇಂದು)

ಎಸ್. ಆರ್. ವಿಜಯಶಂಕರ

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

೧೯೭೪ರಲ್ಲಿ ಗೇಣಿ ಭೂಮಿ ಕಾನೂನು ಬಂದ ಬಳಿಕ ನಡೆದ ಒಂದು ಘಟನೆ ನನಗೆ ಬಹಳ ಚೆನ್ನಾಗಿ ನೆನಪಿದೆ. ಸುಮಾರು ೧೯೭೦ರ ದಶಕದ ಕೊನೆಯ, ೧೯೮೦ರ ಆದಿಯಲ್ಲಿ ಇವೆಲ್ಲಾ ನಡೆದದ್ದು.

ನಮ್ಮ ಊರಲ್ಲಿ ಇಬ್ರಾಯಿ ಅಂತ ಒಬ್ಬ ಇದ್ದ. ಅವನು ಒಂದು ಗುಡ್ಡದ ಬುಡದಲ್ಲಿ ಗದ್ದೆ ಹುಣಿಗಳ ಕಾಲು ಹಾದಿಯಲ್ಲಿ ಸಾಗಿದ ದಾರಿಯ ಬಳಿಕ ಸುಮಾರು ಹತ್ತು ಸೆಂಟ್ಸ್ ಜಾಗದಲ್ಲಿದ್ದ. ಅಲ್ಲೊಂದು ಮುಳಿಮನೆ ಕಟ್ಟಿಕೊಂಡು ದನಿಗಳಾದ ಶಂಕರ ಭಟ್ಟರಲ್ಲಿಗೆ ಕೆಲವೊಮ್ಮೆ ಕೂಲಿ ಕೆಲಸಕ್ಕೆ ಆಮೇಲೆ ತಲೆಯ ಮೇಲೆ ಮೀನಿನ ಬುಟ್ಟಿ ಹೊತ್ತುಕೊಂಡು ವ್ಯಾಪಾರಕ್ಕೆ ಹೋಗುತ್ತಿದ್ದ. ಅವನು ಪಳ್ಳಿ ಬ್ಯಾರಿ ಎಂಬವನ ಮಗಳು ಮೋಣು ಬ್ಯಾರ್ತಿಯನ್ನು ಮದುವೆಯಾಗಿದ್ದ. ಅವನಿಗೆ ಒಬ್ಬಳೇ ಹೆಂಡತಿ. ಮೋಣು ಬ್ಯಾರ್ತಿ ಕೂಲಿ ಕೆಲಸಕ್ಕೆ ಹೋಗುತ್ತಿದ್ದಳು. ಇಬ್ರಾಯಿ ಕೂಲಿ ಬಿಟ್ಟು, ತಲೆಯ ಮೇಲೆ ಮೀನಿನ ಬುಟ್ಟಿ ಹೊತ್ತು ವ್ಯಾಪಾರ ಮಾಡುವುದನ್ನೇ ಕಾಯಂ ಮಾಡಿದ. ಮೀನು ಮಾರುವ ಕೆಲವರಿಗೆ ಸೈಕಲ್ ಇತ್ತು. ಇಬ್ರಾಯಿ ಬ್ಯಾರಿ ಕೆಲಿಂಜ ಮೇಲೆ ಹೊತ್ತುಕೊಂಡು ಹಳ್ಳಿಯಲ್ಲಿ ಸುತ್ತಾಡಿಕೊಂಡೇ ವ್ಯಾಪಾರ ಮಾಡಬೇಕಾಗುತ್ತಿತ್ತು.

ಮೀನು ಮೂವತ್ತು ಮೈಲಿ ದೂರದ ಮಂಗಳೂರಿನ ಕಡಲಕರೆಯಿಂದ ಕಲ್ಲಡ್ಕಕ್ಕೆ ಬಂದು ಅಲ್ಲಿಂದ ಕೆಲಿಂಜದ ಹತ್ತಿರ ಬಂದು ಇಬ್ರಾಯಿಯ ಬುಟ್ಟಿಸೇರಿ ತಲೆಹೊರೆಯಲ್ಲಿ ಹೋಗಿ ಮಾರಾಟವಾಗಬೇಕು. ಸ್ವಲ್ಪ ತಡವಾದರೆ, ಮಾರಾಟವಾಗದೆ ಮೀನು ಉಳಿದರೆ ಅವನಿಗೆ ಲುಕ್ಸಾನು. ಆದರೂ ಅವನು ವ್ಯಾಪಾರ ಬಿಡಲೊಲ್ಲ. ಕೂಲಿಕೆಲಸಕ್ಕೆ ಬಾರದೆ ಓಡಾಡುತ್ತಿದ್ದ. ವ್ಯಾಪಾರದಲ್ಲಿ ಲಾಭವೇನಿಲ್ಲ. ಆದರೂ ಕೇಳುವುದಿಲ್ಲ ಎಂದು ಮೋಣು ಬ್ಯಾರ್ತಿ ಗೊಣಗುತ್ತಿದ್ದಳು. ಒಮ್ಮೊಮ್ಮೆ ಮೀನು ಉಳಿದರೆ ಅದನ್ನು ಬೇಗೆಯಲ್ಲಿ ಒಣಗಿಸಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಹಾಗಿದ್ದಾಗಲೆಲ್ಲಾ ಅವಳ ಮನೆಯಲ್ಲಿ ಮೀನಿನ ವಾಸನೆ. ಏನೇ ಆಗಲಿ ಗಂಡ ಇನ್ನೊಂದು ಮದುವೆಯಾಗದೆ ತನ್ನ ಜೊತೆಗೇ ಇದ್ದಾನಲ್ಲ ಎಂಬ ಸಮಾಧಾನದಲ್ಲಿದ್ದಳು. ಅವಳಿಗೆ ಒಂದು ಹೆಣ್ಣು ಒಂದು ಗಂಡು ಮಗು. ಹುಡುಗ ಚಿಕ್ಕವ. ಮನೆಯಲ್ಲಿ ಎಲ್ಲರಿಗೂ ಗಂಜಿ ಆಗಬೇಕಾದರೆ ತಾನು ಕೆಲಸ ಮಾಡದಿದ್ದರೆ ಸಾಧ್ಯವಿಲ್ಲವಲ್ಲ ಎಂದು ನನ್ನ ದೊಡ್ಡಜ್ಜನ ಹೆಂಡತಿ ಅಂದರೆ, ನನ್ನ ಅಜ್ಜಿಯಲ್ಲಿ [illegible] ಹೇಳಿಕೊಳ್ಳುತ್ತಿದ್ದಳು. ಮಗಳ ಮದುವೆಗೆ ಬೇಕು ಎಂದು ಕೂಲಿ ಕೆಲಸದಲ್ಲಿ [illegible]

ಸಣ್ಣ ಪುಟ್ಟ ಬಂಗಾರ ಮಾಡಿಸಿದ್ದಳು. ಬ್ಯಾರ್ತಿಗಳಿಗೆ ಕಿವಿಯ ಮೇಲೆಲ್ಲ ಕುತ್ತಿದ, ಬಂಗಾರದ ಸರಿಗೆಯ ಮೇಲ್ಕುತ್ತುಗಳಿದ್ದವು. ಹಾಗಾಗಿ ಅವೆಲ್ಲಾ ಬಂಗಾರದ ಸರಿಗೆಯ ಆಭರಣಗಳು. ಕೊರಳಿಗೆ ಪಟ್ಟೆನೂಲಿನಲ್ಲಿ ಸುರಿಯುವಂತಹ, ಒಳಗೆ ಬೆಂಡು ತುಂಬಿಸಿ ಬಂಗಾರದ ತೆಳ್ಳಗಿನ ತಗಡಿನಿಂದ ಮಾಡಿದ ಪಳ್ಳಿಗಳಂತೆ ತೋರುವ ಆಭರಣಗಳು. ಒಂದು ಪವನು ಚಿನ್ನ ಇದ್ದರೆ ಬ್ಯಾರ್ತಿಗಳಿಗೆ ಕೊರಳು ತುಂಬಾ ಆಭರಣ ಮಾಡಿಸಬಹುದು. ಅವರ ಬಂಗಾರದ ಅಲಂಕಾರವೇ ಹಾಗೆ ಎಂದು ನಮ್ಮ ಮನೆಯ ಹೆಂಗಸರು ಮಾತಾಡಿಕೊಳ್ಳುತ್ತಿದ್ದರು.

ಭೂಮಿ ಗೇಣಿ ಕಾನೂನು ಬಂದ ಬಳಿಕ ತನ್ನ ಮುಳಿಮನೆ ಇರುವ ಜಾಗಕ್ಕೆ ಡಿಕ್ಲೇರೇಶನ್ ಹಾಕಿ ಅದನ್ನು ಸ್ವಂತದ್ದನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆ ಇಬ್ರಾಯಿ ಬ್ಯಾರಿಗೆ. ಒಂದು ಎಕರೆ ಎಂದರೆ ನೂರು ಸೆಂಟ್ಸ್, ಅವನು ಕೇಳುವ ಜಾಗ ಮನೆ ಸೇರಿ ಸುಮಾರು ಹತ್ತು ಸೆಂಟ್ಸ್. ಆದರೆ ಅದು ಕೃಷಿ ಭೂಮಿ ಅಲ್ಲ. ಇದ್ದುದರಿಂದ ಅವನಿಗೆ ಡಿಕ್ಲರೇಶನ್ ಕೊಡುವ ಹಕ್ಕಿಲ್ಲ ಎಂದು ದನಿಗಳ ವಾದ. ಕೃಷಿ ಕೂಲಿ ಕಾರ್ಮಿಕರಿಗೆ ಇರುವ ಮನೆ ಹಕ್ಕಿನಲ್ಲೂ ಡಿಕ್ಲರೇಶನ್ ಹಾಕಲು ಸಾಧ್ಯವಿಲ್ಲ. ಯಾಕೆಂದರೆ ಅವ ಕೂಲಿ ಕೆಲಸ ಮಾಡುವುದಿಲ್ಲ ಎಂದು ದನಿಗಳ ವಾದ. ಈ ದನಿಗಳಾದ ಶಂಕರ ಭಟ್ಟರು ನನ್ನ ಅಜ್ಜ.

ಊರಿಗೆ ಬಂದದ್ದು. ಯಾರಿಗೆ ಏನು ಮಾಡಲೂ ಸಾಧ್ಯವಿಲ್ಲ. ಪಂಚಾಯಿತಿಕೆ ಮಾಡಿ ಮಾತಾಡಿ ಅವನು ಮನೆ ಮತ್ತು ಎಷ್ಟು ಕಮ್ಮಿಗೆ ಒಪ್ಪುತ್ತಾನೋ ಅಷ್ಟು ಜಾಗ ಬಿಟ್ಟುಕೊಡುವುದು ಉತ್ತಮ ಎಂದು [illegible] ಮಾಡುತ್ತಿದ್ದರು. ಆದರಿಂದ [illegible]

ಎಂದು ನನ್ನ ತಂದೆಯವರನ್ನು ಬೈದರು. ಅವ ಡಿಕ್ಲರೇಶನ್ ಹಾಕಿದರೆ ಅದನ್ನು ವಿರೋಧಿಸಬೇಕು, ಟ್ರಿಬ್ಯುನಲ್‌ನಲ್ಲಿ ಸೋತರೆ ಹೈಕೋರ್ಟಿನಲ್ಲಿ ರಿಟ್ ಹಾಕಬೇಕು, ಕೆಲಸಕ್ಕೆ ಬಾರದ ಬ್ಯಾರಿಗೆ ಭೂಮಿ ಬಿಡಬಾರದು, ಅವನೊಡನೆ ಮಾಡಿಕೊಂಡ ಬಾಡಿಗೆ ಚೀಟಿ ಇದೆ, ಅವ ಕೂಲಿ ಕೆಲಸದವ ಅಲ್ಲ ಎಂಬ ವಾದ ಮಾಡಬೇಕು ಎಂದು ನನ್ನ ಅಜ್ಜ ಹೇಳುತ್ತಿದ್ದರು.

ಇಬ್ರಾಯಿ ಕಾಂಗ್ರೆಸ್ ಮುಖಂಡರ ಸಲಹೆ ಪಡೆದು ಆ ಭೂಮಿಗೆ ಡಿಕ್ಲರೇಶನ್ ಹಾಕಿದ. ನನ್ನ ಅಜ್ಜ ಊರಿನಲ್ಲಿ ಮಹಾ ಹಠವಾದಿ ಎಂದು ಪ್ರಸಿದ್ಧಿ. ಕೋರ್ಟಿನ ಕೇಸುಗಳಲ್ಲಿ ಅವರು ಸೋಲು ಕಂಡಿಲ್ಲ. ಅಷ್ಟು ಚೆನ್ನಾಗಿ ಕಾನೂನು ತಿಳಿದವರು ಎಂದೇ ಪ್ರಸಿದ್ಧಿ. 'ಮಲ್ಲ ಅಣ್ಣೇರು ಕೋರ್ಟುಗು ಪೋವೆರು' ಎಂದು ಎಲ್ಲರೂ ತಿಳಿದಿದ್ದರು.

ಆಗ ನಮ್ಮ ಸುತ್ತಮುತ್ತಲಿನ ಊರುಗಳಿಂದ ವಿಪರೀತ ಲ್ಯಾಂಡ್ ರಿಫಾರ್ಮ್ಸ್ ಕೇಸುಗಳು ಹೈಕೋರ್ಟ್‌ನಲ್ಲಿ ದಾಖಲಾಗುತ್ತಿದ್ದವು. ಕೆ. ಕೃಷ್ಣಭಟ್ ಎಂಬ ವಕೀಲರ ಬಳಿ ಹೆಚ್ಚಾಗಿ ಒಕ್ಕಲುಗಳು ಹೋಗುತ್ತಿದ್ದರು. ಪುಂಡಿಕ್ಕಾ ಗಣಪತಿ ಭಟ್ ಎಂಬ ವಕೀಲರ ಬಳಿ ಹೆಚ್ಚಿನ ದನಿಗಳು ಹೋಗುತ್ತಿದ್ದರು. ಈ ವಕೀಲರು ಹೈಕೋರ್ಟಿಗೆ ರಜಾ ಇದ್ದ ಸಮಯದಲ್ಲಿ ಊರಿಗೆ ಬಂದಾಗ ಅವರಿಗೆ ಬಿಡುವೇ ಇರುತ್ತಿರಲಿಲ್ಲ. ಅವರಲ್ಲಿ ಪುಂಡಿಕ್ಕಾ ಗಣಪತಿ ಭಟ್ಟರು ಮದ್ರಾಸು ಲಾ ಕಾಲೇಜಿನಲ್ಲಿ ಓದುವಾಗ ನನ್ನ ತಂದೆಯವರ ಸಹಪಾಠಿಗಳು. ಅವರಿಬ್ಬರೂ ಉತ್ತಮ ಸ್ನೇಹಿತರು. ಬೆಂಗಳೂರಿಗೆ ಹೋದಾಗ ನನ್ನ ತಂದೆಯವರು ಪುಂಡಿಕ್ಕಾ ಗಣಪತಿ ಭಟ್ಟರ ಜೊತೆ ಇರುತ್ತಿದ್ದರು. ಗಣಪತಿ ಭಟ್ಟರು ಊರಿಗೆ ಬಂದಾಗ . ನಮ್ಮ ಮನೆಗೆ ಬರುತ್ತಿದ್ದರು. ಇದರಿಂದಾಗಿ ನಾವು ಕೇಸು ಹಾಕಿ ಹೈಕೋರ್ಟಿನಲ್ಲಿ ಹೋರಾಡುವುದು ಖಂಡಿತ ಎಂದು ಇಬ್ರಾಯಿ ತಿಳಿದಿದ್ದ.

ಆದರೆ, ಅವನು ''ಈ ನೆಲವನ್ನು ನಾನು ಬಿಡಲಾರೆ. ಎಷ್ಟೇ ಕಷ್ಟವಾದರೂ ಈ ನೆಲ, ಮಣ್ಣು ನನಗೆ ಬೇಕು'' ಎಂದು ನಿರ್ಣಯ ಮಾಡಿ ಡಿಕ್ಲರೇಶನ್ ಹಾಕಿದ್ದ.

ಮುಂಜಾಗರೂಕತೆಯಾಗಿ ಇಬ್ರಾಯಿ ಬ್ಯಾರಿ ಒಕ್ಕಲುಗಳ ವಕೀಲರನ್ನು ಕಂಡಿದ್ದ. ನನಗೆ ತಿಳಿದವರು ಹೇಳಿದ ಪ್ರಕಾರ, ತನ್ನ ಹೆಂಡತಿಯ ಬಂಗಾರ ಮಾರಿಯಾದರೂ ತಾನು ವಕೀಲರ ಫೀಸು ಕೊಡುವುದಾಗಿಯೂ, ಹೈಕೋರ್ಟ್‌ಲ್ಲಿ ರಿಟ್ ಹಾಕಿದರೆ ಅವನ ಪರವಾಗಿ ಹೋರಾಡಬೇಕು ಎಂದೂ ಕೇಳಿದ್ದ

ಸಾಕಷ್ಟು ಮುಸಲ್ಮಾನರಿಗೆ ಸಣ್ಣಪುಟ್ಟ ಜಮೀನು ಗೇಣಿ ಕಾನೂನಿನಲ್ಲಿ ನಮ್ಮ ಊರಲ್ಲಿ ದೊರೆತಿತ್ತು. ಹೆಚ್ಚಿನ ಮುಸಲ್ಮಾನರು ಡಿಕ್ಲರೇಶನ್ ಹಾಕಿ ಈ ನೆಲ ತಮಗೆ ಬೇಕು ಎಂದು ಹೋರಾಡಿದರು. ಇಬ್ರಾಯಿ ಬ್ಯಾರಿ ಅವಶ್ಯಕತೆ ಇದ್ದರೆ ತನ್ನ ಹೆಂಡತಿಯ ಚಿನ್ನ ಮಾರಲು ಮುಂದಾದ.

ಡಿಕ್ಲರೇಶನ್ ಹಾಕಿ ಟ್ರಿಬ್ಯುನಲ್‌ನಲ್ಲಿ ಅರ್ಜಿ ವಿಚಾರಣೆಗೆ ಬಂದಾಗ ನನ್ನ ಅಜ್ಜನಿಗೆ ವಯಸ್ಸಾಗಿತ್ತು. ನನ್ನ ಅಪ್ಪ ಅಜ್ಜನ ಪವರ್ ಆಫ್ ಅಟಾರ್ನಿ ಪಡೆದು ಟ್ರಿಬ್ಯುನಲ್‌ಗೆ ಹೋಗುತ್ತಿದ್ದರು. ಊರಿಗೆ ಬಂದ ಕಾನೂನು. ಹೈಕೋರ್ಟಿನಲ್ಲಿ ರಿಟ್ ಹಾಕಿ ಸಮಯ ದುಡ್ಡು ಎರಡೂ ಹಾಳು ಮಾಡಬಾರದು ಎಂದು ನನ್ನ ತಂದೆ ನಂಬಿದ್ದರು. ನನ್ನ ತಂದೆಯವರು ಇಬ್ರಾಯಿಗೆ ಕನಿಷ್ಠ ಸೇರಬೇಕಾದ ಜಾಗವನ್ನು ಬಿಟ್ಟು ಕೊಡಲು ಟ್ರಿಬ್ಯೂನಲ್‌ನಲ್ಲಿ ಒಪ್ಪಿ ಸಹಿಹಾಕಿದರು. ಅದಕ್ಕೆ ಪರಿಹಾರವಾಗಿ ಸಿಕ್ಕಿದ ಸುಮಾರು ಒಂದೂವರೆ ಸಾವಿರದಷ್ಟು ರೂಪಾಯಿಗಳನ್ನು ಕೈಯಿಂದ ಮುಟ್ಟುವುದಕ್ಕೂ ಮನೆಯಲ್ಲಿ ಅಜ್ಜ ಮತ್ತಿತರರು ಇಷ್ಟಪಡಲಿಲ್ಲ. ಹೈಕೋರ್ಟಿನಲ್ಲಿ ರಿಟ್



ನಿಮ್ಗೆ ನಾ ಅವತ್ತೆ ಬಡ್ಕೊಂಡೆ... ಈ ಚುನಾವಣಾ ಸಮೀಕ್ಷೆ, ಹವಾಮಾನ ಸಮೀಕ್ಷೆ ಯಾವತ್ತೂ ನಂಬ್ಲಿಕ್ಕೆ ಹೋಗಬೇಡಿ ಅಂತ... ಕೇಳಿದ್ರ ನನ್ನ ಮಾತನ್ನ...!?

ಹಾಕಿಯಾದರೂ, ಹೆಂಡತಿಯ ಬಂಗಾರ ಮಾರಿಯಾದರೂ ಆ ನೆಲ ಹಾಗೂ ಮಣ್ಣು ತನಗೆ ಬೇಕೇ ಬೇಕು ಎಂದ ಇಬ್ರಾಯಿ ನನ್ನ ನೆನಪಲ್ಲಿ ಉಳಿಯಲು ಇನ್ನೂ ಒಂದು ಕಾರಣವಿದೆ.

ನಮ್ಮ ಊರಿನ ಸುತ್ತಮುತ್ತ ಎಲ್ಲಾ ಜಾತಿ ಧರ್ಮದವರೂ ಗೇಣಿ ಕಾನೂನಿನ ಲಾಭ ಪಡೆದರು. ಒಕ್ಕಲುಗಳಾಗಿದ್ದ ಬ್ರಾಹ್ಮಣರಿಗೂ ಗೇಣಿ ಕಾನೂನಿನಲ್ಲಿ ಭೂಮಿ ಸಿಕ್ಕ ಹಾಗೇ, ಶೂದ್ರರಿಗೂ, ಕ್ರಿಶ್ಚಿಯನ್ ಹಾಗೂ ಮುಸ್ಲಿಮರಿಗೂ ಭೂಮಿ ಸಿಕ್ಕಿದೆ. ನಮ್ಮ ಊರ ಸುತ್ತಮುತ್ತ ಸಾಕಷ್ಟು ಮುಸ್ಲಿಮರು ಕೂಡ ಸಣ್ಣಪುಟ್ಟ ತುಂಡುಭೂಮಿ ಪಡೆದರು. ಆದರೆ ಕ್ರಮೇಣ ಯಾವುದೋ ಮಾಯೆಯ ಹಾಗೆ ಹಿಂದೂ ಮುಸ್ಲಿಮರ ನಡುವೆ ಸಾಮಾಜಿಕ ಕಂದಕ ಅದೇ ಊರಲ್ಲಿ ಹೆಚ್ಚುತ್ತಾ ಹೋಯಿತು.

ನನ್ನ ಬಾಲ್ಯದಲ್ಲಿ ಗೇಣಿ ಕಾನೂನು ಬಂದು ಸಣ್ಣ ಭೂಮಿಯನ್ನು ಸ್ವಂತಕ್ಕೆ ಹೊಂದುವ ಮೊದಲು ಅನೇಕರು ಕೂಲಿ ಕೆಲಸಕ್ಕೆ ಬರುತ್ತಿದ್ದರು. ಆಮೇಲೆ ನಿಧಾನಕ್ಕೆ ಬೀಡಿ ಉದ್ಯಮ ಅವರಿಗೆ ಹೆಚ್ಚು ಹತ್ತಿರವಾಯಿತು. ಕಾಲಕ್ರಮೇಣ ಮುಸ್ಲಿಂ ಹೆಂಗಸರು ಬೀಡಿ ಕಟ್ಟುವುದನ್ನೇ ಆರಿಸಿಕೊಂಡು ತೋಟದ ಕೆಲಸಕ್ಕೆ ಬರುವುದನ್ನೇ ನಿಲ್ಲಿಸಿಬಿಟ್ಟರು. ತೋಟದಲ್ಲಿ ನೀರು ಚೇಪಲು (ಹಾರಿಸಲು) ಹೆಣ್ಣಾಳುಗಳು ಸಿಕ್ಕದೆ ಹೆಚ್ಚಿನವರು ಸ್ಪ್ರಿಂಕಲರ್‌ಗಳಿಗೆ ಮೊರೆಹೋದರು.

ಮುಸ್ಲಿಂ ಗಂಡಸರೂ ಹೆಂಗಸರೂ ಕೂಲಿ ಕೆಲಸಕ್ಕೆ ಬರುತ್ತಿದ್ದಾಗ ಅವರ ಮನೆಯಲ್ಲಾಗುವ ಮುಸ್ಲಿಂ ಮದುವೆಗಳಿಗೆ ನಮಗೂ ಆಹ್ವಾನ ಇರುತ್ತಿತ್ತು. ಮನೆಯ ಹಿಂದೆ ಯಾವುದಾದರೂ ಮರಕ್ಕೆ ಕಡಿದ ಆಡನ್ನು ನೇತುಹಾಕಿ ಮಾಂಸ ತುಂಡರಿಸಿ ಮನೆಯಲ್ಲಿ ಔತಣ ಮಾಡುತ್ತಿದ್ದರು. ಹಲವಾರು ಜನ ಶೂದ್ರರು ಮುಸ್ಲಿಂ ಮದುವೆಗೆ ಹೋಗಿಬರುವ, ಉಡುಗೊರೆ ರೀತಿ ಹಣಕೊಡುವ ಸಂಪ್ರದಾಯವೂ ಇತ್ತು. ಬ್ರಾಹ್ಮಣರಿಗೆ, ಬ್ರಾಹ್ಮಣರಾದ ಭೂಮಾಲೀಕರಿಗೆ ಪ್ರತ್ಯೇಕ ಆಹ್ವಾನ ಇರುತ್ತಿತ್ತು.

ನಾನು ಹಾಗೆ ಅನೇಕ ಮುಸ್ಲಿಂ ಮದುವೆಗಳಿಗೆ ಬಾಲ್ಯದಲ್ಲಿ ನನ್ನ ತಂದೆ ಅಥವಾ ಅಜ್ಜನ ಜೊತೆ ನಮ್ಮ ಹಳ್ಳಿಯಲ್ಲಿ ಹೋಗಿದ್ದೇನೆ. ಹೆಚ್ಚಾಗಿ ಸಂಜೆ ಸ್ವಲ್ಪ ಹೊತ್ತು ಮದುವೆ ಮನೆಗೆ ಹೋಗಿಬರುವ ಪದ್ಧತಿ. ನಮ್ಮ ಮನೆಗಳಿಂದಲೇ ಕೊಂಡುಹೋದ ಮರದ ಬೆಂಚುಗಳನ್ನು ಅವರ ಮನೆ ಅಂಗಳದಲ್ಲಿ ಹೊರಗೆ ಇಟ್ಟು ಆಸನ ಉಪಚಾರ ಮಾಡುತ್ತಿದ್ದರು. ಮನೆಯ ಯಜಮಾನ ಬಂದು ಒಂದು ಸಲಾಂ ಹಾಕಿ ಗೌರವ ಸೂಚಿಸಿ ಮಾತಾಡುತ್ತಿದ್ದ. ಆ ಬೆಂಚಲ್ಲಿ ಒಂದು ತಟ್ಟೆಯಲ್ಲಿ ಸಕ್ಕರೆ, ಇನ್ನೊಂದು ತಟ್ಟೆಯಲ್ಲಿ ಬಾಳೆಹಣ್ಣಿನ ಸನ್ಮಾನ. ಆಮೇಲೆ ನಮಗೆಲ್ಲಾ ಒಂದೊಂದು ಎಳೆನೀರು ನೀಡುತ್ತಿದ್ದರು. ನಾವು ಒಂದು ಅಥವಾ ಎರಡು ಬಾಳೆಹಣ್ಣು ತಿಂದು ಕೆಲವೊಮ್ಮೆ ಸ್ವಲ್ಪ ಸಕ್ಕರೆ ಬಾಯಿಗೆ ಹಾಕಿಕೊಂಡು ಕೊಟ್ಟ ಎಳನೀರು ಕುಡಿದು, ಒಳ್ಳೆಯದಾಗಲಿ ಎಂದು ಹೇಳಿಬರುವ ಕ್ರಮ. ಮದುಮಗಳು ಹೊರಬರುತ್ತಿರಲಿಲ್ಲ. ಮದುಮಗನ ಪರಿಚಯ ಆಗುತ್ತಿತ್ತು.

ಈ ಭೂ ಮಸೂದೆ ಬಂದು ಭೂಮಿ ಸಂಬಂಧದಲ್ಲಿ ಜಗಳ ಬೆಳೆದ ಬಳಿಕ ಈ ರೀತಿ ಮದುವೆಗಳ ಆಹ್ವಾನ ಇತ್ಯಾದಿಗಳು ಇಲ್ಲವಾದವು. ಮುಸ್ಲಿಂ ಮನೆಗಳಿಗೆ. ಹೀಗೆ ಹೋಗುವ ಸಂದರ್ಭ ಕಮ್ಮಿಯಾಯಿತು. ಧಾರ್ಮಿಕ ಕರ್ಷಣ ಹೆಚ್ಚುತ್ತಾ ಹೋಯಿತು. ಹೀಗೆ ನಮ್ಮ ಊರಲ್ಲಿ ಹಿಂದೂ ಮುಸ್ಲಿಂ ಎರಡೂ ಕೋಮುಗಳ ನಡುವೆ ಬಿಗಿ ಹೆಚ್ಚುತ್ತಾ ಹೋದ ಸಂದರ್ಭದಲ್ಲಿ ನಡೆದ ಒಂದು ಸಭೆಗೆ ನಾನು ಹೋಗಿದ್ದೆ.

ಅದೊಂದು ಅನೌಪಚಾರಿಕ ಎನ್ನಬಹುದಾದ ಸಭೆ. ನಮ್ಮ ಊರಿನ ಮುಖ್ಯಸ್ಥರೊಬ್ಬರು ಮಾತನಾಡುತ್ತಿದ್ದರು. ಅವರ ಮನೆಯವರು ಕೆಲವರು ಅಮೆರಿಕಾದಲ್ಲೂ ಇನ್ನೊಂದಿಬ್ಬರು ಕೆನಡಾ, ಇಂಗ್ಲೆಂಡ್ ಮೊದಲಾದ ಕಡೆಯೂ ನೆಲೆ ಊರಿದ್ದರು. ಒಬ್ಬರ ಮನೆಯಲ್ಲಿ ಮಕ್ಕಳು ಅಮೆರಿಕಾದ ಪೌರತ್ವ ಪಡೆದಿದ್ದರು.

ನನಗಿಂತಲೂ ಸುಮಾರು ಹತ್ತು ವರುಷ ಹಿರಿಯರಾದ ಮುಖಂಡರು ಮಾತನಾಡುತ್ತಾ ಈ ಮುಸ್ಲಿಮರು ನಮ್ಮ ನೆಲವನ್ನು ಪ್ರೀತಿಸುವುದಿಲ್ಲ. ನಮ್ಮ ದೇಶದ ಮಣ್ಣು ಅವರಿಗೆ ಬೇಕಾಗಿಲ್ಲ. ಅವರೆಲ್ಲಾ ಪಾಕಿಸ್ತಾನದ ಪರವಾದವರು ಎಂಬ ಅರ್ಥ ಬರುವಂತೆ ಮಾತಾಡಿದರು.

ಅಲ್ಲೇ ಇದ್ದ ನಾನು ತಡೆಯಲಾರದೆ ಹೇಳಿದೆ : ''ನಮ್ಮ ಇಬ್ರಾಯಿ ಬ್ಯಾರಿ ಏಳು ಸೆಂಟ್ಸ್ ಜಾಗ, ಮಣ್ಣು ನೆಲ ಬಿಡಲಾರೆ. ಅದು ನನಗೆ ಬೇಕು. ನಾನು ಸತ್ತರೂ ಇಲ್ಲೆ ಸಾಯುವುದು ಎಂದ. ಆ ನೆಲ ಉಳಿಸಿಕೊಳ್ಳಲು ಕೋರ್ಟು ಕೇಸಿಗಾಗಿ ಹೆಂಡತಿಯ ಬಂಗಾರ ಮಾರಿ ಕೇಸು ಮಾಡಲು ಅವ ತಯಾರಾದ. ಅದು ಈ ನೆಲದ ಪ್ರೀತಿ ಅಲ್ಲ ಎಂದಾದರೆ, ಈ ನೆಲವನ್ನು, ಮಣ್ಣನ್ನು ಪ್ರೀತಿಸುವುದು ಎಂದರೆ ಏನು ? ಅವ ಪಾಕಿಸ್ತಾನಕ್ಕೆ ಹೋಗುವವ ಆದರೆ ಆ ನೆಲ ಬಿಡುತ್ತೇನೆ. ಸ್ವಲ್ಪ ದುಡ್ಡು ಕೊಡಿ ಎಂದು ದನಿಗಳಲ್ಲಿ ಚೌಕಾಸಿ ಮಾಡಿ, ಸಿಕ್ಕಿದ ದುಡ್ಡಲ್ಲಿ ಬಂಗಾರ ತೆಗೆದುಕೊಂಡು ಪಾಕಿಸ್ತಾನಕ್ಕೆ ಹೊರಡಬೇಕಾಗಿತ್ತು. ಪಾಕಿಸ್ತಾನಕ್ಕೆ ಹೋಗಬೇಕೆಂದಿದ್ದರೆ ಬಂಗಾರ ಸುಲಭವಾಗಿ ಸಿಗುತ್ತಿತ್ತು. ಬದಲಾಗಿ, ಅವ ಇರುವ ಬಂಗಾರ ಮಾರಿ ನೆಲ ಉಳಿಸಿಕೊಳ್ಳಲು ಹೊರಟ. ಅವನಿಗೆ ಈ ನೆಲದ ಪ್ರೀತಿ ಇಲ್ಲ; ದೇಶಬಿಟ್ಟು ಅಮೆರಿಕಾದ ಪೌರತ್ವ ಪಡೆದವರಿಗೆ ದೇಶಭಕ್ತಿ ಇದೆ ಎನ್ನುವುದು ಯಾವ ಲೆಕ್ಕಾಚಾರ'' ಎಂದು ಕೇಳಿದೆ. ಕೆಲವರು ಮೌನವಾದರು. ಮತ್ತೆ ಮಾತು ಬೇರೆ ಕಡೆ ಹೊರಳಿತು. ಈ ಘಟನೆಯ ನಂತರ ಇಬ್ರಾಯಿ ನನ್ನ ನೆನಪಲ್ಲಿ ಗಟ್ಟಿಯಾಗಿ ಉಳಿದ.

**ಎಸ್. ಆರ್. ವಿಜಯಶಂಕರ**
ಸಿ-೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೮ನೇ ಮುಖ್ಯರಸ್ತೆ
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩



# ‘ಶಬರಿ’ಗಾಗಿ ಕಾದ ರಾಮ

ಒಬ್ಬನೇ ಸಾಗಿದ್ದ ಸೂರ್ಯ-
ತಾರೆಗಳಂತೆ ಒಬ್ಬೊಬ್ಬರಾಗಿ ಬಂದು ಕೂಡಿದರು
ನೋಡುತ್ತಿದ್ದಂತೆ ಭೂಮಿಯ ತುಂಬಾ
ಆಕಾಶಗಂಗೆಯಂತೆ ಶಬರಿ ಹರಿದಾಡಿದಳು

ಕಾದಂಬರಿಯನ್ನು ಆಧುನಿಕ ಮಹಾಕಾವ್ಯವೆಂದು ಕರೆಯುವುದುಂಟು. ಬರಗೂರರ – ‘ಶಬರಿ’ ಕಾದಂಬರಿ ಓದಿದ ಮೇಲೆ ಈ ಮಾತು ಸರಿಯೆನಿಸಿತು.

ಶಬರಿ : ಬುಡಕಟ್ಟು ಜನಾಂಗದ ಜೀವನಾಯಣ. ಆಧುನಿಕ ರಾಮಾಯಣ. ಈ ಕಾದಂಬರಿಯಲ್ಲಿ ಬುಡಕಟ್ಟು ಜನಾಂಗದ ಜೊತೆ ಇಡೀ ಪ್ರಕೃತಿ ಸಮಾವೇಶಗೊಂಡಿದೆ. ಇಲ್ಲಿ ಸೂರ್ಯನಿದ್ದಾನೆ. ಚಂದ್ರನಿದ್ದಾನೆ. ಕಾಡಿದೆ. ಉರ್ವಿ ರೂಪದಲ್ಲಿ ಶಬರಿ ಕಾಣಿಸಿಕೊಳ್ಳುತ್ತಾಳೆ. ಕಾದಂಬರಿಯ ಪ್ರತಿಪಾತ್ರ, ಸನ್ನಿವೇಶಗಳು ರೂಪಕ, ಪ್ರತೀಕಗಳಾಗಿ ಮಾತನಾಡುತ್ತವೆ. ಬುಡಕಟ್ಟು ಬದುಕಿನ ವಿವರಗಳ ಮೂಲಕ ಚಲನಶೀಲ ಸಂಸ್ಕೃತಿಯ ಅಂತಃಶಕ್ತಿಯನ್ನು ಬಿಚ್ಚಿಡುವ, ರಾಜಕೀಯ ಅಂತರಂಗವನ್ನು ಶೋಧಿಸುವ ಪ್ರಯತ್ನ ಈ ಕಾದಂಬರಿಯಲ್ಲಿ ನಡೆದಿದೆ.

ಅಜ್ಞಾನ ಆವರಿಸಿರುವ ಕಗ್ಗತ್ತಲೆ ಖಂಡದಂತಿರುವ ಹಟ್ಟಿಯಲ್ಲಿ ಮೂಢನಂಬಿಕೆಗಳು, ಅವಿಚಾರಗಳು, ಪೂಜಾರಿ, ಜೋಯಿಸರ ಧಾರ್ಮಿಕ ಕಟ್ಟುಪಾಡುಗಳು, ಜಮೀನ್ದಾರರ ಶೋಷಣೆಯ ಪಟ್ಟುಗಳು ಹಟ್ಟಿಯ ಜನಜೀವನವನ್ನು ಬಾಳಲು ಬಾರದ ದುರ್ಗಮ ನಿವಾಸವನ್ನಾಗಿಸಿವೆ. ಜನರು ಏರಿದ್ದೆಲ್ಲಾ ಉರುಳು, ಹಿಡಿದುದ್ದೆಲ್ಲಾ ನೆರಳಾಗಿದೆ. ಇಂಥ ಸಮಯದಲ್ಲಿ ಹೊಸ ವಿಚಾರಗಳ ಹರಿಕಾರನಾದ ಸೂರ್ಯ, ಚಂದ್ರರ ಆಗಮನದಿಂದ ಹಟ್ಟಿಯಲ್ಲಿ ಹೊಸ ವಾತಾವರಣ ಸೃಷ್ಟಿಯಾಗುತ್ತದೆ. ರಾತ್ರಿ ಶಾಲೆಗಳು ಪ್ರಾರಂಭವಾಗಿ ಅಕ್ಷರ ಸೂರ್ಯನ ಪ್ರವೇಶ. ಹಟ್ಟಿಯ ಜನಜೀವನ ಕತ್ತಲೆಯಿಂದ ಬೆಳಕಿನೆಡೆಗೆ, ಅಸತ್ಯದಿಂದ ಸತ್ಯದೆಡೆಗೆ, ಮರಣದಿಂದ ಜೀವನದೆಡೆಗೆ ಮುಖಮಾಡಿ ನಿಲ್ಲುವುದು.

ಜನರ ಮುಗ್ಧ ಮೂಢತೆಯನ್ನು ಬಳಸಿಕೊಂಡು ಮದುವೆಯಾದ ಹೆಣ್ಣು ಮೊದಲ ರಾತ್ರಿಯನ್ನು ದೇವರೊಂದಿಗೆ ಕಳೆಯಬೇಕೆಂಬ ಗೊಡ್ಡು ಆಚರಣೆಯ ವಿರುದ್ಧ ಮೊದಲು ದಂಗೆ ಪ್ರಾರಂಭವಾಗುತ್ತದೆ. ಚಂದ್ರ ಬಲಿಯಾಗುತ್ತಾನೆ. ಸೂರ್ಯ ಬಂದ ನಂತರ ಈ ಅನಿಷ್ಟ ಪದ್ಧತಿಯ ಹಿಂದೆ ಪೂಜಾರಿ, ಜಮೀನ್ದಾರ, ಜೋಯಿಸರ ಕೈವಾಡವಿರುವುದನ್ನು ಗಮನಿಸಿ, ಹೆಣ್ಣು ಮಕ್ಕಳನ್ನು ಅತ್ಯಾಚಾರದ ಕೂಪಕ್ಕೆ ನೂಕಿದ ತಂತ್ರವನ್ನು ಎಳೆಎಳೆಯಾಗಿ ಬಿಚ್ಚಿತೋರಿಸಿ ಗೌರಿ, ನವಾಬರ ಕೂಡಿಕೆ ಮದುವೆಯನ್ನು ಮಾಡಿ ಈ ಗೊಡ್ಡು ಅನಾಗರಿಕ ಆಚರಣೆಯನ್ನು ಮುರಿಯುತ್ತಾನೆ. ಜನರಲ್ಲಿ ಹೊಸ ಹುರುಪು, ಹುಮ್ಮಸ್ಸು ಮೂಡುತ್ತದೆ. ಜನರ ಮನೋಭೂಮಿಕೆ ಹದಗೊಂಡಂತೆ ಹೊಸ ವಿಚಾರದ ಬೀಜಗಳನ್ನು ಬಿತ್ತುತ್ತಾನೆ. ಶೋಷಣೆಯ ಒಡಲೊಳಗಿಂದ ಹೋರಾಟದ ಕಿಚ್ಚು ಹೊರಹೊಮ್ಮುತ್ತದೆ. ಜನ ಸಂಘಟಿತರಾಗಿ ಉಳುವವನೇ ಭೂ ಒಡೆಯನೆಂಬ ವಿಚಾರಕ್ಕನುಗುಣವಾಗಿ ಭೂಮಿಯ ಪಾಲು ಕೇಳಲು ಭೂ ಹೋರಾಟಕ್ಕೆ ಅಣಿಯಾಗುತ್ತಾರೆ. ಹಟ್ಟಿಯಲ್ಲಿ ವಿದೇಶಿ ಕಂಪನಿ ಯಜಮಾನರು ಜಾಗ ಕೊಂಡು ಫ್ಯಾಕ್ಟರಿ ಪ್ರಾರಂಭಿಸಲು, ಜಮೀನ್ದಾರ, ಶಾಸಕ, ಪೊಲೀಸರ ಸಹಾಯದಿಂದ ಕಾಡು ಕಡಿಯಲು ಪ್ರಾರಂಭಿಸುತ್ತಾರೆ. ಜನರು ಸಂಘಟಿತರಾಗಿ ಮರಗಳನ್ನು ಅಪ್ಪಿಕೊಂಡು ‘ಅಪ್ಪಿಕೋ’ ಚಳುವಳಿ ಪ್ರಾರಂಭಿಸುತ್ತಾರೆ. ‘‘ಈ ಭೂಮಿ ನಮ್ಮದು. ಈ ಕಾಡು ನಮ್ಮದು’’ ಎಂದು ಕೂಗುತ್ತ ಹೋರಾಟಕ್ಕೆ ಸಿದ್ಧರಾಗುತ್ತಾರೆ. ಅಷ್ಟರಲ್ಲಿ ಸೂರ್ಯನು ಸುಳ್ಳು ಕೊಲೆ ಕೇಸಿನಲ್ಲಿ ಬಂಧಿತನಾಗಿ ಪೊಲೀಸರ ದೌರ್ಜನ್ಯಕ್ಕೆ ಬಲಿಯಾಗಿ ಸಾವನ್ನಪ್ಪುತ್ತಾನೆ.

ಸೂರ್ಯ ಸತ್ತರೂ ಆತನು ಹೊತ್ತಿಸಿದ ಹೋರಾಟದ ಜ್ವಾಲೆ ಸಾಯುವುದಿಲ್ಲ. ಮತ್ತಷ್ಟು ಜೀವಂತ ಪ್ರಜ್ವಲಿಸುತ್ತದೆ.

ಪ್ರತಿಜೀವಿ ಸೂರ್ಯನೊಂದು ತುಣುಕು
ಕೂಡಿದರೆ ಸೂರ್ಯನಾಗುವನು ಅಖಂಡ
ಸೂರ್ಯನಿಗೆ ಸಾವಿಲ್ಲ, ಬೆಳಕಿಗೂ ಸಾವಿಲ್ಲ
ಸೂರ್ಯಸಂತಾನಕ್ಕೆಂದೂ ಕೊನೆಯಿಲ್ಲ

ಸೂರ್ಯನ ಮುಂದಿನ ಭೂಮುಖದಲ್ಲಿ ಬೆಳಕಿದ್ದರೆ, ಬೆನ್ನಿಗೆ ಕತ್ತಲಿದೆ. ಭೂಮಿ ಚಲಿಸುತಿದೆ.

ಭಾಷೆ ಮತ್ತು ಶೈಲಿಯ ಬಗ್ಗೆ ಹೇಳಬೇಕೆಂದರೆ ಬರಗೂರರರದು ನಿರರ್ಗಳ ಶೈಲಿ. ಅಡೆತಡೆಯಿಲ್ಲದೆ ಹರಿಯುವ ನದಿಯ ಶೈಲಿ. ಹರಿದು ಬರುವ ಕಿರುತೊರೆ ಕೆರೆಗಳನ್ನು ಆಲಂಗಿಸಿಕೊಂಡ ನದಿ ದಡಗಳಿಗೆ ತನ್ನ ಅಂತರಂಗದ ಕತೆ ಹೇಳಿಕೊಂಡು ಸಾಗುವಂತೆ ಕತೆ ಸಾಗುತ್ತದೆ. ಭಾವನೆಗಳಿಗೆ ಭಾಷೆ ವಾಹಕವಾಗಿ, ವಿಚಾರಕ್ಕೆ ಪೋಷಕವಾಗಿ ಕಾದಂಬರಿಯನ್ನು ಅರ್ಥಪೂರ್ಣವಾಗಿಸುತ್ತದೆ. ಬರಗೂರರ ಹಿಂದಿನ ಕತೆ, ಕಾದಂಬರಿಗಳಿಗಿಂತ ‘ಶಬರಿ’ ತುಂಬಾ ಭಿನ್ನವಾಗಿದೆ. ತಂತ್ರದಲ್ಲಿ ಹೊಸತನವಿದೆ. ಗ್ರಾಮೀಣ ಭಾಷೆಯ ಸೊಗಡು, ಕಾವ್ಯಾತ್ಮಕ ವಾಕ್ಯ ಸರಣಿ ಓದುಗರನ್ನು ತಮ್ಮತ್ತ ಸೆಳೆಯುತ್ತವೆ. ಪಾತ್ರಗಳ ಆಂತರಿಕ ತುಮುಲಗಳನ್ನು ಅಭಿವ್ಯಕ್ತಿಗೊಳಿಸಲು ಬಳಸಿದ ಮುಕ್ತಕಗಳು ಇಡೀ ಕಾದಂಬರಿಯನ್ನು ಕಾವ್ಯವನ್ನಾಗಿಸಿವೆ.

ಜಂಬಣ್ಣ ಅಮರಚಿಂತ

ಮುಖ ಬದಲಿಯಾಗುತ್ತದೆ. ಬೆನ್ನು ಮುಖವಾಗುತ್ತದೆ. ಕತ್ತಲೆ ಬೆಳಕಾಗುತ್ತದೆ. ಭೂಗೋಲದ ಯಾವ ಅವಯವ ಕತ್ತಲೆಯಲ್ಲಿ ಉಳಿಯದೆ ಬೆಳಕಿನಿಂದ ತುಂಬಿರಲಿ ಎಂಬ ಆಶಯ ಕಾದಂಬರಿ ತುಂಬಾ ತುಂಬಿದೆ. ಅದಕ್ಕನು ಗುಣವಾಗಿ ಕಾದಂಬರಿಯಲ್ಲಿ ಪಾತ್ರಗಳು ಸನ್ನಿವೇಶಗಳು ಸಹಜವಾಗಿ ಮೂಡಿಬಂದಿವೆ. ಯಾವುದೇ ಕೃತ್ರಿಮತೆಗೆ ಎಡೆಯಿಲ್ಲವಾಗಿದೆ.

ಚಂದ್ರ, ಸೂರ್ಯರು ಚಿಂತನೆ ಮತ್ತು ಹೋರಾಟದ ಪ್ರತೀಕಗಳಾಗಿ ಬರುತ್ತಾರೆ. ಹುಚ್ಚೀರ ನಾಲಿಗೆ ಕಳೆದುಕೊಂಡ ದಲಿತರ ಪ್ರತಿನಿಧಿಯಂತಿದ್ದರೂ ಅಕ್ಷರ ನಾಲಿಗೆ ಪಡೆದುಕೊಂಡ ಮೇಲೆ ಅವನಲ್ಲಾದ ಆಂತರಿಕ ಬದಲಾವಣೆ ಇಡೀ ಹಟ್ಟಿಯ ಬದಲಾವಣೆಯನ್ನು ಸೂಚಿಸುತ್ತದೆ. ಪೂಜಾರಿ, ಜೋಯಿಸ, ನರಸಿಂಹ ರಾಯಪ್ಪ ಶೋಷಣೆಯನ್ನು ಮುಂದುವರೆಸಿಕೊಂಡು ಹೋಗುವ ಪಾತ್ರಗಳು; ಕಾಡಿನ ಕೂಸಾದ ಶಬರಿ ಶಿವಶರಣೆ ಅಕ್ಕನನ್ನು ಪ್ರತಿನಿಧಿಸುತ್ತಾಳೆ. ಅಕ್ಕಮಹಾದೇವಿ ಸಾವಿಲ್ಲದ, ಕೇಡಿಲ್ಲದ ಸತ್ಯ, ಶಿವ, ಸುಂದರಾಂಗನಾದ ಶಿವನಿಗಾಗಿ ಹಂಬಲಿಸಿದರೆ ಶಬರಿ ಎಂದೂ ಮುಳುಗದ, ತಾನು ಪ್ರೀತಿಸಿದ ಸೂರ್ಯನಿಗಾಗಿ ಪರಿತಪಿಸುತ್ತಾ ಕಾಡು, ಮೇಡು ಅಲೆಯುತ್ತಾಳೆ.

ದಕ್ಷಬ್ರಹ್ಮನನ್ನು ಸಂಹರಿಸಲು ಪಾರ್ವತಿ ಬಸಿರಲ್ಲಿ ವೀರಭದ್ರನನ್ನು ಹೊತ್ತಂತೆ ಶಬರಿ ತನ್ನ ಬಸಿರಲ್ಲಿ ಸೂರ್ಯ ಸಂತಾನ ಹೊತ್ತು ಅವನ ಹುಟ್ಟಿಗಾಗಿ ಹಂಬಲಿಸುತ್ತಾಳೆ, ಕಾಯುತ್ತಾಳೆ. ಇದಿಷ್ಟು ಕಾದಂಬರಿಯ ವಸ್ತು.

ಭಾಷೆ ಮತ್ತು ಶೈಲಿಯ ಬಗ್ಗೆ ಹೇಳಬೇಕೆಂದರೆ ಬರಗೂರರದು ನಿರರ್ಗಳ ಶೈಲಿ. ಅಡೆತಡೆಯಿಲ್ಲದೆ ಹರಿಯುವ ನದಿಯ ಶೈಲಿ. ಹರಿದು ಬರುವ ಕಿರುತೊರೆ ಕೆರೆಗಳನ್ನು ಆಲಂಗಿಸಿಕೊಂಡ ನದಿ ದಡಗಳಿಗೆ ತನ್ನ ಅಂತರಂಗದ ಕತೆ ಹೇಳಿಕೊಂಡು ಸಾಗುವಂತೆ ಕತೆ ಸಾಗುತ್ತದೆ. ಭಾವನೆಗಳಿಗೆ ಭಾಷೆ ವಾಹಕವಾಗಿ, ವಿಚಾರಕ್ಕೆ ಪೋಷಕವಾಗಿ ಕಾದಂಬರಿಯನ್ನು ಅರ್ಥಪೂರ್ಣವಾಗಿಸುತ್ತದೆ. ಬರಗೂರರ ಹಿಂದಿನ ಕತೆ, ಕಾದಂಬರಿಗಳಿಗಿಂತ 'ಶಬರಿ' ತುಂಬಾ ಭಿನ್ನವಾಗಿದೆ. ತಂತ್ರದಲ್ಲಿ ಹೊಸತನವಿದೆ. ಗ್ರಾಮೀಣ ಭಾಷೆಯ ಸೊಗಡು, ಕಾವ್ಯಾತ್ಮಕ ವಾಕ್ಯ ಸರಣಿ ಓದುಗರನ್ನು ತಮ್ಮತ್ತ ಸೆಳೆಯುತ್ತವೆ. ಪಾತ್ರಗಳ ಆಂತರಿಕ ತುಮುಲಗಳನ್ನು ಅಭಿವ್ಯಕ್ತಿಗೊಳಿಸಲು ಬಳಸಿದ ಮುಕ್ತಕಗಳು ಇಡೀ ಕಾದಂಬರಿಯನ್ನು ಕಾವ್ಯವನ್ನಾಗಿಸಿವೆ. ಯಾವ ಅವಸರ ತೋರದೆ ತುಂಬಾ ನಿಧಾನವಾಗಿ ಯೋಚಿಸಿ, ಆಳವಾಗಿ ಚಿಂತಿಸಿ ಬರಗೂರರು ಕಾದಂಬರಿ ಬರೆದು ಮುಗಿಸಿದ್ದಾರೆ. ಕಾಯುವಿಕೆ ಈ ಕಾದಂಬರಿಯ ಮೂಲ ಸೂತ್ರ. ಅದಕ್ಕಾಗಿ ಕಾದಿದ್ದಾಳೆ ಶಬರಿ. ಶಬರಿಗಾಗಿ ಬರಗೂರು ರಾಮಚಂದ್ರಪ್ಪನವರು ಕಾದಿದ್ದಾರೆ. ಕಾಯುವುದೆಂದರೆ ಸುಮ್ಮನೆ ಕೂಡೋದಲ್ಲ ಕುದಿಯುವುದು, ಕುದ್ದು ಅನ್ನವಾಗುವುದು.

ಕಾಯಲಾರದ ಜನರು ಕಾಣಲಾರರು ಏನೂ
ಕಾಯಬೇಕು ನವಮಾಸ ಮುಷ್ಟಿ ಬಿಗಿಹಿಡಿದು
ಹುಟ್ಟುವ ಪುಟ್ಟ ಮಗುವಿಗಾಗಿ
ಸಾವನ್ನು ಸವಿಯುತ್ತ ಮೃತ್ಯುಹಣ್ಣಿನಲ್ಲಿರುವ
ಜೀವರೂಪಿ ಬೀಜಕ್ಕಾಗಿ, ಕಾಯಬೇಕು
ಕಾದು ಪರಿತಪಿಸಬೇಕು
ಬೇಲಿಗಳ ಮುರಿದು ಗಡಿಗಳ ತೊರೆದು
ಮುಳ್ಳುಬೇಲಿ ತುಂಬಾ ಕುಸುಮಿಸಲು ಹೂ ಮನ
ಸೇರಿ ಒಂದು ಪಂಕ್ತಿಯಲಿ
ವಾಗ್-ವಾಕ್ಯಸರಣಿಯಲಿ
ವಿಶ್ವದ ಎಲ್ಲಾ ಶಬ್ದ ಸಮುದಾಯ
ವಿರಾಜಿಸಬೇಕು ಸಾಲುಸಾಲಾಗಿ
ವಿಶ್ವದೆಲ್ಲಾ ಕವಿಗಳ ಹೃದಯಾಂತರಾಳದಿಂದ
ಉದಯಿಸುವ ಆ ಒಂದು ಗೀತೆಗಾಗಿ
ವಿಶ್ವಮಾನವ ಗೀತೆಗಾಗಿ –
ಕಾಯಬೇಕು ಕಾದು ಪರಿತಪಿಸಬೇಕು
ಕಾಯಲಾರದ ಜನರು ಕಾಣಲಾರರು ಏನೂ

ಜಂಬಣ್ಣ ಅಮರಚಿಂತ
೭೯೬, ವಿದ್ಯಾನಗರ, ರಾಯಚೂರು - ೫೮೪ ೧೦೩

## ನಾನು

ಮರಳುಗಾಡಲಿ
ಪಾಪಾಸುಕಳ್ಳಿ
ಮತ್ತು ನಾನೂ

ಬಿದಿರು ಮೆಳೆಯು
ಕರಗಿ ಕಾಗದವಾಯ್ತು
ನನ್ನ ಕನಸು

ಬಹಳ ಬಳಲಿದ್ದೆ ನಿನ್ನೆ
ಇಂದೂ ಬಾಯಾರಿದೆ,
ನನ್ನ ದಾಹಕೆ
ನೀರಿಲ್ಲ ನಾಳೆ

ನಡೆದೆ ನಟ್ಟ
ನಡು ಇರುಳ ಕತ್ತಲಲಿ,
ಹಾದಿಯಾಯಿತು ಕಣ್ಣು

ನನ್ನ ನಾ
ಹುಡುಕತೊಡಗಿದ್ದೆ,
ಬಹಳ ಜನ ಇದ್ದರು.
ಈನಡುವೆ
ನಾನು ನಾನಲ್ಲ
ನೂರಾರು ಮಂದಿ !

ಗಣೇಶ ಹೊಸ್ಮನೆ
ಜಾನ್ಮನೆ - ೫೮೧೩೧೫, ಶಿರಸಿ (ಉ.ಕ.)

## ಸಾದರ ಸ್ವೀಕಾರ

**ಆಯ್ದ ಆಣಿಮುತ್ತುಗಳು** (ಕಥಾ ಸಂಕಲನ) *ಗೌರೀಸುತ*
**ಪುಟ :** ೨೬೦ **ಬೆಲೆ : ರೂ.** ೧೨೫

**ಮುಸ್ಸಂಜೆ** (ಕಾದಂಬರಿ) *ಶಶಿಧರ ವಿಶ್ವಾಮಿತ್ರ*
**ಪುಟ :** ೨೦೮ **ಬೆಲೆ : ರೂ.** ೧೦೦

**ವಾತ್ಸ್ಯಾಯನ ಕಾಮಸೂತ್ರ** *ಜಿ. ಎಂ. ಕೃಷ್ಣಮೂರ್ತಿ*
**ಪುಟ :** ೩೧೦ **ಬೆಲೆ : ರೂ.** ೧೫೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
ಭಾಗ್ಯಲಕ್ಷ್ಮೀ ಪ್ರಕಾಶನ, ೨೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೮೫

**ಅಂಕುರ** ([illegible])
*ಡಾ|| ಶರಣಮ್ಮ ಶಿ. ಗೊರೇಬಾಳ*
**ಪುಟ :** ೧೪೪ **ಬೆಲೆ : ರೂ.** ೮೦

**ಕನವರಿಕೆ** (ಕವನ ಸಂಕಲನ) *ಡಾ|| ಶರಣಮ್ಮ ಶಿ. ಗೊರೇಬಾಳ*
**ಪುಟ :** ೬೦ **ಬೆಲೆ : ರೂ.** ೪೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಲಿಂಗರಾಜ ಪ್ರಕಾಶನ, ಗಾಂಧಿನಗರ, ಧಾರವಾಡ - ೪

**ಬ್ರಾಂಡಿ** (ಕಥಾ ಸಂಕಲನ) *ಮಂಜುನಾಥ ವಿ. ಎಂ.*
**ಪುಟ :** ೧೨೦ **ಬೆಲೆ : ರೂ.** ೮೦
ಟ್ರೀ ೫ ಪಬ್ಲಿಕೇಷನ್ಸ್, ೬೫, ಜನತಾ ಲೇಔಟ್, ವೆಂಕಟಾಲ, ಯಲಹಂಕ, ಬೆಂಗಳೂರು - ೫೬೦ ೦೬೪

**ಗೋರ್‌ಮಾಟಿ** (ಕಾದಂಬರಿ)
*ಡಾ|| ಶಿರಗಾನಹಳ್ಳಿ ಶಾಂತನಾಯ್ಕ*
**ಪುಟ :** ೧೬೦ **ಬೆಲೆ : ರೂ.** ೮೦
ಜ್ಯೋತಿ ಪ್ರಕಾಶನ, ಎಂ. ೪೫, ಕರ್ನಾಟಕ ಬ್ಯಾಂಕ್ ರಸ್ತೆ, ವಿವೇಕಾನಂದ ಸರ್ಕಲ್ ಹತ್ತಿರ, ಮೈಸೂರು - ೫೭೦ ೦೨೩

**ಕಡಲು ಕಳೆದಿದೆ** (ಕವನ ಸಂಕಲನ)
*ಮಾಧವಿ ಭಂಡಾರಿ, ಕೆರೆಕೋಣ*
**ಪುಟ :** ೬೧ **ಬೆಲೆ : ರೂ.** ೪೦
ಬಂಡಾಯ ಪ್ರಕಾಶನ, ಅರೇ ಅಂಗಡಿ, ಹೊನ್ನಾವರ, ಉತ್ತರ ಕನ್ನಡ - ೫೮೧ ೪೩೦

**ಕ್ರಿಮಿ** (ನಾಟಕ) *ಮಂಜುನಾಥ ವಿ. ಎಂ.*
**ಪುಟ :** ೭೫ **ಬೆಲೆ : ರೂ.** ೭೫
**ಅಕ್ಕ ಪ್ರಕಾಶನ,** ಕುವೆಂಪು ನಗರ, ಕುಣಿಗಲ್ - ೫೭೨ ೧೩೦

**ವಚನ ಸಂಪದ** *ಜಯದೇವಪ್ಪ ಜೈನಕೇರಿ*
**ಪುಟ :** ೧೪೮ **ಬೆಲೆ : ರೂ.** ೧೦೦
**ಶಾಂತಲಾ ಪ್ರಕಾಶನ,** ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧

**ಮೃತ್ಯು ಮುಟ್ಟದ ಮುನ್ನ** (ಕವನ ಸಂಕಲನ)
*ಎನ್. ಎಂ. ಕೊಟ್ರೇಶ್*
**ಪುಟ :** ೮೦ **ಬೆಲೆ : ರೂ.** ೫೦
**ಶ್ರೀಹರ್ಷ ಪ್ರಕಾಶನ,** ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ರಂಗಭೂಮಿ ವಿಶ್ಲೇಷಣೆ** (ಮಾಸಪತ್ರಿಕೆ)
*ಸಂ. ಶಶಿಕಾಂತ ಯಡಹಳ್ಳಿ*
**ಪುಟ :** ೫೪ **ಬಿಡಿ ಪ್ರತಿ : ಬೆಲೆ : ರೂ.** ೧೫
**ರಂಗಭೂಮಿ ವಿಶ್ಲೇಷಣೆ,** ನಂ. ೧೩೧, ಪ್ರಗತಿ ನಿವಾಸ, ದೊಮ್ಮಲೂರು, ಬೆಂಗಳೂರು - ೫೬೦ ೦೭೧

ಕತೆ ನಿಲ್ಲಿಸಿ ಮಾಯಿಲ ಅಳುತ್ತಾ ಕೂತ. ನಾಲ್ಕಾರು ವರ್ಷಗಳ ಹಿಂದೆ ಆತನನ್ನು ಹೆದರಿಸಿದ ಘಟನೆಯಿಂದ ಈಗ ದುಃಖ ಉಕ್ಕಲು ಸಾಧ್ಯವಿಲ್ಲ. ಇದೇಕೋ ಗೋಜಲಾಗಿದೆ ಎಂದುಕೊಂಡೆ. ಬಿಸಿಲು ಬಾಡತೊಡಗಿತ್ತು. ಮರದ ನೆರಳು ಇನ್ನಷ್ಟು ಉದ್ದವಾಗಿತ್ತು. ಈ ಮರ ತನ್ನೊಳಗೆ ಇನ್ನೇನೋ ರಹಸ್ಯ ಬಚ್ಚಿಟ್ಟುಕೊಂಡಿದೆ ಎಂದು ಭಾಸವಾಯಿತು. ಕೇಳಲೋ, ಬೇಡವೋ ಎಂದು ಅನುಮಾನಿಸುತ್ತಾ ಕೇಳಿದೆ : ''ಘಟ್ಟಕ್ಕೆ ಹೋದ ನಿನ್ನ ಮಗಳ ನೆನಪು ಇನ್ನೂ ಮಾಸಿಲ್ಲವೇ ?''

---

**ಅಂ**ಗಳದ ಮೂಲೆಯಲ್ಲಿದ್ದ ಒಚ್ಚುಮಣೆಯ ಮೇಲೆ ಒಂದು ಕಾಲಿಟ್ಟು, ಇನ್ನೊಂದನ್ನು ನೆಲದ ಮೇಲೂರಿ ಬಗ್ಗಿ ಕುಳಿತ ಮಾಯಿಲ ಬಿಳಿ ಕಲ್ಲಿನ ಪುಡಿಯನ್ನು ಹಾಕಿ ಕತ್ತಿ ಮಸೆಯಲು ಶುರುಮಾಡಿದ. ಅದು ಹೊಳೆಯತೊಡಗಿದ ಕೂಡಲೇ ಆತ ಕಾಡಿಗೆ ಹೊರಟಿದ್ದಾನೆಂಬ ಮುನ್ಸೂಚನೆ ಸಿಕ್ಕಿತು. ರಜೆ ಇದ್ದುದರಿಂದ ನನಗೂ ಅವನೊಂದಿಗೆ ಕಾಡು ತಿರುಗುವ ಆಸೆಯಾಯಿತು.

''ನಾನೂ ಬರಲೇನೋ ಕಾಡಿಗೆ ?'' ಮಾಯಿಲನನ್ನು ಕೇಳಿದೆ. ಕರೆದುಕೊಂಡು ಹೋಗಲು ಮನಸ್ಸಿದ್ದರೂ, ''ಅಪ್ಪ ಬೈದ್ರೆ...'' ಅಂತ ರಾಗ ಎಳೆದ.

''ಇಲ್ವೋ. ಅಪ್ಪ ಕಾರ್ಕಳಕ್ಕೆ ಹೋಗಿದ್ದಾರೆ, ಬರೋದು ಸಂಜೆ'' ಎಂದಾಗ ಮಾಯಿಲನ ಮುಖ ಅರಳಿತು, ತಿರುಗಲು ಒಂದು ಜತೆ ಸಿಕ್ಕಿತಲ್ಲ ಎಂಬ ಸಂತೋಷದಲ್ಲಿ.

ಒಳಗೆ, ಅಡುಗೆ ಮನೆಯಲ್ಲಿ ಮೊಸರು ಕಡೆಯುತ್ತಾ ಕೂತಿದ್ದ ಅಮ್ಮನನ್ನು ಪುಸಲಾಯಿಸಿ ಮಾಯಿಲನ ಜತೆಗೆ ಕಾಡಿಗೆ ಹೋಗಲು ಒಪ್ಪಿಗೆ ಪಡೆದೆ; ಮರ ಹತ್ತಬಾರದು, ಹೊಳೆಗೆ ಇಳಿಯಬಾರದು, ಪ್ರಾಣಿಗಳಿಗೆ ತೊಂದರೆ ಕೊಡಬಾರದು – ಇತ್ಯಾದಿ ಕರಾರುಗಳೊಂದಿಗೆ. ಅಮ್ಮನ ಎಲ್ಲ ಸೂಚನೆಗಳಿಗೆ ಹೂಂಗುಟ್ಟುತ್ತಾ ಮಾಯಿಲ ಅವಲಕ್ಕಿ ತಿಂದು, ಚಾ ಕುಡಿದ. ನಾನು ಅಮ್ಮನ ಒತ್ತಾಯಕ್ಕೆ ಹಳೆ ಅಂಗಿ ಸಿಕ್ಕಿಸಿಕೊಂಡು ಗುಂಡಿ ಹಾಕಿಕೊಳ್ಳುತ್ತಾ ಮಾಯಿಲನ ಹಿಂದೆ ಹೊರಟೆ.

ಮಾಯಿಲ, ರಾತ್ರಿಯಲ್ಲೂ ಕಾಡಿನ ಎಲ್ಲ ಕವಲು ದಾರಿಗಳಲ್ಲಿ ಬೆಳಕಿನ ನೆರವಿಲ್ಲದೆ, ಬೆಳದಿಂಗಳೂ ಇಲ್ಲದೆ ಸಾಗಬಲ್ಲ ಮುದುಕ. ಅವನ ಗಿಡ್ಡ, ಕೃಶ ಶರೀರಕ್ಕೆ ವಯಸ್ಸಾಗಿದ್ದೇ ತಿಳಿಯುವುದಿಲ್ಲ. ಏನಿಲ್ಲವೆಂದರೂ ಎಂಬತ್ತು ವರ್ಷ ಇದ್ದೀತು ಆತನಿಗೆ. ಕಾಡಿನಲ್ಲಿ ಜೇನು ತೆಗೆಯುತ್ತಾ, ನೆರಳಲ್ಲಿ ಕೂತು ಬುಟ್ಟಿ ಹೆಣೆಯುತ್ತಾ, ಮೊಲ, ಬರಿಂಕ, ಹಂದಿ, ಮುಳ್ಳುಹಂದಿ, ಜಿಂಕೆ ಶಿಕಾರಿ ಮಾಡುತ್ತಾ, ಅವರಿವರ ತೋಟ ಕಾಯುತ್ತಾ ಕಾಡಿನ ಒಂದು ಭಾಗವೇ ಆಗಿದ್ದ ಆತನನ್ನು ತಮಾಷೆಗೆ 'ಕಾಡು ಮನುಷ್ಯ' ಅಂತ ಅಣಕಿಸುತ್ತಿದ್ದೆವು. ರಾತ್ರಿ ಅಗುಡೆಯ ಮುಂದೆ ಚಳಿ ಕಾಯಿಸುತ್ತಾ ಕೂತು, ಹಲಸಿನ ಬೀಜ ಸುಟ್ಟು ತಿನ್ನುತ್ತಾ, ನಮಗೂ ತಿನ್ನಲು ಕೊಡುತ್ತಾ ಆತ ಹೇಳುತ್ತಿದ್ದ ಹಾಡು, ಕತೆಗಳಿಗೆ ಬಾಯಿಬಿಡುತ್ತಿದ್ದೆವು.

ತೋಟ ದಾಟಿದ ಮೇಲೆ ನಾನು ಗುಡ್ಡದ ಮೇಲಿನ ನೆಲ್ಲಿಯ ಮರಕ್ಕೆ ಕಲ್ಲು ಎಸೆಯುತ್ತಾ ನಿಂತಿದ್ದೆ. ''ಅಯ್ಯಾ, ಬೇಗ ಬನ್ನಿ. ಕಾಡು ಎಂದರೆ ಇಷ್ಟೇ ಅಲ್ಲ'' ಎಂದು ಎಚ್ಚರಿಸಿದ. ''ಗೊತ್ತು ಬಿಡೋ'' ಎಂದೆ. ಮಾಯಿಲ ಏರು ದಾರಿಯಲ್ಲಿ ಏದುತ್ತಾ ನಡೆದಿದ್ದ. ಒಂದು ನೆಲ್ಲಿಕಾಯಿಯನ್ನು ಬಾಯಿಗೆ ಹಾಕಿಕೊಂಡು, ಉಳಿದವನ್ನು ಚಡ್ಡಿ ಜೇಬಿಗೆ ತುರುಕಿ ಅವನ ಹಿಂದೆ ಹೆಜ್ಜೆಯಿಟ್ಟೆ. ''ನೆಲ್ಲಿಕಾಯಿಯನ್ನು ತಿಂದು ನೀರು ಕುಡಿದರೆ ಎಷ್ಟು ಸಿಹಿ ಇರುತ್ತಲ್ಲ ?'' ಎಂದೆ.

''ನಿಮ್ಗೆ ಗೊತ್ತಿಲ್ವಾ ಅಯ್ಯಾ ? ಒಂದು ಹಸು ಹೊಳೆ ನೀರು ಕುಡೀತಿತ್ತಂತೆ. ಕೆಳಗಡೆ ಒಂದು ಹುಲೀನೂ ನೆಲ್ಲಿಕಾಯಿ ತಿಂದು ನೀರು ಕುಡೀತಂತೆ. ಅದಕ್ಕೆ ನೀರು ಎಂದಿಗಿಂತ ಸಿಹಿಯಾಗಿದೆ ಅನ್ನಿಸಿತು. ದನ ಕುಡಿದ ನೀರೇ ಇಷ್ಟು ಸಿಹಿಯಿರುವಾಗ ಇನ್ನು ಅದರ ಮಾಂಸ ಎಷ್ಟು ರುಚಿ ಇದ್ದೀತೆಂದು ಕಲ್ಪಿಸಿಕೊಂಡ ಹುಲಿ ಹಸುಗಳನ್ನು ಬೇಟೆಯಾಡೋಕೆ ಶುರುಮಾಡ್ತಂತೆ'' ಅಂತ ಅದಕ್ಕೂ ಒಂದು ಕತೆ ಹೇಳಿದ.



ಹೆಜ್ಜೆ ಹೆಜ್ಜೆಗೂ ಕಾಡು ದಟ್ಟವಾಗುತ್ತಿತ್ತು. ನಮ್ಮ ನಿಟ್ಟುಸಿರಿಗೆ ನಾವೇ ಭಯಪಡುವಷ್ಟು ಗಾಢ ಮೌನ ಆವರಿಸಿತ್ತು. ಬಿಸಿಲಿಗೆ ಕತ್ತಿಯ ಅಲಗಿನಂತೆ ಹೊಳೆದು ಮರೆಯಾದ ಕೇರೆ ಹಾವನ್ನು ನೋಡುತ್ತಾ ನಿಂತೆ. ಮಾಯಿಲ ನನಗಿಂತ ತುಸು ಮುಂದೆ ಸಾಗಿದ್ದ. ''ನಿಲ್ಲು ಮಾರಾಯಾ, ದಣಿವಾಗಿದೆ'' ಎಂದೆ.

''ಇನ್ನು ಸ್ವಲ್ಪ ದೂರ ಒಡೆಯಾ. ಅಲ್ಲೊಂದು ದೊಡ್ಡ ಮರ ತೋರಿಸ್ತೇನೆ. ಅದರ ಕೊಂಬೆಗಳು ಆಕಾಶ ಮುಟ್ಟಿವೆ'' ಅಂತ ಹುರಿದುಂಬಿಸಿದ. ಮತ್ತೆ ಒಂದೂ ಮಾತನಾಡದೆ ನಡೆದ. ಕಾಲು ಗಂಟೆ ಕಾಲೆಳೆಯುತ್ತಾ ಅವನ ಹಿಂದೆ ಸಾಗಿದೆ. ತನ್ನ ದೀರ್ಘ ಮೌನ ಮುರಿದು ಮಾಯಿಲ, ''ಅಯ್ಯಾ, ಅಲ್ಲಿ ನೋಡಿ'' ಎಂದು ಆಗಸಕ್ಕೆ ಕೈಚಾಚಿದ್ದ ಮಹಾವೃಕ್ಷವನ್ನು ತೋರಿಸಿದ. ತಾನು ಮಾತ್ರ ಬೇರೆಲ್ಲೋ ನೋಡುತ್ತಿದ್ದ. ಅದನ್ನು ಗಮನಿಸಿದ ನಾನು ಅವನ ತೋರುಬೆರಳಿನ ನೇರಕ್ಕೆ ದೃಷ್ಟಿಹರಿಸಿ ಬೆರಗಿನಿಂದ ನೋಡಿದೆ.




ಹತ್ತು ಹದಿನೈದಾಳು ಎತ್ತರಕ್ಕೆ ಗೆಲ್ಲುಗಳೇ ಇಲ್ಲದೆ ಆ ಮರ ಬಾನಿನತ್ತ ಮುಖ ಮಾಡಿತ್ತು. ಕಾಡಿನ ಉಳಿದೆಲ್ಲ ಮರಗಳಿಗೂ ದೊರೆಯಂತಿದ್ದ ಅದರ ಕಾಂಡವನ್ನು ಸುತ್ತುವರೆಯಲು ಮನೆಯ ಬಾವಿಯ ಹಗ್ಗವನ್ನೇ ತರಬೇಕಾದೀತೆಂದು ಅಂದಾಜಿಸಿದೆ. ಆ ಬೃಹತ್ ವೃಕ್ಷದ ದಟ್ಟ ಎಲೆಗಳ ನಡುವೆ ನುಸುಳುತ್ತಿದ್ದ ಬಿಸಿಲನ್ನು ದಿಟ್ಟಿಸುತ್ತಾ ಮಾಯಿಲನಿಗೆ ಪ್ರಶ್ನೆ ಹಾಕಿದೆ :

''ಇಷ್ಟು ದೊಡ್ಡ ಮರವನ್ನು ಕಡಿದರೆ, ಅದನ್ನು ಮಿಲ್ಲಿಗೆ ಸಾಗಿಸಲು ತುಂಬ ಆನೆಗಳು, ಲಾರಿಗಳು ಬೇಕಾಗಬಹುದಲ್ಲ ?''

''ಅಯ್ಯಾ, ಅದನ್ನು ಕಡಿಯುವ ಧೈರ್ಯ ಯಾರಿಗಿದೆ ? ಅದು ದೆವ್ವದ ಮರ !''

ನಾನು ಬೆಚ್ಚಿದೆ. ''ಸುಮ್ನೆ ಹೆದರಿಸಬೇಡ ಮಾರಾಯಾ. ಭಾರಿ ಶಿಕಾರಿಯವನು ನೀನು. ಇದನ್ನೆಲ್ಲ ನಂಬುತ್ತೀಯಾ ?''

ಮಾಯಿಲ ಬಿಕ್ಕುತ್ತ, ನಡುಗುತ್ತ ಹೇಳಿದ : ''ಕಣ್ಣಾರೆ ಕಂಡಿದ್ದೇನೆ ಅಯ್ಯಾ. ದಯಮಾಡಿ ಕೇಳಬೇಡಿ. ಹೇಳಲು ನನಗೆ ಭಯವಾಗುತ್ತದೆ.''

''ಬಿಡೋ. ಎಂತೆಂಥ ರಾತ್ರಿಗಳಲ್ಲಿ ಶಿಕಾರಿಗೆ ಬಂದವನು ನೀನು. ಸುಮ್ಮನೆ ಸುಳ್ಳು ಹೇಳಬೇಡ.''

''ಸುಳ್ಳೇತಕ್ಕೆ ಒಡೆಯಾ ? ಹೆಬ್ಬುಲಿಯೊಂದಿಗೆ ಮುಖಾಮುಖಿಯಾಗಿ ಏನೂ ಅಪಾಯ ತಂದುಕೊಳ್ಳದೆ, ಅದಕ್ಕೂ ತೊಂದರೆ ಮಾಡದೆ ಬಂದವನು ನಾನು. ನನಗೆ ಬೇಸರವಾದಾಗಲೆಲ್ಲ ಇಲ್ಲಿಗೆ ಬಂದು ಈ ಮರದ ನೆರಳಲ್ಲಿ ಮನಸಾರೆ ಅತ್ತುಬಿಡುವುದುಂಟು. ಆದರೆ, ಕತ್ತಲಾದ ಮೇಲೆ ಮಾತ್ರ ಇಲ್ಲಿ ಒಂದು ಗಳಿಗೆ ನಿಲ್ಲಲಾರೆ.''ಎಣ್ಣೆ, ಮಣ್ಣು ಹೀರಿಕೊಂಡು ಕಪ್ಪಾಗಿದ್ದ ಶರ್ಟಿನ ತೋಳಿಗೆ ಕಣ್ಣುಗಳನ್ನು ಉಜ್ಜಿಕೊಂಡು ಕತ್ತಿಯಿಂದ ಬಿಳಲು ಕೊಯ್ಯಲು ಶುರುಮಾಡಿದ.

ನಮ್ಮ ಪಕ್ಕದಲ್ಲಿದ್ದ ಪೊದರಿನಲ್ಲೇನೋ ಸದ್ದಾಯಿತು. ಬೆಚ್ಚಿಬಿದ್ದು, ಆತನ ಪಕ್ಕಕ್ಕೆ ಜಿಗಿದು ''ದೆವ್ವವೇನೋ ?'' ಅಂತ ಪಿಸುಗುಟ್ಟಿದೆ.

''ಈ ಮಟಮಟ ಮಧ್ಯಾಹ್ನ ದೆವ್ವವೆಲ್ಲಿ ಒಡೆಯಾ ? ಗಾಯತ್ರಿ ಜಪ ಮಾಡುವ ನಿಮಗೇನೂ ಮಾಡದು ಅದು. ಆದರೆ, ಆ ದೆವ್ವ ಆ ಪಾಪಿಯನ್ನು ಮಾತ್ರ ಎಂದಿಗೂ ಕ್ಷಮಿಸಲಿಕ್ಕಿಲ್ಲ!'' ಮಾಯಿಲನ ಕಣ್ಣುಗಳು ಕೆಂಪಾಗಿ, ಬೆಂಕಿಯ ಉಂಡೆಗಳಂತಾದವು.

''ಯಾರು ಆ ಪಾಪಿ ? ಏನು ಹೇಳುತ್ತಿರುವೆ ನೀನು ?''

''ಅದನ್ನು ನೆನಪಿಸಬೇಡಿ ಒಡೆಯಾ, ನಿಮ್ಮ ದಮ್ಮಯ್ಯ'' ನಾಲಗೆ ಕಚ್ಚಿಕೊಂಡ ಮಾಯಿಲ ಮತ್ತೆ ಮಾತೇ ಆಡಲಿಲ್ಲ. ಒಂದು ಹೊರೆಯಷ್ಟು ಬಿಳಲು ಕೊಯ್ದು ತಲೆ ಹೊರೆ ಇಟ್ಟುಕೊಂಡು ಬೀಸುಹೆಜ್ಜೆಯಲ್ಲಿ ಮನೆಯತ್ತ ತಿರುಗಿದ. ಅವನನ್ನು ಹಿಂಬಾಲಿಸುತ್ತಾ ಹಿಂತಿರುಗಿ ನೋಡಿದೆ. ಆ ಮರ... ಇಳಿ ಬಿಸಿಲಿಗೆ ಮುಖ ತಿರುಗಿಸಿ ನಿಂತ ದೆವ್ವದಂತೆಯೇ ಕಂಡಿತು. ಅದರ ನೆರಳು ಕೈಚಾಚಿ ನನ್ನನ್ನೇ ಕರೆಯುತ್ತಿರುವಂತೆ ಭಾಸವಾಗಿ ಭಯಭೀತನಾದೆ. ಕೈಕಾಲುಗಳು ನಡುಗಿದವು. ಮಾಯಿಲನಿಗಿಂತ ಕೇವಲ ಒಂದು ಅಡಿ ದೂರದಲ್ಲಿ ನಡೆಯುತ್ತಾ, ಹೆದರಿಕೆಯಿಂದ ಬೆವರುತ್ತಾ ಹೇಗೋ ಮನೆ ತಲುಪಿದೆ.

ರಾತ್ರಿ ನನಗೆ ವಿಪರೀತ ಜ್ವರ ಏರಿ 'ದೆವ್ವ... ದೆವ್ವ...' ಅಂತ ಬಡಬಡಿಸಿದೆನಂತೆ. ಅಮ್ಮ ಏನೇನೋ ಉಪಚಾರ ಮಾಡಿ ಜ್ವರವನ್ನು ತಹಬಂದಿಗೆ ತಂದರಂತೆ.

ಬೆಳಗ್ಗೆ ಚಾ ಕುಡಿಯಲು ಬಂದ ಮಾಯಿಲನನ್ನು ಅಮ್ಮ ತರಾಟೆಗೆ ತೆಗೆದುಕೊಂಡರು. ''ಆ ಮರದ ಹತ್ತಿರ ಇವನನ್ನು ಕರೆದುಕೊಂಡು ಹೋಗಿದ್ದೆಯೇನೋ ? ಇನ್ನೂ ಅದನ್ನು ಮರೆಯಲಾರೆ ನೀನು. ಏನು ವಿಚಿತ್ರ ಮನುಷ್ಯನೋ !'' ಅಮ್ಮನ ಗದರಿಕೆಗೆ ಉತ್ತರಿಸುವ ಬದಲು ಮಾಯಿಲ ತಲೆತಗ್ಗಿಸಿ ಬಿಕ್ಕುತ್ತಾ ನಿಂತ.

ಊರಿನವರೆಲ್ಲ ಹೇಳುತ್ತಿದ್ದರು. ಮಾಯಿಲನ ಒಬ್ಬಳೇ ಮಗಳು ಬೈರನೊಂದಿಗೆ ಘಟ್ಟಕ್ಕೆ ಓಡಿಹೋದ ಮೇಲೆ ಆತ ವಿಚಿತ್ರವಾಗಿ ಆಡುತ್ತಾನೆಂದು. ಕೆಲವೊಮ್ಮೆ ಇದು ನಿಜವೇನೋ ಅನ್ನಿಸುತ್ತಿತ್ತು. ಬೆಂಕಿ ಮುಂದೆ ಕೂತು ಹೇಳುತ್ತಿದ್ದ ಕತೆಯನ್ನು ಅರ್ಧಕ್ಕೆ ನಿಲ್ಲಿಸಿ ಕಣ್ಣೀರುಗರೆಯುತ್ತಿದ್ದ. ಕಣ್ಣೀರು ಅಗುಡೆಯ ಬೆಂಕಿಯಲ್ಲಿ ಹೊಳೆಯುತ್ತಾ ಉಲ್ಕೆಗಳಂತೆ ಕೆನ್ನೆ ಮೇಲೆ ಜರ್ರನೆ ಜಾರುತ್ತಿತ್ತು. ಅಗುಡೆಯ ಬೆಂಕಿ ಅವನ ಕಣ್ಣುಗಳಲ್ಲಿ ಧಗಧಗಿಸುತ್ತಿತ್ತು. ಇಡೀ ಮುಖವೇ ಕೆಂಡದಂತೆ ಕೆಂಪನೆ ಹೊಳೆಯುತ್ತಿತ್ತು.

ಆ ಮರದ ಬಗ್ಗೆ ಊರ ಜನಕ್ಕೆ ಮೊದಲಿನಿಂದಲೂ ಅವ್ಯಕ್ತ ಭೀತಿ. ಅಲ್ಲಿದೆಯ ಯಾರೂ ಸೊಪ್ಪು ಸದೆಗೂ ಅತ್ತ ಕಡೆ ಸುಳಿಯುವುದಿಲ್ಲ. ಇಷ್ಟಿರುವಾಗ ಮಾಯಿಲನಿಗೇಕೆ ಆ ಮರದ ಬಗ್ಗೆ ಅಂಥ ಸೆಳೆತ ? ಈ ಎಲ್ಲ ವೃತ್ತಾಂತಗಳಿಗೆ ಏನೋ ಆಂತರಿಕ ಸಂಬಂಧ ಇರಬೇಕೆಂದು ತರ್ಕಿಸಿದೆ.

* * *

ಪರೀಕ್ಷೆ ಮುಗಿದು ರಜೆ ಬಂದಿತ್ತು. ಮಧ್ಯಾಹ್ನ ಮಾಯಿಲ ನಮ್ಮ ಮನೆಯ ಜಗುಲಿಯಲ್ಲಿ ಕುಳಿತು ಎಲೆ ಅಡಿಕೆ ತಿನ್ನುತ್ತಿದ್ದ. ಪಾಯಸದ ಊಟ ಮಾಡಿದ್ದರಿಂದ ಕುಳಿತಲ್ಲಿಯೇ ತೂಕಡಿಸುತ್ತಿದ್ದ.

''ಬೆಲ್ಲ ತೂಗಿದ್ದು ಸಾಕು, ಬಾ ಹೋಗೋಣ'' ನನ್ನ ಪಿಸುದನಿಗೆ ಫಕ್ಕನೆ ಕಣ್ಣುಬಿಟ್ಟು, ''ಎಲ್ಲಿಗೆ ?'' ಎಂಬಂತೆ ನನ್ನನ್ನು ನೋಡಿದ. ''ಆ ಮರದ ಹತ್ತಿರ'' ಎಂದಾಗ ಅವನ ನಿದ್ದೆ ಹಾರಿಹೋಗಿತ್ತು. ಬೇಡವೆಂದು ತಲೆಯಾಡಿಸಿದ. ಮಲಗಿದ್ದ ಅಪ್ಪನ ಕಡೆ ಕೈ ತೋರಿಸಿದ. ಗೊರಕೆ ಶಬ್ದ ಕೇಳಿಸುತ್ತಿತ್ತು. ''ಇರಲಿ, ಬಾ'' ಎಂದೆ.

''ನೀವು ಹೆದರಿಕೊಂಡು ಮತ್ತೆ ಜ್ವರ ಬರಿಸಿಕೊಂಡರೆ ಅಮ್ಮ ನನಗೆ ಬೈತಾರೆ'' ಅಂದ. ನಾನು ಹಠ ಮಾಡಿದ್ದರಿಂದ ನಿರ್ವಾಹವಿಲ್ಲದೆ ತಲೆಗೆ ಮುಂಡಾಸು ಬಿಗಿದು, ಕೈಯಲ್ಲಿ ಕತ್ತಿ ಹಿಡಿದು ನನ್ನ ಜತೆಗೆ ಬಂದ. ಗುಡ್ಡದಲ್ಲಿ ನಾನು ಕೇಳದಿದ್ದರೂ ಮರ ಹತ್ತಿ ನೆಲ್ಲಿಕಾಯಿ ಕೊಯ್ದು ಕೊಟ್ಟ.

ಆ ಮರದ ಬುಡದಲ್ಲಿ ತರಗೆಲೆಗಳ ರಾಶಿ ಬಿದ್ದಿತ್ತು. ಸೂರ್ಯ ಪಶ್ಚಿಮಕ್ಕೆ ವಾಲಿದ್ದರಿಂದ ಮರದ ನೆರಳು ಹಿಗ್ಗಿತ್ತು. ಮಾಯಿಲ ಹಿಂದಿನ ಬಾರಿ ಬಂದಾಗ ಕಡಿದಿದ್ದ ಬೀಳಲು ಮತ್ತೆ ಚಿಗುರೊಡೆದಿತ್ತು.

''ಅಯ್ಯಾ, ಈ ಮರ ಸಾಯುವ ತನಕ ಬೆಳೆಯುತ್ತಿರುತ್ತದೆ. ಈ ಮುದಿ ಜೀವ ಇಂದೋ ನಾಳೆಯೋ ಕಳಚಿಕೊಳ್ಳುತ್ತದೆ. ನಿಮಗೆಲ್ಲ ಕತೆ ಹೇಳುವ ನನ್ನ ಬದುಕಿನ ಕತೆ ಕೇಳಿದರೆ ನೀವು ಹೆದರಿಬಿಟ್ಟೀರಿ.'' ಮಾಯಿಲ ಹೇಳುತ್ತಿರುವಾಗ ಅವನ ಕಣ್ಣುಗಳು ಭಯದಿಂದ ಅರಳಿದವು. ಒಡನೆಯೇ ಅವುಗಳಲ್ಲಿ ನೀರು ತುಂಬಿಕೊಂಡಿತು. ನಿಧಾನವಾಗಿ ತುಟಿ ತೆರೆದ.

''ಒಂದು ರಾತ್ರಿ ಟಾರ್ಚು, ಕೋವಿ ಹಿಡಿದು ಶಿಕಾರಿಗೆ ಬಂದಿದ್ದೆ. ಎಂದೂ ತಪ್ಪದ ಹಾದಿ ಅಂದು ತಪ್ಪಿತ್ತು. ಒಂದು ಹಂದಿಯ ಬೆನ್ನುಹತ್ತಿದ್ದೆ. ಅದು ಯಾವ ಪೊದೆಯೊಳಗೆ ನುಸುಳಿತೋ ! ಅದು ಮರೆಯಿಂದ ಹೊರಬರುವುದನ್ನೇ ಕಾಯುತ್ತಾ ಕುಳಿತೆ. ನಡುರಾತ್ರಿ ಎಲ್ಲಿಂದಲೋ ಹುಲಿ ಘರ್ಜನೆ ಕೇಳಿಸಿತು. ಅದಕ್ಕೆ ಉತ್ತರವೆಂಬಂತೆ ಯಾವುದೋ ಪ್ರಾಣಿ ಭಯಪೂರ್ಣವಾಗಿ ಅರಚಿತು. ಮತ್ತೆ ಮೌನ...

''ಹಾಗೆ ಎಷ್ಟು ಹೊತ್ತು ಕೂತೆನೋ. ತುಸು ಜೋಂಪು ಹತ್ತಿತು. ಇರುಳಿನ ನೀರವವನ್ನು ಭೇದಿಸಿ ತೆಂಬರೆಯ ಸದ್ದು! ಗಗ್ಗರದ ಘಲ್ ಘಲ್ ನಾದ. ಜತೆಗೆ ಕರುಣೆಯ ಕತೆಯನ್ನು ಬಣ್ಣಿಸುವ ಪಾಡ್ದನ. ಕೋಲ ಕಟ್ಟುವ ನನ್ನ ವೃತ್ತಿಯಲ್ಲಿ ಅದು ಸಾಮಾನ್ಯ. ಆದರೆ, ಈ

ಕಗ್ಗಾಡಿನಲ್ಲಿ. ಮಸಿಯ ರಾಶಿಯಂತಿರುವ ಕತ್ತಲ ಗರ್ಭವನ್ನು ಸೀಳಿ ಆ ಸ್ವರ ಎಲ್ಲಿಂದ ಬಂತು? ಆದರೂ ಹಾಡುತ್ತಿರುವ ಆ ಧ್ವನಿ ಪರಿಚಿತ. ಆದರೆ, ಯಾರದ್ದು? ಥಕ್ಕನೆ ಹೊಳೆಯಲಿಲ್ಲ. ಪಾಡ್ದನದ ಇಂಪು ನನ್ನಲ್ಲಿ ಭಯ ಹುಟ್ಟಿಸುತ್ತಿದೆ. ತೆಂಬರೆಯ, ಗಗ್ಗರದ ನಾದಕ್ಕೆ ನನ್ನೆದೆ ಬಡಿತ ಹೆಚ್ಚುತ್ತಿದೆ. ಏಕೆ? ಮರವನ್ನು ಆತು ಕೂತ ನನ್ನ ಮೈ ಬೆವರಿತು. ರಕ್ಷಣೆಗಾಗಿ ಮೊರೆಯಿಡುವ ಆರ್ತನಾದದ ಧಾಟಿಯಲ್ಲಿದ್ದ ಆ ಪಾಡ್ದನ ನನ್ನನ್ನು ಬಡಿದೆಬ್ಬಿಸಿತು.

''ಎಚ್ಚರವಾಗುವ ಹೊತ್ತಿಗೆ ಪಾಡ್ದನದ ಸದ್ದು ಅಡಗಿತು. ತೆಂಬರೆಯ ಬಡಿತ ಮಾತ್ರ ನನ್ನೆದೆಯಿಂದ ಕೇಳುತ್ತಿತ್ತು. ಯಾರೋ 'ಅಯ್ಯೋ ಕಾಪಾಡಿ' ಎಂದು ಕೂಗಿದಂತಾಯಿತು. ತಿರುಗಿ ನೋಡಿದೆ. ಆ ಮರದ ಉದ್ದಕ್ಕೂ ಕೇಕೆ ಹಾಕುತ್ತಾ ನಿಂತ ದೆವ್ವ ಗಾಳಿಗೆ ಓಲಾಡುತ್ತಾ ನನ್ನೆಡೆಗೆ ಸರಿದಂತೆ ಭಾಸವಾಗಿ, ನಾನು ಕಿರುಚಿಕೊಳ್ಳಲು ಬಾಯ್ತೆರೆದೆ. ಭಯದಿಂದ ಸ್ವರ ಹೊರಡಲಿಲ್ಲ. ಒಣಗಿದ ತುಟಿಗಳನ್ನು ನಾಲಗೆಯಿಂದ ನೇವರಿಸಿ, ಸುಧಾರಿಸಿಕೊಂಡು ಟಾರ್ಚ್ ಹೊತ್ತಿಸಿದೆ. ಆ ಉದ್ದಾನುದ್ದ ಮರದ ಭೀಮಗಾತ್ರದ ಹೊರತು ಮತ್ತೇನೂ ಕಾಣಿಸಲಿಲ್ಲ. ಕ್ಷಣದ ಹಿಂದೆ ತಂಗಾಳಿಯಲ್ಲಿ ಸೆರಗು ಬೀಸುತ್ತಾ ನಿಂತಿದ್ದ ದೆವ್ವವೆಲ್ಲಿ ಕಣ್ಮರೆಯಾಯಿತು? ನಾನು ಅಟ್ಟಿಸಿಕೊಂಡು ಬಂದ ಹಂದಿ ಪಂಜುರ್ಲಿ ಭೂತವಲ್ಲ ತಾನೇ, ಎಂದುಕೊಂಡು ಟಾರ್ಚ್ ಆರಿಸಿದೆ. ಚಂದ್ರ ಆಗಷ್ಟೇ ಮೂಡಿದ್ದ. ಎಲೆಗಳ ಸಂದಿಯಿಂದ ಹಾಲು ಬೆಳದಿಂಗಳು ನೆಲವನ್ನು ಚುಂಬಿಸುತ್ತಿತ್ತು. ಹಂದಿಯನ್ನು ಕೊಲ್ಲಲು ಬಂದ ನಾನು ಈಗ ಜೀವ ಉಳಿದರೆ ಸಾಕೆಂದು ಪರಿತಪಿಸಿದೆ. ಕೆಳಗಿಳಿದು ಮನೆಗೆ ಓಡೋಣ ಎಂದರೆ, ಕಾಲುಗಳು ಸಹಕರಿಸಲಿಲ್ಲ. ಚಳಿಗೋ, ಭಯಕ್ಕೋ ಮರಗಟ್ಟಿದ್ದವು. ತುಸು ದೂರದಲ್ಲಿ ಯಾವುದೋ ಪ್ರಾಣಿ ವಿಕಾರವಾಗಿ ಕೂಗಿದ ಸದ್ದು ಕೇಳಿ ನನ್ನ ಉಸಿರು ಗಂಟಲಲ್ಲೇ ಉಳಿಯಿತು. ಬೆಳಕು ಹರಿಯುವುದನ್ನೇ ಕಾಯುತ್ತಾ ಕೂತೆ...''



ಕತೆ ನಿಲ್ಲಿಸಿ ಮಾಯಿಲ ಅಳುತ್ತಾ ಕೂತ. ನಾಲ್ಕಾರು ವರ್ಷಗಳ ಹಿಂದೆ ಆತನನ್ನು ಹೆದರಿಸಿದ ಘಟನೆಯಿಂದ ಈಗ ದುಃಖ ಉಕ್ಕಲು ಸಾಧ್ಯವಿಲ್ಲ. ಇದೇಕೋ ಗೋಜಲಾಗಿದೆ ಎಂದುಕೊಂಡೆ. ಬಿಸಿಲು ಬಾಡತೊಡಗಿತ್ತು. ಮರದ ನೆರಳು ಇನ್ನಷ್ಟು ಉದ್ದವಾಗಿತ್ತು. ಈ ಮರ ತನ್ನೊಳಗೆ ಇನ್ನೇನೋ ರಹಸ್ಯ ಬಚ್ಚಿಟ್ಟುಕೊಂಡಿದೆ ಎಂದು ಭಾಸವಾಯಿತು. ಕೇಳಲೋ, ಬೇಡವೋ ಎಂದು ಅನುಮಾನಿಸುತ್ತಾ ಕೇಳಿದೆ : ''ಘಟ್ಟಕ್ಕೆ ಹೋದ ನಿನ್ನ ಮಗಳ ನೆನಪು ಇನ್ನೂ ಮಾಸಿಲ್ಲವೇ?''

ಮಾಯಿಲನ ಕಣ್ಣುಗಳಿಂದ ನೀರು ಚಿಮ್ಮಿ ಕೆನ್ನೆಗಳನ್ನು ತೋಯಿಸಿತು. ಇದುವರೆಗೆ ಬಿಕ್ಕುತ್ತಿದ್ದವನು ಈಗ ಭೋರೆಂದು ಬಾಯ್ತೆರೆದ. ಹಾಗೆಯೇ ನೆಲದ ಮೇಲೊರಗಿ ರಾಶಿಬಿದ್ದಿದ್ದ ತರಗೆಲೆಗಳನ್ನು ಅತ್ತಿತ್ತ ಸರಿಸುತ್ತಾ, ''ಅಯ್ಯೋ ದೇವರೇ' ಎಂದು ಗೋಳಿಟ್ಟ. ಈ ಮುದಿ ದೇಹದಲ್ಲಿ ಆ ದೈತ್ಯಶಕ್ತಿ ಅದೆಲ್ಲಿ ಅಡಗಿತ್ತೊ! ಯಾಕೆ ಈ ರೀತಿ ಹುಚ್ಚನಂತೆ ವರ್ತಿಸುತ್ತಾನೀತ? ಭಯವಾಗುತ್ತಿದೆ ಎಂದವನು ಕಥೆ ಹೇಳಿದ. ಈಗ ಕಥೆ ನಿಲ್ಲಿಸಿ ಏಕಾಏಕಿ ನೆಲ ಅಗೆಯಲು ಶುರು ಮಾಡಿದ್ದಾನೆ. ಏನಿರಬಹುದು ಅಲ್ಲಿ, ಎಂಬ ಕುತೂಹಲದಿಂದ ಹೊಂಡದೊಳಗೆ ಇಣುಕಿದೆ. ಅಷ್ಟೇ! ನನ್ನ ಕಣ್ಣಮುಂದೆ ಕತ್ತಲಿಟ್ಟುಕೊಂಡಿತು.

ಮಾಯಿಲ ಮರದಿಂದ ನೇತಾಡುತ್ತಿದ್ದ ಬಿಳಲೊಂದನ್ನು ಕತ್ತರಿಸಿ. ಅದರಿಂದ ಧಾರೆಯಾಗಿ ಒಸರಿದ ನೀರನ್ನು ತಲೆಕೆಳಗಾಗಿ ಬಿದ್ದಿದ್ದ ನನ್ನ ಮುಖಕ್ಕೆ ಸಿಂಪಡಿಸಿದ. ಕಣ್ತೆರೆದು ಅವನತ್ತ ನೋಡಿ, ''ತ... ತಲೆಬುರುಡೆ, ಅಸ್ಥಿಪಂಜರ ಯಾರದ್ದು?'' ಗಾಬರಿಯಿಂದ ಕೇಳಿದೆ.

''ಅದು ನನ್ನ ಮಗಳದ್ದು!'' ಮಾಯಿಲ ಕ್ಷೀಣಸ್ವರದಲ್ಲಿ ಉತ್ತರಿಸಿದ. ಆಮೇಲೆ, ''ಈ ಸತ್ಯ ಯಾರಿಗೂ ಗೊತ್ತಿಲ್ಲ ಒಡೆಯಾ. ಎಲ್ಲರೂ ನನ್ನ ಮಗಳು ಬೈರನೊಂದಿಗೆ ಘಟ್ಟಕ್ಕೆ ಓಡಿಹೋದಳೆಂದು ಭಾವಿಸಿದ್ದಾರೆ. ಆದರೆ, ಆಕೆ ಇಲ್ಲಿ ಮಣ್ಣಾಗಿದ್ದಾಳೆ... ಅಯ್ಯೋ ಮಗಳೇ, ನಿನ್ನ ಗತಿಯೇ'' ಎಂದು ಚೀರಿದ. ಆತನೇ ಸಮಾಧಾನ ತಂದುಕೊಳ್ಳುವ ತನಕ ಕಾದೆ. ದೀರ್ಘ ಮೌನದ ಬಳಿಕ ಮತ್ತೆ ನೆನಪಿನ ಸುರುಳಿ ಬಿಚ್ಚಿದ :

''ಈ ಊರಿನ ಸಾಹುಕಾರ ರಂಗಪ್ಪಯ್ಯನವರ ಮನೆಯಲ್ಲಿ ನಾನು ತೋಟದ ಕಾವಲಿಗಿದ್ದೆ. ಬಡತನದಿಂದಾಗಿ ನನ್ನ ಮಗಳು ಲಕ್ಷ್ಮಿಯೂ ಅಲ್ಲಿ ಕೆಲಸಕ್ಕೆ ಬರುತ್ತಿದ್ದಳು. ತುಸು ಕಪ್ಪಿದ್ದರೂ ಆಕರ್ಷಕ ಮೈಕಟ್ಟು. ಸಾಹುಕಾರರ ಮನೆಯಲ್ಲಿ ಘಟ್ಟದ ಕಡೆಯ ಕಟ್ಟುಮಸ್ತಾದ ಆಳು ಬೈರ ಕೆಲಸಕ್ಕಿದ್ದ. ನನ್ನ ಮಗಳನ್ನು ಮೋಹಿಸಿದ. ಆಕೆಗೂ ಬೈರನಲ್ಲಿ ಪ್ರೇಮ ಅಂಕುರಿಸಿತು.

''ಒಂದು ಸಂಜೆ, ನಾಲ್ಕು ಬುಟ್ಟಿ ಹೆಣೆಯಲು ಬೆತ್ತ ಬೇಕೆಂದು ಕಾಡಿಗೆ ಬಂದೆ. ಇಲ್ಲೇ ಹತ್ತಿರದಲ್ಲಿ ಒಂದು ತೊರೆ ಹರಿಯುತ್ತಿದೆ. ಅಲ್ಲಿ ಬೆತ್ತ ಕಡಿದು ಸಿಗಿಯುತ್ತಾ ಕೂತಿದ್ದೆ. ಆಗ, 'ಅಯ್ಯೋ, ಕಾಪಾಡಿ' ಎಂಬ ಆರ್ತನಾದ ಕೇಳಿಸಿತು. ಏನು, ಎತ್ತ ಅಂತ ತಿಳಿಯದೆ ಓಡಿಬಂದೆ.

''ಒಡೆಯಾ, ನನ್ನ ಬದುಕಿನ ಕನಸು ಇಲ್ಲಿ... ಈ ಮರದ ಕೆಳಗೆ ಸಾಯುತ್ತಾ ಬಿದ್ದಿತ್ತು. ಲಕ್ಷ್ಮಿಯ ಬಟ್ಟೆಗಳು ಹರಿದಿದ್ದವು. ಉಸಿರಾಡಲು ತ್ರಾಸ ಪಡುತ್ತಿದ್ದಳು. ತೊರೆಯ ಬಳಿಗೆ ಒಯ್ದು ನೀರು ಕುಡಿಸಲು ಎತ್ತಿಕೊಂಡೆ. ಬೇಡವೆಂದು ಕೈಯಾಡಿಸಿದಳು. ಕಣ್ಣುಗಳಲ್ಲಿ ನೀರು ತುಂಬಿಕೊಂಡು, 'ಅಪ್ಪಾ, ಆ ಪಾಪಿ...' ಎನ್ನುತ್ತಾ ಘಟ್ಟಕ್ಕೆ ಹೋಗುವ ದಾರಿಯ ಕಡೆ ಕೈ ತೋರಿಸಿದಳು. ಆಕೆಯ ಸರ್ವಸ್ವವನ್ನೂ ದೋಚಿ, ಅತ್ಯಾಚಾರ ಮಾಡಿ, ಕತ್ತು ಹಿಸುಕಿ, ಆಕೆ ಸತ್ತಿದ್ದಾಳೆಂದು ಭಾವಿಸಿ, ಬೈರ ಓಡಿಹೋಗಿದ್ದ. ಈ ಪಾಪಿ ಕಣ್ಣುಗಳು ಆಕೆಗೊದಗಿದ ದುರವಸ್ಥೆಯನ್ನು ನೋಡಬೇಕಾಯಿತು!'' ಮಾಯಿಲ ಕೈಗಳಿಂದ ಮುಖ ಮುಚ್ಚಿಕೊಂಡು ನಿಟ್ಟುಸಿರುಬಿಟ್ಟ.

''ನಾನು ಬೇಡಿಕೊಂಡು ಬಂದಿದ್ದೇ ಅಷ್ಟು. ನನ್ನ ತೊಡೆಯ ಮೇಲೆಯೇ ಆಕೆ ಪ್ರಾಣಬಿಟ್ಟಳು. ಆಕೆಯ ಕುತ್ತಿಗೆ ಪಕ್ಕಕ್ಕೆ ವಾಲಿತು. ನನಗೆ ಏನು ಮಾಡಬೇಕೆಂದು ತೋಚಲಿಲ್ಲ. ಲಕ್ಷ್ಮಿಯ ಬೆರಳು ಘಟ್ಟದ ದಾರಿಯನ್ನು ತೋರಿಸುತ್ತಿತ್ತು. ಬೆತ್ತ ಸಿಗಿಯುವ ಕತ್ತಿಯನ್ನು ಹಿಡಿದು ತಡಮಾಡದೆ ಆ ಪಾಪಿಯ ಬೆನ್ನಟ್ಟಿದೆ. ಒಳದಾರಿಗಳಲ್ಲಿ ನುಗ್ಗಿ ಅವನಿಗಾಗಿ ಕಾಯುತ್ತಾ ನಿಂತೆ. ಹತ್ತಿರ ಬಂದ ಅವನ ಕುತ್ತಿಗೆ ತರಿದೆ. ಒಂದೇ ಏಟಿಗೆ ನೆಲಕ್ಕುರುಳಿದ. ಅತನ ಉಂಗಿಯ ಗಂಟಲ್ಲಿ ಮಗಳ ಸರ, ಬೆಂಡೋಲೆ ಸಿಕ್ಕಿದವು. ಘಟ್ಟಕ್ಕೆ ಓಡಿಹೋಗಿ, ಮದುವೆಯಾಗಿ ಸುಖವಾಗಿರೋಣ ಅಂತ ಆಸೆ ಹುಟ್ಟಿಸಿ ನನ್ನ ಮಗಳನ್ನು ಬಲಿ ತೆಗೆದ ಬೈರನ ಮೇಲೆ ಸೇಡು ಸಾಧಿಸಿಬಿಟ್ಟೆ!'' ಎಂದು ಹೇಳಿ ಗಹಗಹಿಸಿ ನಕ್ಕ. ಅದು ಹೆಮ್ಮೆಯೆ? ಅಟ್ಟಹಾಸವೆ? ಸಮಾಧಾನವೆ? ನೋವು ನುಂಗುವ ಪರಿಯೆ? ತಿಳಿಯಲಿಲ್ಲ.

ಮಾಯಿಲನ ಸಿಟ್ಟು, ಆವೇಶ, ಸೇಡು – ಎಲ್ಲ ದುಃಖವಾಗಿ ಕರಗಿ ಮಣ್ಣಿನ ರಾಶಿಯ ಮೇಲೆ ಕುಸಿದುಬಿದ್ದ.

ಮಾಯಿಲನ ಮಗಳು ಲಕ್ಷ್ಮಿಯ ಅಸ್ಥಿಪಂಜರ ಮರವನ್ನೂ, ಮರದ ನೆರಳನ್ನೂ ಅಣಕಿಸಿ ನಕ್ಕಂತೆ ಭಾಸವಾಗಿ, ಹೆದರಿಕೆಯಿಂದ ಮುದುರಿಕೂತೆ. ಕಡಿದ ಬಿಳಲಿನಿಂದ ತೊಟ್ಟಿಕ್ಕುತ್ತಿದ್ದ ನೀರು ನೋವಿನ ಎಳೆ ಇನ್ನೂ ಮಾಸಿರದ ಮಾಯಿಲನ ಮುಖದ ಮೇಲೆ ಬೀಳುತ್ತಿತ್ತು. ಅವನ ದುಃಖಕ್ಕೆ ದನಿಗೂಡಿಸಿ ಸಾಂತ್ವನ ಹೇಳುತ್ತಿತ್ತು.

**ಅನಂತ ಹುದೆಂಗಜೆ**
ನಂ. ೪೪, ಶ್ರೀ ಸಂಗಮೇಶ್ವರ ನಿಲಯ, ತಹಸೀಲ್ದಾರ್ ಕಾಲನಿ, [illegible]
ಹುಬ್ಬಳ್ಳಿ - [illegible]

**ಮ**ನೆಯ ಪಕ್ಕದ ಖಾಲಿ ಸೈಟಿನಲ್ಲಿ ಯಾವತ್ತಿನ ಹಾಗೆ ಇಳಿಸಂಜೆಯ ಹೊತ್ತಿನಲ್ಲಿ ಕ್ರಿಕೆಟ್ ಆಡುತ್ತಿದ್ದ ಹುಡುಗು ಪಾಳ್ಯದ ಗದ್ದಲ ತಾರಕಕ್ಕೇರಿದಾಗ ಎರಡೂ ಕೈಗಳಿಂದ ಕಿವಿ ಮುಚ್ಚಿಕೊಂಡು ಕಿಟಕಿಯಲ್ಲಿ ಹಣಕಿದೆ. ಬೀದಿಯವರೆಲ್ಲಾ ಸೇರಿ ಚೊಕ್ಕ ಮಾಡಿಸಿ, ಖರ್ಚನ್ನು ಸಮಪಾಲಾಗಿ ಹಂಚಿಕೊಂಡು, ರಸ್ತೆಯಲ್ಲಿ ಆಡುತ್ತಾ ವಾಹನ ಚಾಲಕರಿಂದ ಉಗಿಸಿಕೊಳ್ಳುತ್ತಿದ್ದ ಮಕ್ಕಳಿಗೆ ಆಡಲಿಕ್ಕೊಂದು ಜಾಗ ಅಂತ ಮಾಡಿಸಿಕೊಟ್ಟಿದ್ದೆವು. ಯಾರಿಗೂ ಗೊತ್ತಿಲ್ಲದ ಹಾಗೆ ಇದರಲ್ಲಿ ನನ್ನದೊಂದು ಸಣ್ಣ ಸ್ವಾರ್ಥ ಇತ್ತು. ಕಸದ ಕೈಗಾಡಿ ಬಂದಾಗ ಕಸ ಎಸೆಯಲು ಸೋಂಭೇರಿತನ ಮಾಡುತ್ತಿದ್ದವರಿಗೆ ಈ ಖಾಲಿಸೈಟು ಒಂದು ತಿಪ್ಪೆಗುಂಡಿ. ಬೀದಿಯಲ್ಲಿ ಓಡಾಡುವ ಗಂಡಸರಿಗೆ ಅವಸರವಾದಾಗ ಕಳೆಗಿಡಗಳ ಹಿಂದೆ ಮರೆಯಾಗಿ ನಿಂತು ದೇಹ ಬಾಧೆ ತೀರಿಸಿಕೊಳ್ಳುವ ಶೌಚಾಲಯ. ಹಂದಿಗಳ ಸಂಸಾರಕ್ಕೆ ಮನೆ. ಬಿಡಾಡಿ ನಾಯಿಗಳಿಗೆ ಎಲ್ಲೆಲ್ಲಿಂದಲೋ ಸಂಪಾದಿಸಿ ತಂದ ಮೂಳೆ ಕಡಿಯಲು, ಮಾಂಸ ಮೆಲ್ಲಲು ನಿಶ್ಚಿಂತ ಸ್ಥಳ. ಪಾರ್ಥೇನಿಯಂ, ಚೊಗಟೆ ಗಿಡ, ಕಾಡುಬದನೆ, ಎಕ್ಕ ಇತ್ಯಾದಿ ಇತ್ಯಾದಿಗಳಿಂದ ನರಮನುಷ್ಯರಿಗೆ ಅಭೇದ್ಯವೆನಿಸುವಂತಿದ್ದ ಈ ಸ್ಥಳ ತಂತಮ್ಮ ಮನೆಮಕ್ಕಳ ಮೇಲಿನ ಮೋಹದಿಂದ ಸ್ವಚ್ಛ ಆಟದ ಬಯಲಾಗಿ ರೂಪಾಂತರಗೊಂಡಿತ್ತು. ದಿನವೂ ಕುಣಿದು ಕುಪ್ಪಳಿಸುತ್ತಿದ್ದ ಮಕ್ಕಳ ಕಾಲ್ತುಳಿತದಿಂದ ಸಸ್ಯಗಳು ತಿರುಗಿ ಚಿಗುರೊಡೆಯದಿದ್ದರೂ ಅಂಚಿನಲ್ಲಿ ಹೊಂಚು ಹಾಕಿ ಕುಳಿತಂತಿದ್ದ ಪಾರ್ಥೇನಿಯಂ ಗಿಡಗಳು ಮತ್ತೆ ತಲೆ ಎತ್ತಿ ಅಣಕಿಸುತ್ತಿದ್ದುವು; ಮಕ್ಕಳ, ಹಿರಿಯರ ಉಪೇಕ್ಷೆಗೆ ಒಳಗಾಗಿ ಒಂದು ಬದಿಯಲ್ಲಿ ತಮ್ಮ ಪುಟ್ಟ ಸಾಮ್ರಾಜ್ಯ ಸ್ಥಾಪಿಸಿ ಕೊಂಡಿದ್ದುವು. ಆಟದ ಅಬ್ಬರದಲ್ಲಿ ಎಗರಿಹೋಗಿ ಆ ಸಾಮ್ರಾಜ್ಯ ಹೊಕ್ಕು ಮರೆಯಾದ ಚೆಂಡನ್ನು ಹುಡುಕಿ ತರಲು ಹೋದ ಒಬ್ಬಾತನಿಗೆ ಅಲ್ಲೊಂದು ಹಾವಿನ ಪೊರೆ ಕಣ್ಣಿಗೆ ಬಿದ್ದಿದೆ. ಚಳಿಜ್ವರ ಬಂದವನಂತೆ ನಡುಕ ಹತ್ತಿದೆ. ಹಾವನ್ನೇ ನೋಡಿದವನಂತೆ ಕಂಗಾಲಾಗಿ ಅವನು ಆರ್ತನಾದ ಮಾಡಿ ಹಿಂದಕ್ಕೋಡಿ ಬಂದಿದ್ದಾನೆ. ಹುಡುಗರ ಗುಂಪಲ್ಲಿ ಭಯಮಿಶ್ರಿತ ರೋಮಾಂಚನ. ಭಾರೀ ವೀರರಂತೆ ಒಗ್ಗೂಡಿ ಹೋಗಿ ಹಾವಿನ ಪೊರೆ ಅಲ್ಲಿರುವುದನ್ನು ಖಚಿತಪಡಿಸಿಕೊಂಡವರು ಅಲ್ಲಿಂದ ದೂರ ಬಂದು ತಲೆಗೊಂದು ಮಾತಾಡುತ್ತಾ ಗೌಜು ಎಬ್ಬಿಸಿದ್ದಾರೆ. ಕಾಗೆ ಬಳಗ ಒಟ್ಟುಸೇರಿ ಎಬ್ಬಿಸಿದ ಈ ಕೂಗಾಟ ನನ್ನ ಗಮನ ಸೆಳೆದಿದೆ.

''ಏನಾಯ್ತು?'' ಕಿಟಕಿಯಿಂದಲೇ ಕೇಳಿದೆ.

''ಹಾವು...'' ಒಟ್ಟೊಟ್ಟಿಗೆ ಉತ್ತರ ಬಂತು.

''ಎಲ್ಲಿ? ಎಲ್ಲಿದೆ ?''

''ಇಲ್ಲೇ ಎಲ್ಲೋ ಬಿಲ ಮಾಡ್ಕೊಂಡಿದೆ ಆಂಟೀ. ಎಷ್ಟುದ್ದದ ಪೊರೆ ಬಿಟ್ಟಿದೆ ಗೊತ್ತಾ ಆಂಟಿ ? ಬನ್ನಿ, ನೋಡಿ ಆಂಟೀ...''

''ನೀವು ನೋಡಿದ್ದು ಪೊರೇನೋ, ಹಾವನ್ನೋ ?''

''ಪೊರೆ ಆಂಟೀ. ಪೊರೆ ಇದ್ಮೇಲೆ ಹಾವು ಇಲ್ಲೇ ಇರ್ಬೇಕು ಆಂಟೀ...''

ಆಗಲೇ ಬೀದಿಯ ಜನ ಒಬ್ಬೊಬ್ಬರಾಗಿ ಜಮಾಯಿಸತೊಡಗಿದ್ದರು. ತಂತಮ್ಮ ಕಂದಮ್ಮಗಳು ದಿನವೂ ಆಟ ಆಡುತ್ತಿದ್ದ ಜಾಗದಲ್ಲಿ ಹಾವು ಸಂಚರಿಸುತ್ತಿದ್ದಿರಬಹುದೆಂಬ ಕಲ್ಪನೆಗೇ ಕೆಲವರ ಬಾಯಿ ಒಣಗ ತೊಡಗಿತ್ತು. ಟಿ.ವಿ.ಯಲ್ಲಿ ಹಾವು ನೋಡಿದರೂ ಹೆದರಿಕೊಳ್ಳುವ ಅಂತಹವರು ಇನ್ನು ತಮ್ಮ ಮಕ್ಕಳನ್ನು ಈ ಕಡೆ ಸುಳಿಯಗೊಡುವುದಿಲ್ಲ ಎನ್ನುವ ವಿಚಾರ ಯಾರೂ ನನಗೆ ಹೇಳಬೇಕಾಗಿರಲಿಲ್ಲ. 'ಪೇಟೆಯ ಜನಕ್ಕೆ ಹಾವು ಕಂಡರೆ ಯಾಕೆ ಇಷ್ಟು ಹೆದರಿಕೆ ?' ಎನ್ನುವಲ್ಲಿಂದ ಆರಂಭವಾದ ಯೋಚನಾಧಾಟಿ ತೌರೂರಿನ ಹಳ್ಳಿಮನೆಗೆ ನನ್ನನ್ನೊಯ್ದು ನಿಲ್ಲಿಸಿತು. ಮನೆಯ ಸುತ್ತಮುತ್ತ ಹಾವು ಕಾಣಿಸುವುದು ದೊಡ್ಡ ಸಂಗತಿಯಾಗಲೀ, ಭಯ ಹುಟ್ಟಿಸುವಂತಾದ್ದಾಗಲೀ ಆಗಿರದೆ ಅದನ್ನು ಸ್ವಾಭಾವಿಕವೆಂಬಂತೆ ಮನಸ್ಸು ಸ್ವೀಕರಿಸಿಬಿಡುತ್ತಿತ್ತು. ಸ್ಕೂಲಿಗೆ ಮಕ್ಕಳನ್ನು ಕಳಿಸುವ ಅಮ್ಮ,

''ಹಾಂವ್ರೋ, ಹರಣೇನೋ ಇರುತ್ತೆ. ಕಾಲಡಿ ನೋಡ್ಕಂತಾ ಹೋಗಿ'' ಎಂದು ಬೀಳ್ಕೊಡುವುದು ಹೇಳಿ ಹೇಳಿ ಅಭ್ಯಾಸವಾಗಿದ್ದ ಸವಕಲು ಮಾತುಗಳಾಗಿರುತ್ತಿದ್ದುವು. ಅದರಲ್ಲಿ ವಿಶೇಷಾರ್ಥ ಏನಿರುತ್ತಿರಲಿಲ್ಲ. ಅಡಕೆ ತೋಟದ ಕಪ್ಪಿನಲ್ಲಿ ಅಂದರೆ ನೀರು ಹರಿಯಲು ಮಾಡಿದ ಕಾಲುವೆಯಲ್ಲಿ ಹಾವು ಕಾಣಿಸಿಕೊಳ್ಳು

# ನಾಗರಹಾವೇ ಹಾವೊಳು ಹೂವೇ...

ವಸುಮತಿ ಉಡುಪ



ತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು. ತೋಟದ ಕಾಲ್ಬಾರಿಯ ಆಚೀಚಿನ ಅಡಕೆ ಮರದ ಬುಡದಲ್ಲಿ ಗೊಬ್ಬರಕ್ಕೆಂದು ತಂದು ಹಾಕಿದ ಸೊಪ್ಪಿನ ಹೊರೆ ಒಣಗಿ, ಎಲೆಗಳುದುರಿದ ಜಿಗ್ಗಿನಲ್ಲಿ, ದರಗಿನಲ್ಲಿ ಸರಬರ ಸದ್ದು ಕೇಳಿಸಿದರೆ 'ಹಾವು ಇರಬಹುದೇನೋ...' ಎನ್ನುವ ಎಚ್ಚರಿಕೆಯಿಂದ ಕಣ್ಣು, ಕಾಲುಗಳು ಜಾಗೃತವಾಗು ತ್ತಿದ್ದರೂ ಎದೆ ಬಡಿತ ಏರುಪೇರಾಗುತ್ತಿರಲಿಲ್ಲ. ಇಲಿಗಳ ಬೇಟೆಗೆ ಕೇರೆಹಾವು ಮನೆ ಸೇರಿಕೊಂಡು ಕಡಿಮಾಡಿನಲ್ಲಿ ಓಡಾಡುವುದು, ಹಾವಿನ ಹೆದರಿಕೆಯಿಂದ ಇಲಿಗಳು ಕಿಚಿಪಿಚಿ ಗದ್ದಲವೆಬ್ಬಿಸಿ ದೌಡಾಯಿಸುವುದು ಅಪರೂಪಕ್ಕೊಮ್ಮೊಮ್ಮೆ ಸಂಭವಿಸು ತ್ತಿದ್ದುದಿತ್ತು. ಕೇರೆಹಾವು ಅಂದರೆ ಪುಕ್ಕಲ, ಮನುಷ್ಯರನ್ನು ಕಂಡರೆ ಹೆದರಿ ಓಡಿಹೋಗುತ್ತದೆ ಎನ್ನುವ ಅನುಭವಜನ್ಯ ಹೇಳಿಕೆ ಇತ್ತು. ನೋಡುತ್ತಿದ್ದಂತೆ ಅದು ಯಾವ ಜಾತಿಯ ಹಾವು ಎಂದು ಗುರ್ತಿಸುವ ನೈಪುಣ್ಯ ಅನೇಕರಿಗಿದ್ದು ನಾಗರಹಾವಿನ ಬಿಚ್ಚಿದ ಹೆಡೆಯಲ್ಲಿನ ಗುರುತು ನೋಡಿ ಅದು ಕಚ್ಚಿದರೆ ಮನುಷ್ಯ ಎಷ್ಟು ಗಳಿಗೆ ಬದುಕಿರುತ್ತಾನೆ ಎನ್ನುವುದರ ಬಗ್ಗೆ ಕೂಡ ತಜ್ಞರ ವರದಿ ಕೇಳಿಬರುತ್ತಿತ್ತು.



ಮೇಯಲು ಕಾನಿಗೆ ಹೋಗಿ ಬಂದ ಜಾನುವಾರು ಗಳಲ್ಲಿ ಯಾವುದಾದರೊಂದು ಬಾಯಲ್ಲಿ ಬುರು ಬುರು ನೊರೆಕಾರಿ ಸತ್ತರೆ, 'ಬಳ್ಳಿ ಮುಟ್ಟಿದ್ದು' ಅಥವಾ 'ಹುಳ ಮುಟ್ಟಿದ್ದು' ಎನ್ನುವಲ್ಲಿ ವಿಷದ ಹಾವಿಗೆ ಬಳ್ಳಿ ಅಥವಾ ಹುಳ ಎಂದು ಪರೋಕ್ಷ ವಾಗಿ ಯಾಕೆ ಹೇಳುತ್ತಿದ್ದರೋ ಗೊತ್ತಿಲ್ಲವಾದರೂ ಹಾಗೆ ಹೇಳುತ್ತಿದ್ದದ್ದು ಹೌದು. ಒಂದು ಕತೆ ನೆನಪಾಗುತ್ತಿದೆ. ನಿಜಕ್ಕೂ ನಡೆದ ಕತೆ ಎಂದು ಕತೆ ಹೇಳಿದವರು ಹೇಳಿದ್ದು. ಸೌದೆ ಕಡಿಯಲು ಕಾನು ಹೊಕ್ಕವಳೊಬ್ಬಳನ್ನು ಜುಟ್ಟು ಕಾಳಿಂಗ ಅಟ್ಟಿಸಿ ಕೊಂಡು ಬಂತಂತೆ. ಎಲ್ಲಿ ಹೋದರೂ ಬಿಡದೆ ಹಿಂಬಾಲಿಸಿಕೊಂಡು ಬಂದು, ಓಡಿ ಓಡಿ ಸೋತು ಸುಣ್ಣವಾದ ಅವಳು ಕೊನೆಗೆ ಮುಳ್ಳು ಮರವೊಂದರ ಹಿಂದೆ ಅವಿತು ನಿಂತುಕೊಂಡಾಗ ಹೆಡೆ ಬಿಚ್ಚಿ ಅವಳಷ್ಟೆತ್ತರ ನಿಂತ ಹಾವು ರೋಷದಿಂದ ರಪ್ ಎಂದು ಮರಕ್ಕೆ ಬಡಿದದ್ದು ಅಲ್ಲೇ, ಹಾಗೇ, ಮುಳ್ಳುಗಳಿಗೆ ಸಿಕ್ಕಿಕೊಂಡು ಬಿಡಿಸಿಕೊಳ್ಳಲಾಗದೆ ಸತ್ತುಹೋಯಿತಂತೆ. ಬಟ್ಟೆ ಹರಗಿಟ್ಟ ಹಾಗೆ ತಿಂಗಳು ಗಟ್ಟಲೆ ಹಾವಿನ ದೇಹ ಒಣಗಿ, ಕರಟಿ ಅಲ್ಲೇ ನೇತಾಡಿಕೊಂಡಿತ್ತಂತೆ. ಸಿಳ್ಳೆ ಹಾಕಿದರೆ ಸದ್ದಿನ ಜಾಡು ಹಿಡಿದು ಕಾಳಿಂಗನ ಹಾವು ಬಂದುಬಿಡುತ್ತದೆ ಅನ್ನುವುದು ಮತ್ತೊಂದು ಪ್ರತೀತಿ. ಸತ್ತ ನಾಗರಹಾವನ್ನು ಎಲ್ಲಾದರೂ ಕಂಡರೆ ಅದನ್ನು ಹಾಗೇ ನಿರ್ಲಕ್ಷಿಸುತ್ತಿರಲಿಲ್ಲ. ಬಾಯಿಗೆ ಒಂದು ನಾಣ್ಯ ಅಥವಾ ಚಿನ್ನದ ಚೂರು ಹಾಕಿ, ಕಡ್ಡಿ, ದರಗು, ಒಟ್ಟು ಸೇರಿಸಿ, ಅದರ ಸಂಸ್ಕಾರ ಮಾಡುತ್ತಿದ್ದುದು ಸಂಪ್ರದಾಯಸ್ಥರ ಕ್ರಮವಾಗಿತ್ತು. ಹಾಗೆ ಸಂಸ್ಕಾರ ನೆರವೇರಿಸಿದರೆ ಒಬ್ಬ ಅನಾಥ ಬ್ರಾಹ್ಮಣನ ಶವಸಂಸ್ಕಾರ ಮಾಡಿದ ಪುಣ್ಯ ಬರುತ್ತದೆ ಎನ್ನುವ ನಂಬಿಕೆ. ನಾಗರಹಾವನ್ನು ಬಡಿದು ಕೊಲ್ಲುವುದು ಪಾಪ ಎನ್ನುವ ಭಾವನೆ. ಯಾವುದೋ ತಲೆಮಾರಿನಲ್ಲಿ ನಾಗರಹಾವನ್ನು ಕೊಂದದ್ದರಿಂದ ಮುಂದಿನ ಪೀಳಿಗೆಗೆ ತಗುಲಿಕೊಂಡ ನಾನಾ ದೋಷಗಳ ಕುರಿತು ಜ್ಯೋತಿಷಿಗಳ ಹೇಳಿಕೆ ಮತ್ತು ಪರಿಹಾರ ಕ್ರಮ ಇವತ್ತಿಗೂ ಚಾಲ್ತಿಯಲ್ಲಿದೆ. ಸಂತಾನ ಹೀನತೆ, ನಾನಾ ವಿಧದ ಚರ್ಮ ರೋಗಗಳಿಗೆ ನಾಗನ ಶಾಪ ಕಾರಣ ಎನ್ನುವುದು ನಂಬುವವರ ನಂಬಿಕೆ. ಪದೇ ಪದೇ ಹಾವು ಸ್ವಪ್ನದಲ್ಲಿ ಕಾಣಿಸಿಕೊಳ್ಳುವುದಕ್ಕೆ ಮನೋವಿಜ್ಞಾನಿಗಳು ಲೈಂಗಿಕ ಕಾರಣ ನೀಡುತ್ತಾರೆ. ನಾಗರ ಮತ್ತು ಕೇರೆಹಾವುಗಳ ಎಣೆಯಾಟ ಹಳ್ಳಿಮಂದಿಗೆ ಅಪರೂಪದ ದೃಶ್ಯವಲ್ಲ. ನಾಗರಪಂಚಮಿ ಹಬ್ಬದ ದಿನ ಕಲ್ಲುನಾಗರಕ್ಕೆ ಹಾಲೆರೆಯುವ ಬದಲು ನಿಜವಾದ ನಾಗರಹಾವನ್ನು ಮಣ್ಣಿನ ಮಡಕೆಗಳಲ್ಲಿ ಹಿಡಿದು ತಂದು ಅದನ್ನು ಪೂಜಿಸುವ ಕೆಲ ಊರುಗಳ ವಿಶೇಷತೆ ಮಾಧ್ಯಮಗಳಲ್ಲಿ ಸಾಕಷ್ಟು ಪ್ರಚಾರವಾಗಿದೆ. ಹಾವು ಅಂದೊಡನೆ ಹೆದರಿ ನಡುಗುವವರಂತೆ ಎಂತಹ ವಿಷದ ಹಾವನ್ನೂ ತಮ್ಮ ಕೈಚಳಕದಿಂದ ಲೀಲಾಜಾಲವಾಗಿ ಹಿಡಿಯುವ ಎದೆಗಾರಿಕೆಯವರು ಹಲವು ಮಂದಿ ಇದ್ದಾರೆ. ಇಂತಹವರ ಕೈಯಲ್ಲಿ ಗರುಡಮಚ್ಚೆ ಇರುವುದರಿಂದ ಹಾವು ಇವರಿಗೆ ಕಚ್ಚದೆ ತೆಪ್ಪಗೆ ಶರಣಾಗುತ್ತದೆ ಎಂದು ಕೆಲವರ ಕಲ್ಪನೆ. ಮನೆ, ಆಫೀಸು, ಸ್ಕೂಲು ಇತ್ಯಾದಿ ಕಟ್ಟಡದೊಳಗೆ ಹಾವು ಹೊಕ್ಕರೆ ಇಂತಹವರಿಗೆ ತಕ್ಷಣ ಕರೆ ಹೋಗುತ್ತದೆ. ಹಿಡಿದ ಹಾವನ್ನು ಇವರು ಹಿಂಸೆ ಮಾಡದೆ ಸುರಕ್ಷಿತವಾಗಿ ಚೀಲದಲ್ಲಿ ತೆಗೆದುಕೊಂಡು ಹೋಗಿ ಕಾಡಿರುವ ಕಡೆ ಬಿಟ್ಟುಬರುತ್ತಾರೆ ಎನ್ನುವುದು ಮೆಚ್ಚುಗೆಯ ಸಂಗತಿ. ವಿಷದ ಹಾವುಗಳ ನಡುವೆ ಕಾಲ ಕಳೆದು ಗಿನ್ನೆಸ್ ದಾಖಲೆಗೆ ಸೇರಿದವರಿದ್ದಾರೆ. ಹೀಗೆನ್ನುವಾಗ ನಮ್ಮ ಹಾವುಗೊಲ್ಲರ ನೆನಪಾಗದಿರಲು ಸಾಧ್ಯವೇ ? ಮುಂಬಾಗಿಲ ಮೆಟ್ಟಿಲ ಕೆಳಗೆ ಹಾವನ್ನು ಕೂಡಿಟ್ಟ ಬಿದಿರಿನ ಬುಟ್ಟಿ ಬಗಲಿಂದ ಇಳಿಸಿ ಹಾವುಗೊಲ್ಲ ಪುಂಗಿಯ ನಾದ ಹೊರಡಿಸುತ್ತಿದ್ದಂತೆ ದೊಡ್ಡ ಹಳ್ಳಿಮನೆಯ ಯಾವ್ಯಾವ ಮೂಲೆಗಳಲ್ಲೋ ಚದುರಿ ಹೋಗಿದ್ದ ಚಿಳ್ಳೆಪಿಳ್ಳೆಗಳೆಲ್ಲಾ ಮುಂಬಾಗಿಲಿಗೆ ದೌಡು. ಬುಟ್ಟಿಯೊಳಗಿನ ಬಂಧನದಲ್ಲಿ ಬುಸುಗುಡುತ್ತಿರುವ ಸರ್ಪದ ರೋಷಾವೇಶಕ್ಕೆ ಎಲ್ಲರ ಕಣ್ಣಲ್ಲಿ ಸಣ್ಣ ದಿಗಿಲು. ಮುಚ್ಚಳ ತೆಗೆಯುತ್ತಿದ್ದಂತೆ ಅಷ್ಟೆತ್ತರಕ್ಕೆ ಹೆಡೆ ಬಿಚ್ಚಿ ನಿಂತು ಎದುರು ಕಂಡವರಿಗೆ ಅಪ್ಪಳಿಸಿ ಕಚ್ಚಿಬಿಡುತ್ತೇನೆನ್ನುವ ರಣಕೋಪದಲ್ಲಿ ಬುಸುಗುಟ್ಟುತ್ತಿರುವ ಹಾವನ್ನು ನೋಡುತ್ತಿದ್ದಂತೆ ಮಕ್ಕಳ ಹೆಜ್ಜೆ ನಿಧಾನಕ್ಕೆ ಹಿಂದೆ ಹಿಂದೆ ಸರಿಯುತ್ತಾ ಅಮ್ಮನ ಸೀರೆಯ ನೆರಿ ಹಿಡಿದು ಧೈರ್ಯ ಬರಿಸಿಕೊಳ್ಳುವ ಯತ್ನ. ಪುಂಗಿಯ ನಾದಕ್ಕೆ ತಲೆದೂಗುವಂತೆ ಅದರ [illegible] ದಿಕ್ಕನ್ನು ಅನುಕರಿಸುವ ಹೆಡೆ. ಕೀಟಲೆ ಸ್ವಭಾವದ ಹಾವಾಡಿಗ[illegible]ದರೆ ಅಂಗಳದಲ್ಲಿ ಹಾವನ್ನು ಸ್ವಚ್ಛಂದವಾಗಿ ಹರಿದಾಡಲು ಬಿಟ್ಟು ಎಲ್ಲಿ, ಯಾವ [illegible] ಮನೆಬದಿಯಲ್ಲಿ ಶಾಶ್ವತವಾಗಿಬಿಡುವುದೋ ಎಂದು ಮಕ್ಕಳಿಗೆ ಉದ್ವೇಗ. ''ಸಾಕು, ಸಾಕು. ಹಿಡಿದು ಅದನ್ನ ಬುಟ್ಟೀಲಿ ಹಾಕು...'' ದೊಡ್ಡವರ ಅಪ್ಪಣೆ. ಹೆಡೆಯ ಬಳಿ ಕೈಹಾಕಿ ಹಿಡಿದು ''ನೋಡಿ ಸಾಮೀ. ಇನ್ನೂ ಹಲ್ಲು ಕಿತ್ತಿಲ್ಲ. ನಿನ್ನೆ ಹಿಡಿದಿದ್ದು [illegible]

## ನಾಲ್ಕಾರು ಹಾಯ್‌ಕುಗಳು

ಹಕ್ಕಿ ಹಾಡು ನಿಲ್ಲಿಸಿದೆ
ಬರಗಾಲ
ಬಿರುಕು ಬಿಟ್ಟಿದೆ

*

ತಿಪ್ಪೆಯಲ್ಲಿ ಮಗುವಿನಳು
ಮಳೆ, ಮಿಂಚು, ಸಿಡಿಲು
ಹೆಣ್ಣುನಾಯಿ ನೆಕ್ಕಿತು

*

ತಂತಿಯ ಮೇಲೆ
ತೋರಣ ಕುಳಿತ
ಹಕ್ಕಿಗಳ ಬೆಳಗು ಎದುರಿಗಿದೆ

*

ಕೊಚ್ಚಿಹೋಯಿತು ಮಣ್ಣು
ಹುಚ್ಚುಮಳೆಗೆ
ಪಾಪ ! ಬೀಜ ಅನಾಥ

*

ಮಿಂಚುಹುಳುವಿನ ಮಿಣುಕಿಗೆ
ಕತ್ತಲೆ
ಕಂಗೆಟ್ಟಿದೆ, ಕಣ್ಣೀರಿಟ್ಟಿದೆ

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ, ಹಾಸನ - ೫೭೩ ೨೦೧

ಗಳಿಗೆ ಹಾಂವು...'' ಎನ್ನುತ್ತಾ ಹಾವಿನ ಬಾಯಗಲಿಸಿ ಅಕ್ಕಿಕಾಳಿನಂತಹ ಹಲ್ಲು ತೋರಿಸುವ ಹಾವಾಡಿಗ. ಮಕ್ಕಳಿಗೆ ಹಣಿಕಿ, ಇಣುಕಿ ನೋಡುವ ಸಂಭ್ರಮ. ಹಾವು ಕಚ್ಚಿದರೆ ವಿಷ ಏರದಂತಾ ಹೆಬ್ಬೆರಳುದ್ದದ ಬೇರು ತೋರಿಸಿ ದುಡ್ಡಿನ ಚರ್ಚೆಗಿಳಿಯುವ ಹಾವಾಡಿಗ. ''ಅಲ್ಲಿ, ಕೊಟ್ಟಿಗೆ ಬದೀಲಿ ನಾಗಪ್ಪ ಸೇರ್ಕಂಡಿದಾನೆ ಸಾಮೀ. ಹತ್ ರೂಪಾಯಿ, ಐದ್ ಸೇರ್ ಅಕ್ಕಿ ಕೊಡು, ಹಿಡ್ದು ತಗೊಂಡ್ಹೋಗ್ತೀನಿ...''

''ನಡಿ, ನಡಿ. ಬಂದೋರದ್ದೆಲ್ಲಾ ಇದೇ ಪುರಾಣ...''

ಹೌದು, ಮನೆ ಬಾಗಿಲಿಗೆ ಬಂದ ಹಾಂವುಗೊಲ್ಲರೆಲ್ಲಾ ಇಂತಾ ಮಾತು ಹೇಳುತ್ತಿದ್ದದ್ದು ಸತ್ಯ. ಕಡ್ಡಿ ಬಿಸಾಕಿ, ಪುಂಗಿ ಊದಿ, ಅದು ನೋಡುವವರಿಗೆ ಹಾವಾಗಿ ಕಾಣಿಸುವಂತೆ ಕಣ್ಕಟ್ಟು ಮಾಡುವುದರಲ್ಲಿ ಇವರೆಲ್ಲಾ ಪ್ರವೀಣರು ಎನ್ನುವ ನಂಬಿಕೆ. ಜಾಸ್ತಿ ಭಿಕ್ಷೆ ಕಮಾಯಿಸಲು ಏನೆಲ್ಲಾ ಉಪಾಯ. ಸಂಸಾರದ ನಾಲ್ಕು ಜನ ಒಟ್ಟಿಗೆ ಬಂದಿದ್ದರೆ, ''ಮೊರದಾಗೆ ನಾಕ್ ಪಾಲ್ ಮಾಡ್ಕೊಡು ತಾಯಿ'' ಎನ್ನುವ ಬೇಡಿಕೆ. ಮೊಲೆಗೂಸಿಗೂ ಜನದ ಲೆಕ್ಕ. ಹಾಗೆ ಪಾಲು ಮಾಡಿಕೊಟ್ಟರೆ ಒಂದೇ ರಾಶಿಗಿಂತಾ ಜಾಸ್ತಿ ಸಿಕ್ಕುತ್ತದೆ ಎನ್ನುವ ಲೆಕ್ಕಾಚಾರ.

ಒಂದು ತಮಾಷೆ ನೆನಪಾಗುತ್ತಿದೆ. ಸಂಸಾರಸಮೇತ ಬಂದಿದ್ದ ಹಾಂವುಗೊಲ್ಲನೊಬ್ಬ, ''ಹಳೆ ಅಂಗಿ ಇದ್ರೆ ಕೊಡು ಸಾಮಿ...'' ಎಂದು ದುಂಬಾಲು ಬಿದ್ದಿದ್ದ. ಅಪ್ಪನ ಒಂದು ಹಳೆ ಅಂಗಿ ಕೊಟ್ಟು ಅವನನ್ನು ಸಾಗಹಾಕಲು ನೋಡಿದರೆ ಪಕ್ಕ ನಿಂತಿದ್ದ ಮಗನನ್ನು ತೋರಿಸಿ ಮತ್ತೊಂದಕ್ಕೆ ಬೇಡಿಕೆ.

''ಅಂಗಿ ನೋಡಿದ್ರೆ ಗೊತ್ತಾಗಲ್ವಾ ? ದೊಡ್ಡಕ್ಕುಂಟು. ಇಬ್ರಿಗೂ ಸೇರ್ಸಿ ಕೊಟ್ಟಿದ್ದು. ತೆಪ್ಪಗೆ ತಗೊಂಡು ಗಾಡಿಬಿಡು...'' ಎಂದಿದ್ದ ತಮ್ಮನ ಮಾತು ನೆನಪಾದರೆ ತುಟಿಗಳು ಅರಳುತ್ತವೆ.

ಹಳ್ಳಿಯ ಮಕ್ಕಳು ಬೆಳೆದು ದೊಡ್ಡ ಆಗುತ್ತಿದ್ದಂತೆ ಹಾವಿನ ಹೆದರಿಕೆ ತನ್ನಷ್ಟಕ್ಕೆ ಕಮ್ಮಿಯಾಗುತ್ತದೆ. ''ಅದರ ತಂಟೆಗೆ ನಾವು ಹೋಗದಿದ್ರೆ ಅದೆಂತಕ್ಕೆ ನಮ್ಮ ತಂಟೆಗೆ ಬರುತ್ತೆ ?'' ಎನ್ನುವ ಧೋರಣೆ. ಅಕಸ್ಮಾತ್ ಕಾಣದೆ ಅದನ್ನು ಮೆಟ್ಟಿ, ಅದು ಕಚ್ಚಿ, ಇಂಥಾ ಆಕಸ್ಮಿಕಗಳು ಅಪರೂಪವಾಗಿದ್ದರೂ ಅಸಂಭವನೀಯವಾಗಿರಲಿಲ್ಲ. ವಿಷದ ಹಾವು ಕಚ್ಚಿದವರು ಮನೆಯ ಸೂರಿನೊಳಗೆ ಬರಬಾರದು, ಬಂದರೆ ಔಷಧಿ ನಾಟುವುದಿಲ್ಲ ಅನ್ನುವ ಹೇಳಿಕೆ ಮಾತಿದೆ. ಹಾವಿನ ವಿಷಕ್ಕಿಂತ ಅದು ಕಚ್ಚಿದೆಯೆನ್ನುವ ಹೆದರಿಕೆಗೇ ಎದೆ ಒಡೆದು ಸಾಯುವವರು ಜಾಸ್ತಿ ಎನ್ನುವ ಮಾತೂ ಇದೆ. ವಿಷದ ಹಾವನ್ನು ಗಾಜಿನ ಲೋಟಕ್ಕೆ ಕಚ್ಚಿಸಿ ವಿಷ ಸಂಗ್ರಹಿಸುವ ಕ್ರಮವನ್ನು ದೂರದರ್ಶನದಲ್ಲಿ ಹೆಚ್ಚುಕಮ್ಮಿ ಎಲ್ಲರೂ ನೋಡಿರುತ್ತಾರೆ. ಈ ವಿಷವನ್ನು ಅರಿವಳಿಕೆ ಇತ್ಯಾದಿಗಳಲ್ಲಿ ಉಪಯೋಗಿಸುತ್ತಾರಂತೆ. ಹೆಚ್ಚಿನ ಹಾವುಗಳು ವಿಷಜಂತುಗಳಲ್ಲವಂತೆ. ಇರಬಹುದು. ಆದರೆ ಹಾವು ಹಾವೇ, ಹೆದರಿಕೆ ಹೆದರಿಕೆಯೇ. ಹಾವಿನ ಜಾತಿಯಲ್ಲಿ ಎಷ್ಟೆಲ್ಲಾ ವೈವಿಧ್ಯವಿದೆ ಎಂದು ನೆನೆದರೆ ಆಶ್ಚರ್ಯವಾಗುತ್ತದೆ. ಬಹಳ ವರ್ಷಗಳ ಹಿಂದೆ ಮದ್ರಾಸಿನ ಸರ್ಪೋದ್ಯಾನದಲ್ಲಿ ನೋಡಿದ ಹಾವುಗಳ ಸಂತೆಯಲ್ಲಿ ಮಿಜಿಮಿಜಿ ಗೋಜಲಾಗಿ ಸುರುಳಿ ಸುತ್ತಿಕೊಂಡಿದ್ದ ಹಾವುಗಳು ಥೇಟ್ ಶ್ಯಾವಿಗೆ ಎಳೆಗಳಂತೆ ಕಂಡದ್ದು ಮನಸ್ಸಿನಲ್ಲಿ ಅಚ್ಚೊತ್ತಿದೆ. ಇಡೀ ಇಡೀ ಪ್ರಾಣಿಗಳನ್ನು, ಮನುಷ್ಯರನ್ನು ನುಂಗಿಹಾಕಿ ನಂತರ ಮರಕ್ಕೆ ಬಿಗಿಯಾಗಿ ಸುತ್ತಿಕೊಂಡು ತಿಂದದ್ದನ್ನು ಜೀರ್ಣಿಸಿಕೊಳ್ಳುವ ಹೆಬ್ಬಾವು, ನೀರೊಳ್ಳೆ, ಕೇರೆ, ಕೊಳಕುಮಂಡಲ, ಕನ್ನಡಿ ಹಾವು, ನಾಗರ, ಕಾಳಿಂಗ, ಹಸಿರುಹಾವು, ಇಮ್ಮಂಡೆಹಾವು... ಎಷ್ಟುದ್ದಕ್ಕೂ ಬೆಳೆಸ ಬಹುದಾದ ಪಟ್ಟಿ. ಪೇಟೆಮನೆಗಳಲ್ಲಿ ಹಾಂವುಗೊಲ್ಲರು ಮನೆ ಬಾಗಿಲಿಗೆ ತರುವ ಹಾವುಗಳು ಅದ್ಯಾಕೋ ನಮ್ಮ ಬಾಲ್ಯಕಾಲದಲ್ಲಿ ನೋಡಿದ ಹಾವುಗಳಂತೆ ಸಿಟ್ಟಿದ್ದು ಹುಚ್ಚಾಗಿರದೆ ಸೌಮ್ಯವಾಗಿರುವುದನ್ನು ಕಂಡರೆ ಅವನ್ನು ಜನಮೇಜಯನ ಕಾಲದಲ್ಲಿ ಹಿಡಿದಿದ್ದು ಅವು ಬಂಧನಕ್ಕೆ ಒಗ್ಗಿಕೊಂಡು ಸೋಂಬೇರಿತನ ಮೈಗೂಡಿಸಿ ಕೊಂಡಿರುವುದು ಮಾತ್ರವಲ್ಲ, ಮುದಿ ಹತ್ತಿ ಮೂಲೆ ಹಿಡಿದಿವೆ ಅನ್ನಿಸುವಂತಿರುತ್ತವೆ. ಹಾಂವುಗೊಲ್ಲ ತೋರು ಬೆರಳಿನಿಂದ ತಿವಿದು ತಿವಿದು ಅದನ್ನು ಕೆರಳಿಸಿ ಹೆಡೆ ಎತ್ತಿ ನಿಲ್ಲಲು ಪ್ರಚೋದಿಸಬೇಕು. ಆದರೂ ಅದಕ್ಕೆ ಮನಸ್ಸಿಲ್ಲ. ಹಳ್ಳಿಗೆ ಬರುತ್ತಿದ್ದವರೆಲ್ಲಾ ಅವರೇ ಹೇಳುತ್ತಿದ್ದಂತೆ ಹೊಸ ಹಾವನ್ನು ಹಿಡಿದು ತಂದಿರುತ್ತಿದ್ದರೇ ? ಮುದಿಯಾದ ಹಳೆ ಹಾವನ್ನು ಕಾಡಲ್ಲಿ ಬಿಟ್ಟುಬಿಡುತ್ತಿದ್ದರೇ ? ಪ್ರೈಮರಿ ಸ್ಕೂಲಲ್ಲಿ ಓದಿ, 'ನಾಗರಹಾವೇ, ಹಾವೊಳು ಹೂವೇ...' ಇವತ್ತಿಗೂ ಮರೆತುಹೋಗಿಲ್ಲ. 'ಬರಿ ಮೈ ತಣ್ಣಗೆ, ಮನದಲಿ ಬಿಸಿ ಹಗೆ...' ಹೌದೇ ? 'ಹಾವಿನ ದ್ವೇಷ, ಹನ್ನೆರಡು ವರುಷ...' ಅನ್ನುವುದು ಬರಿಯ ಹೇಳಿಕೆಯಂತೆ. ಹಾವು ದ್ವೇಷ ಸಾಧಿಸುವುದು ಬರೀ ಕತೆಯಂತೆ. ಕತೆ ಎನ್ನುತ್ತಿದ್ದಂತೆ ನಾನಾ ಹೆಸರಿನ ಹಾವುಗಳ ಪಾತ್ರವಿರುವ ಪೌರಾಣಿಕ, ಚಾರಿತ್ರಿಕ, ಜಾನಪದ ಕತೆಗಳು ಸಾಲುಗಟ್ಟಿ ನೆನಪಿಗೆ ಬರುತ್ತಿವೆ. ಇಡೀ ಭೂಮಂಡಲವನ್ನು ಹೆಡೆಗಳ ಮೇಲೆ ಹೊತ್ತ ಆದಿಶೇಷ, ಪರೀಕ್ಷಿತನಿಗೆ ಸಾವಾಗಿ ಬಂದ ತಕ್ಷಕ, ನಾಗಮಣಿಯನ್ನು ಹೊಂದಿರುವ ನಾಗರಾಜ, ಒಂದೇ, ಎರಡೇ ?

ಕಗ್ಗತ್ತಲ ರಾತ್ರಿಯಲ್ಲಿ ಒಂದು ನಾಗರಹಾವು ತನ್ನ ಹೆಡೆ ಮಣಿಯನ್ನು ಒಂದೆಡೆ ಇಟ್ಟು ರತ್ನದಂತೆ ಪ್ರಜ್ವಲಿಸುವ ಅದರ ಬೆಳಕಲ್ಲಿ ಆಹಾರ ಹುಡುಕುತ್ತಿತ್ತಂತೆ. ಇದನ್ನು ಕಂಡವನೊಬ್ಬ ಒಂದು ಮುದ್ದೆ ಸಗಣಿ ತಂದು ಆ ಮಣಿಯ ಮೇಲೆ ಹಾಕಿ ಅದನ್ನೆತ್ತಿ ಬೊಕ್ಕಣಕ್ಕಿಳಿಸಿಕೊಂಡು ಪರಾರಿಯಾದನಂತೆ. ಇದ್ದಕ್ಕಿದ್ದಂತೆ ಆವರಿಸಿದ ಕತ್ತಲಿನಿಂದ ಮಣಿ ಕಳೆದು ಕೊಂಡಿದ್ದು ಅರಿವಾದ ಹಾವು ಹೆಡೆಯನ್ನು ನೆಲಕ್ಕಪ್ಪಳಿಸಿ ಪ್ರಾಣ ಬಿಟ್ಟಿತಂತೆ. ಮುಂದೆ ಆ ಕಳ್ಳ ನಾನಾ ಕಷ್ಟ ಅನುಭವಿಸಿದ ಎನ್ನುವುದು ಸಣ್ಣಕ್ಕಿದ್ದಾಗ ಕೇಳಿ ಸತ್ಯ ಎಂದೇ ನಂಬಿಕೊಂಡಿದ್ದ ಒಂದು ಜನಪದ ಕತೆ. ನಾಗ ನಾಗಿಣಿಯರ ಕತೆಗಳ ಅದೆಷ್ಟು ಸಿನಿಮಾಗಳು ಬಂದುಹೋಗಿವೆ, ಬರುತ್ತಿವೆ, ಎಂದು ನೆನೆದರೆ ಲೆಕ್ಕ ತಪ್ಪುತ್ತದೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹಾವುಗಳು ಮಿಂಚಿವೆ. ನಾಗಸರ್ಪಗಳು ಪೂಜೆಗೊಳ್ಳುವ ಕಾರಣಿಕ ಕ್ಷೇತ್ರಗಳಿರುವಂತೆ ಅವುಗಳಿಗಾಗಿಯೇ ಮೀಸಲಿಟ್ಟ ಬನಗಳಿವೆ. ವಿಶೇಷ ಪೂಜೆಗಳು, ಆಚರಣೆಗಳಿವೆ. ಪರಶಿವನ ಕಂಠಾಭರಣ, ಗಣಪನ ಉದರಬಂಧ, ಶ್ರೀಮನ್ನಾರಾಯಣನ ಶಯನತಲ್ಪ, ಸಾಕ್ಷಾತ್ ಸುಬ್ರಹ್ಮಣ್ಯಸ್ವಾಮಿ, ಹೀಗೆ ನಾನಾ ದೇವರುಗಳೊಂದಿಗೆ ಗುರ್ತಿಸಿಕೊಂಡಿರುವ ಹಾವುಗಳೆಂದರೆ ಆಸ್ತಿಕರಿಗೆ ಸಹಜವಾಗಿ ಪೂಜ್ಯಭಾವನೆ. ನಾಗರಾಜ ನಾಗರಗಳಿಗೆ ಮಾತ್ರವಲ್ಲ, ಹಾವುಗಳಿಗೆಲ್ಲಾ ರಾಜ ಅನ್ನಬಹುದೇನೋ. ಚೀನಾದಲ್ಲಿ ಹಾವು ಒಂದು ಆಹಾರ ಎಂದು ನೆನೆದರೆ ಮೈ ಜುಮ್ಮೆನ್ನುತ್ತದೆ. ವಿವಿಧ ಜಾತಿಯ ಹಾವುಗಳನ್ನು ಗಾಜಿನ ಪೆಟ್ಟಿಗೆಯೊಳಗೆ ಕೂಡಿಟ್ಟು, ಗಿರಾಕಿ ಬಯಸಿದ್ದನ್ನು ಅವನೆದುರೇ ಕತ್ತರಿಸಿ, ಹಿಂಡಿದ ರಕ್ತವನ್ನು ಲೋಟಗಳಲ್ಲಿ ತುಂಬಿಸಿ, ಗಿರಾಕಿಗಳು ಅದನ್ನು ಅಮೃತದಂತೆ ಚಪ್ಪರಿಸಿ ಕುಡಿಯುವುದನ್ನು ದೂರದರ್ಶನ ಕಣ್ಣೆದುರು ಸಾಕ್ಷಾತ್ಕಾರ ಗೊಳಿಸಿದೆ. ಪಡುವಲ ಕಾಯಿಯೇನೋ ಎನ್ನುವಂತೆ ಹೆಚ್ಚಿದ ಹಾವಿನ ತುಂಡುಗಳನ್ನು ಹುರಿದು, ಮಸಾಲೆ ಬೆರೆಸಿ ರುಚಿಯಾಗಿಸಿಕೊಂಡು ಮೆಲ್ಲುತ್ತಾರೆ ಎನ್ನುವಾಗ ಜಪಾನಿನ ಕೆಲ ತಿನಿಸುಗಳ ಕುರಿತು ಅಲ್ಲಿದ್ದು ಬಂದವರು ಹೇಳಿದ್ದು ನೆನಪಾಗುತ್ತಿದೆ. ಕಾಯಿತುರಿ ಉದುರಿಸಿದಂತೆ ಕಾಣುವ ಕೆಲ ತಿನಿಸುಗಳ ಮೇಲಿದ್ದಿದ್ದು ಹತ್ತಿರದಿಂದ ನೋಡಿದರೆ ಕಾಯಿತುರಿಯಾಗಿರದೆ ಅಕ್ಕಿಹುಳುವಿನಂತಹ ಸಣ್ಣಸಣ್ಣ ಮಿಜಿಗುಟ್ಟುತ್ತಿದ್ದ ಹುಳುಗಳಾಗಿ ದ್ದುವಂತೆ. ಬಿಡಿ, ಅವರವರ ರುಚಿ ಅವರವರದ್ದು.

ಇದು ಇತ್ತೀಚೆಗೆ ನಡೆದ ಒಂದು ನಿಜ ಸಂಗತಿ. ಪೇಪರಿನಲ್ಲಿ ಓದಿದ್ದು. ವಕೀಲ ರೊಬ್ಬರು ಕೋರ್ಟಿನಲ್ಲಿ ವಾದ ಮಾಡುವಾಗ ಕೋಟಿನ ಜೇಬಿನಿಂದ ಮರಿಹಾವಿನ ಬಾಲವೊಂದು ಇಣುಕುತ್ತಿತ್ತಂತೆ. ಗಮನಿಸಿದ ವಕೀಲರು ಕೋಟು ಕಳಚಿ ಎಸೆದರಂತೆ. ವಕೀಲರ ವಿಶ್ರಾಂತಿಕೋಣೆಯೊಳಗೆ ನೇತುಹಾಕಿದ ಕೋಟಿನ ಜೇಬಿನೊಳಗೆ ಹಾವಿನಮರಿ ಸೇರಿಕೊಂಡಿರಬಹುದು ಎನ್ನುವುದು ಗುಮಾನಿ. ಕತ್ತಲಲ್ಲಿ ಹಗ್ಗ ಮೆಟ್ಟಿದರೂ ಹಾವೆಂದು ಬೆವರು ಕಿತ್ತುಕೊಳ್ಳುವಾಗ ನಿಜವಾದ ಹಾವೊಂದು ಕೋಟಿನ ಜೇಬಿನೊಳಗೆ ಅಡಗಿತ್ತು ಎಂದು ನೆನೆದರೆ...

**ವಸುಮತಿ ಉಡುಪ**
ನಂ. ೧೨೦, 'ಅಮೂಲ್ಯ', ಮೊದಲನೇ ಮಹಡಿ, ೩ನೇ ಅಡ್ಡರಸ್ತೆ
ವಿಜಯನಗರ ರೈಲ್ವೆ ಬಡಾವಣೆ, ಮೈಸೂರು - ೫೭೦ ೦೧೬

# ವೀರಶೈವರ ಬಂದೀಖಾನೆಗೆ ಬಿದ್ದ ಬಸವಣ್ಣ

ವೀರಶೈವರು ಮತ ಮಾನ್ಯಗಳನ್ನು ಬೆನ್ನಿಗೆ ಕಟ್ಟಿಕೊಂಡು ವಿಶ್ವಮಾನ್ಯ ತತ್ವಗಳನ್ನು ಗಾಳಿಗೆ ತೂರಿ ಜನರ ಅಜ್ಞಾನವನ್ನು ಮೌಢ್ಯವನ್ನು ಚೆನ್ನಾಗಿ ಬಳಸಿಕೊಂಡು ಜನರ ಕಷ್ಟನಷ್ಟಗಳ ಕಡೆಗೆ ಬೆನ್ನುತೋರಿಸಿ ತಮ್ಮ ಸ್ವಾರ್ಥ ಸಾಧಿಸಿಕೊಂಡರು. ಊರೂರು ಪ್ರಚಾರ ಮಾಡುತ್ತಾ ಸುಲಿಗೆಯನ್ನೇ ತಮ್ಮ ಕಾಯಕವನ್ನಾಗಿ ಮಾಡಿಕೊಂಡು ಅಷ್ಟೈಶ್ವರ್ಯಗಳಲ್ಲಿ ಮೆರೆಯುತ್ತಾ ಸ್ವರ್ಗಸುಖದಲ್ಲಿ ತೇಲಾಡಹತ್ತಿದರು. ಷಟ್‌ಸ್ಥಲವೆಂಬ ಗೋಡೆಯ ಕಟ್ಟಿ ಅಷ್ಟಾವರಣವೆಂಬ ಕಬ್ಬಿಣ ಸರಳುಗಳನ್ನು ಬಿಗಿದ ಈ ವೀರಶೈವ ಬಂದೀಖಾನೆಯಲ್ಲಿ ಬಸವಣ್ಣ ಮತ್ತು ಆತನ ಮೂಲ ಸಿದ್ಧಾಂತಗಳು ಬಂದಿಯಾಗಿ ಬಿದ್ದುಬಿಟ್ಟಿವೆ. ಬಸವ ಸಮಿತಿಯವರು, ಮಠಾಧೀಶರು ಈ ಬಂದೀಖಾನೆಯ ಜಬರದಸ್ತ ಕಾವಲುಗಾರರಾಗಿದ್ದಾರೆ ಎಂದು ಹೇಳಲು ನನಗೆ ಯಾವ ಸಂಕೋಚವೂ ಇಲ್ಲ.

**ಕೆ. ಡಿ. ಮುತ್ತೂರ**

"**ಲೋ**ಕವೆ ನನ್ನ ಮನೆ, ಮಾನವ ಕುಲವೇ ನನ್ನ ಕುಟುಂಬ" ಎಂಬ ಲೋಕೋಕ್ತಿಯಂತೆ ಮಹಾತ್ಮ ಬಸವಣ್ಣ ಅದೇ ಹಾದಿಯಲ್ಲಿ ಹೆಜ್ಜೆ ಹಾಕಿದ ಮಹಾ ಮಾನವತಾವಾದಿ. ಈ ಮಾತನ್ನು ಯಾರಾದರೂ ಒಪ್ಪಲಿ ಬಿಡಲಿ, ಅವನು ಮಹಾ ಮಾನವತಾವಾದಿ ಎಂಬುದು ಸತ್ಯ.

ಬಸವಣ್ಣನ ಅಪೇಕ್ಷೆಯಂತೆ ಈ ಸಮಾಜ ನಿರ್ಮಾಣವಾಗಲಿಲ್ಲ, ಏಕೆ ? ಸಮಾಜ ಪರಿವರ್ತನೆಯ ಹಾದಿಯಲ್ಲಿ ಸಹಕಾರಿಯಾಗಲಿಲ್ಲ, ಏಕೆ ? ಇದೊಂದು ಯಕ್ಷಪ್ರಶ್ನೆಯೇ ಸರಿ. ಕಾರಣ ಬಸವಣ್ಣ ಗತಿಸಿಹೋದ ನೂರಾರು ವರುಷಗಳ ತರುವಾಯ ವಚನಕಾರರ ಜೀವನಾಡಿಯಾಗಿದ್ದ ವಚನಸಾಹಿತ್ಯವು ಕೆಲವು ಮಠಾಧೀಶರ ಜಗುಲಿಯನ್ನೇರಿ ಪೂಜೆಗೊಳ್ಳುತ್ತಲೇ ಉಳಿಯಿತು. ಯಾವುದೋ ಕಾರಣಾಂತರಗಳಿಂದ ಅವರ ಜಗುಲಿಯಿಂದ ಕೆಳಗಿಳಿದು ಪ್ರಚಾರಕ್ಕೆ ಬಂದುದು ಒಂದು ಯೋಗಾಯೋಗವೇ ಸರಿ. ಇದರ ಪರಿಣಾಮವಾಗಿ ೧೫ನೇ ಶತಮಾನದಿಂದ ೧೬ನೇ ಶತಮಾನದ ತನಕ ಈ ಅವಧಿಯಲ್ಲಿ ಐದು ಶೂನ್ಯ ಸಂಪಾದನೆಗಳು ರಚನೆಯಾದವು. ಇವುಗಳ ಮುಖಾಂತರ ವೈದಿಕ ಧರ್ಮದ ಪ್ರಚಾರ ವ್ಯವಸ್ಥಿತವಾಗಿ ನಡೆಯಿತು. ವಚನಸಾಹಿತ್ಯ ಬೆಳಕಿಗೆ ಬಂದ ಮೇಲೆ ಕೆಲವು ಪ್ರಭಾವಶಾಲಿ ಪಂಡಿತರು, ಚಾಣಾಕ್ಷ ಹಿರಿಯ ಸ್ಮಾರ್ತ ಬ್ರಾಹ್ಮಣರು ಬಸವ ತತ್ವಕ್ಕೆ ಮಾರುಹೋಗಿ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದರು. ವೈದಿಕ ಸಮಾಜದ ಮುಂಚೂಣಿಯಲ್ಲಿದ್ದ ಈ ಜನ ಸ್ವಾಭಾವಿಕವಾಗಿ ವಚನಸಾಹಿತ್ಯವನ್ನು ಅಭ್ಯಾಸ ಮಾಡಿದರು. ವಚನಕಾರರ ವಚನಗಳು ಅವೈದಿಕವಾಗಿದ್ದರಿಂದ ಅವುಗಳಿಗೆ ವೈದಿಕದ ಲೇಪನ ಮಾಡುವುದು



ಅವರಿಗೆ ತೀರ ಅವಶ್ಯಕತೆಯಾಗಿ ಪರಿಣಮಿಸಿತು. ಇದು ಅವರ ಅಸ್ತಿತ್ವದ ಪ್ರಶ್ನೆಯೂ ಆಗಿತ್ತು. ತದನಂತರ ಬಸವಣ್ಣನವರ ಚರಿತ್ರೆಯನ್ನು ಬರೆದರು. ಈ ಚರಿತ್ರೆಯಲ್ಲಿ ಅನೇಕ ಪವಾಡಗಳನ್ನು ಪುಣ್ಯ ಕಥೆಗಳನ್ನು ಸೇರಿಸಿ ದೊಡ್ಡ ದೊಡ್ಡ ಪುರಾಣಗಳನ್ನು ರಚಿಸಿದರು. ಮಹಾಕಾವ್ಯಗಳನ್ನು ಬರೆದರು. ಇದರಿಂದ ವೈದಿಕ ಧರ್ಮದ ಪ್ರಚಾರ ಬಹಳ ಚೆನ್ನಾಗಿ ಆಯಿತೇ ಹೊರತಾಗಿ, ವಚನಸಾಹಿತ್ಯದ ಮೂಲಭೂತ ತತ್ವಗಳು ಮರೆಯಾದವು. ಅದಕ್ಕೆ ಬದಲಾಗಿ ವೈದಿಕ ತತ್ವಗಳಾದ ದೇವರು, ಧರ್ಮ, ಪೂಜೆ, ವ್ರತಗಳು, ವರ್ಣ ಭೇದಗಳು, ದಾನ ಮತ್ತು ದತ್ತಿಗಳು, ವರ್ಣಾಶ್ರಮ ಧರ್ಮದ ಸೂತ್ರಗಳು ತೀವ್ರತೆಯನ್ನು ಪಡೆದವು. ಅವುಗಳ ಮುಖಾಂತರ ತಮ್ಮ ಸ್ವಾರ್ಥ, ವಂಚನೆ, ಮೋಸ, ಕಪಟತನ, ಹಾಗೂ ಸುಳ್ಳುಗಳನ್ನು ಬೆರೆಸಿ ತಮ್ಮ ಬೆಳೆ ಬೇಯಿಸಿಕೊಳ್ಳಲು ಪ್ರಾರಂಭಿಸಿದರು. ಹೀಗೆ ವಚನಸಾಹಿತ್ಯದ ಮೂಲತತ್ವವನ್ನು ಹಿಂದೆ ಸರಿಸಿ, ವೈದಿಕಸಾಹಿತ್ಯವು ಹೆಚ್ಚು ಹೆಚ್ಚು ಪ್ರಚಾರ ಪಡೆಯಿತು. ಈ ಸೂಕ್ಷ್ಮತೆಯನ್ನು ಅರಿಯುವಷ್ಟು ಜನ ಪ್ರಬುದ್ಧರಾಗಿರಲಿಲ್ಲವೆಂಬುದು ಕೂಡ ಅಷ್ಟೇ ಕಟು ಸತ್ಯವಾಗಿದೆ. ವಚನಸಾಹಿತ್ಯದ ಮೂಲ ಸಿದ್ಧಾಂತಗಳನ್ನು ತಿಳಿಸಿ ಹೇಳುವವರು ಯಾರೂ ಇರಲಿಲ್ಲ. ಎಲ್ಲರೂ ವೈದಿಕ ವಿಚಾರವಾದಿಗಳೇ ಆಗಿದ್ದರು. ಅಂತೆಯೇ ಅವರೇ ವಚನಸಾಹಿತ್ಯದ ಪ್ರಚಾರಕರೂ ಆಗಿದ್ದರು. ಈ ಕೆಳಗಿನ ವಚನದ ನಿಜವಾದ ಅರ್ಥ ಹಾಗೂ ವೈದಿಕ ಕಲ್ಪನೆಯ ಅರ್ಥ ಹೇಗಿದೆ ನೋಡಿ :

*ನಡೆಯಲರಿಯದೆ, ನುಡಿಯಲರಿಯದೆ*
*ಲಿಂಗವ ಪೂಜಿಸಿ ಫಲವೇನು ? ಫಲವೇನು ?*
*ಅವರ ದುಃಖವೆನ್ನ ದುಃಖ, ಅವರ ಸುಖವೆನ್ನ ಸುಖ*
*ಕೂಡಲಸಂಗನ ಶರಣರ ಮನನೊಂದಡೆ*
*ಅನುಬೆಂದೆನಯ್ಯಾ.*

ಸ್ಥಾವರ ಲಿಂಗವನ್ನು ಪೂಜಿಸಲಿ ಇಲ್ಲವೇ ಬಿಡಲಿ, ಆದರೆ ನುಡಿದಂತೆ ನಡೆಯಬೇಕು, ನಡೆದಂತೆ ನುಡಿಯಬೇಕು. ನಡೆ ಮತ್ತು ನುಡಿ ಎರಡೂ ಒಂದೇ, ಬೇರೆ ಬೇರೆ ಅಲ್ಲ; ಇದು ವಚನಕಾರರ ತತ್ವವಾಗಿದೆ. ಪೂಜಾ ವಿಧಿ ವಿಧಾನಗಳು ದ್ವೈತ ಮತಕ್ಕೆ ಸೇರಿದವುಗಳಾದ್ದರಿಂದ ವಚನಕಾರರ ತತ್ವಗಳಲ್ಲಿ ಇವು ಇಲ್ಲವೇ ಇಲ್ಲ. ಸಾಮಾಜಿಕ ಆಚರಣೆಗಳೇ ಇಲ್ಲಿ ಮುಖ್ಯ. ಅನ್ಯರಿಗಾದ ದುಃಖ ನನ್ನ ದುಃಖವೂ ಹೌದು. ಅನ್ಯರಿಗಾದ ಸುಖ ನನ್ನ ಸುಖವೂ ಹೌದು. ಜನಸಾಮಾನ್ಯರು ನೊಂದುಕೊಂಡರೆ, ದುಃಖಪಟ್ಟರೆ ಆ ನೋವು ಆ ದುಃಖ ನನಗೂ ತಟ್ಟುತ್ತದೆ ಎಂದು ಹೇಳುತ್ತಾನೆ ಬಸವಣ್ಣ. ಆದರೆ, ವೈದಿಕ ವಿಚಾರದಲ್ಲಿ ಕೇವಲ ಪೂಜೆ, ಪ್ರಾರ್ಥನೆ ಮತ್ತು ವ್ರತಗಳು, ದಾನ ದಕ್ಷಿಣೆಗಳು ಪ್ರಧಾನವಾತ್ರ ವಹಿಸುತ್ತವೆ. ಇನ್ನೊಂದು ವಚನ ನೋಡಿ :

*ಲಿಂಗವ ಪೂಜಿಸಿ ಫಲವೇನಯ್ಯಾ*
*ಸಮರತಿ, ಸಮಕಳೆ, ಸಮ ಸುಖವನರಿಯದನ್ನಕ್ಕ ?*
*ಲಿಂಗವ ಪೂಜಿಸಿ ಫಲವೇನಯ್ಯಾ*
*ಕೂಡಲಸಂಗಮ ದೇವರ ಪೂಜಿಸಿ*
*ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ ?*

ಇಲ್ಲಿ ಸಮರತಿಯೆಂದರೆ ಲಿಂಗತಾರತಮ್ಯವಿರಬಾರದು, ಸಮಕಳೆಯೆಂದರೆ ವರ್ಣಭೇದ ಮಾಡಬಾರದು, ಸಮಸುಖವೆಂದರೆ ಸರ್ವ ಜನರ ಸುಖ ದುಃಖಗಳು ನನ್ನ ಸುಖ ದುಃಖವೆಂದು ತಿಳಿಯಬೇಕು. ಇದು ವಚನಸಾಹಿತ್ಯದ ಮೂಲ ತತ್ವ. ಇದು ಆಚರಣೆಯಲ್ಲಿ ಬರಬೇಕು. ಇದನ್ನು ಬಿಟ್ಟು ಸ್ಥಾವರ ಲಿಂಗವನ್ನು ಪೂಜಿಸುವುದರಿಂದೇನು ? ಹೇಗೆಂದರೆ, ನದಿಯೊಳಗೆ ನದಿ ಸೇರಿಕೊಂಡರೆ ಒಂದೇ ನದಿಯಾಗಿ ಒಂದೇ ನೀರಾಗಿ ಹರಿಯುವಂತೆ ಜನಸಾಮಾನ್ಯರಲ್ಲಿ ಸಾಮಾನ್ಯ ಮನುಷ್ಯನಾಗಿ ಅವರಲ್ಲಿ ನಾನು ನನ್ನಲ್ಲಿ ಅವರು ಕೂಡಿಕೊಂಡು ಬೆರೆತು ಬಾಳಬೇಕು. ಇದು ಕೂಡ ವಚನಸಾಹಿತ್ಯದ ಮೂಲತತ್ವ. ಇದಿಲ್ಲದೇ ಸ್ಥಾವರ ಲಿಂಗ ಪೂಜೆಯಿಂದ ಏನು ಪ್ರಯೋಜನ ? ಆದರೆ ವೈದಿಕರು ಅಂದರೆ ವೀರಶೈವ ಮಠಾಧಿಪತಿಗಳು ಸ್ಥಾವರ ಲಿಂಗಪೂಜೆ, ಧ್ಯಾನ, ಜಪ-ತಪಗಳು, ಮುಖ್ಯವೆಂದೂ ಅವಶ್ಯವೆಂದೂ ಹೇಳಿ ಅವರವರ ಅಂತಸ್ತಿಗೆ ತಕ್ಕಂತೆ ಅವರವರು ಇರಬೇಕೆಂದು ವರ್ಣಾಶ್ರಮ ಧರ್ಮವನ್ನು ಪ್ರತಿಪಾದಿಸಿ ಸಾರ್ವಜನಿಕರು ನಂಬುವಂತಹ ಸುಳ್ಳು ಹೇಳುತ್ತಾರೆ. ತಮ್ಮ ಶ್ರೇಷ್ಠತೆಯನ್ನು ಎತ್ತಿ ತೋರಿಸುತ್ತಾರೆ.

ಇನ್ನೊಂದು ವಚನ :

ಎರೆದಡೆ ನೆನೆಯದು, ಮರೆದಡೆ ಬಾಡದು
ಹುರುಳಿಲ್ಲ ಲಿಂಗಾರ್ಚನೆ
ಕೂಡಲಸಂಗಮದೇವಾ ಜಂಗಮಕ್ಕೆರೆದಡೆ
ಸ್ಥಾವರ ನೆನೆಯಿತ್ತು.

ಸ್ಥಾವರ ಲಿಂಗಕ್ಕೆ ನೀರು ಹನಿಸಿದರೆ ತೋಯುವುದೂ ಇಲ್ಲ, ನೆನೆಯುವುದೂ ಇಲ್ಲ, ಒಂದು ವೇಳೆ ನೀರು ನೀಡದಿದ್ದರೆ ಅದು ಬಾಡಿಹೋಗುವುದಿಲ್ಲ, ಮತ್ತು ನಶಿಸಿಯೂ ಹೋಗುವುದಿಲ್ಲ. ಕಾರಣ ಲಿಂಗಾರ್ಚನೆಯಲ್ಲಿ ಹುರುಳಿಲ್ಲ. ಅಂದರೆ, ಬಸವಣ್ಣನ ಮುಖ್ಯ ವಿಚಾರವಾದ ದಯೆ ಅಥವಾ ಕರುಣೆಯಿಲ್ಲದ ಸ್ಥಾವರ ಲಿಂಗವನ್ನು ಪೂಜಿಸುವುದರಲ್ಲಿ ಹುರುಳಿಲ್ಲ. ಇದನ್ನೇ ಕಾರ್ಲ್ ಮಾರ್ಕ್ಸ್ ಹೀಗೆ ಹೇಳುತ್ತಾನೆ: ''ಯಾರಾದರೂ ಮೃಗವಾಗಲು ಬಯಸಿದರೆ ಅದು ನಿಜಕ್ಕೂ ಸಾಧ್ಯ. ಮಾನವ ಕುಲದ ಯಾತನೆಯನ್ನು ಕಂಡು ಅದರ ಕಡೆಗೆ ಬೆನ್ನು ತಿರುಗಿಸಿ ತನ್ನ ಸ್ವಾರ್ಥ ಸಾಧಿಸ ಬಹುದು.'' ಈ ವಚನದಲ್ಲಿ ಮಾರ್ಕ್ಸ್ ಅವರ ಈ ಅಭಿಪ್ರಾಯ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಲೋಕದಲ್ಲಿ ದಯೆಯಿಂದ ಕರುಣೆಯಿಂದ ಸುಜ್ಞಾನದಿಂದ ಸತ್‌ಕ್ರಿಯೆಯಿಂದ ತನ್ನ ಹಾಗೂ ಶ್ರೀಸಾಮಾನ್ಯನ ಬದುಕಿನ ಬಳ್ಳಿ ಬೆಳೆಯುತ್ತದೆ. ಈ ಜೀವ ಜಗತ್ತಿನ ಪ್ರಾಣಿ ಸಂಕುಲದ ಸುಖ ದುಃಖಗಳಲ್ಲಿ ಬೆರೆತು ಬಾಳುವುದರಿಂದ ಈ ಸಮಾಜ ಈ ಪರಿಸರ ಪರಿವರ್ತನೆಯ ಹಾದಿ ಹಿಡಿಯುತ್ತದೆ. ಕಠಿಣವಾದ ಮನಸ್ಸು ಕರಗಿ ಕರುಣೆಯಾಗಿ ಪರಿವರ್ತನೆ ಹೊಂದುತ್ತದೆ. ಇದನ್ನೇ ಬಸವಣ್ಣ ಸ್ಥಾವರ ನೆನೆಯುತ್ತದೆ, ಎಂದು ಹೇಳಿದ್ದಾನೆ.

ಆದರೆ ವೈದಿಕರು, ಅಂದರೆ ವೀರಶೈವ ಮಠಾಧೀಶ ಜಂಗಮನ ಕರೆತಂದು ಪಾದಪೂಜೆ ಮಾಡಿ ಉಣಿಸಿ ತಿನಿಸಿ ಧನ ಧಾನ್ಯ ವಸ್ತ್ರಗಳನ್ನು ದಾನ ಮಾಡಬೇಕೆಂದು ಉಪದೇಶಿಸುತ್ತಾರೆ. ಮೂಢರನ್ನು ಅಜ್ಞಾನಿಗಳನ್ನು ಶೋಷಣೆ ಮಾಡಿ ಸಂತೋಷಪಡುತ್ತಾರೆ.

ಇನ್ನೊಂದು ವಚನ :

ಬಡ ಹಾರವನೇಸು ಭಕ್ತನಾದಡೆಯೂ ನೇಣಿನ ಹಂಗುಬಿಡ
ಮಾಲೆಗಾರನೇಸು ಭಕ್ತನಾದಡೆಯೂ ಬಾವಿ ಬೊಮ್ಮನ ಹಂಗುಬಿಡ
ಬಣಜಿಗನೇಸು ಭಕ್ತನಾದಡೆಯೂ ಒಟ್ಟಲ ಬೆನಕನ ಹಂಗುಬಿಡ
ಕಂಚುಗಾರನೇಸು ಭಕ್ತನಾದಡೆಯೂ ಕಾಳಿಕಾದೇವಿ ಹಂಗುಬಿಡ
ನಾನಾವ ಹಂಗಿನವನಲ್ಲ ನಿಮ್ಮ ಶರಣರ ಹಂಗಿನವನಯ್ಯಾ ಕೂಡಲ ಸಂಗಮದೇವಾ.

ಹಾರುವನಾಗಲಿ, ಮಾಲೆಗಾರನಾಗಲಿ, ಬಣಜಿಗನಾಗಲಿ, ಕಂಚುಗಾರನಾಗಲಿ ಮತ್ತೆ ಯಾವುದೇ ಕಾಯಕ ಮಾಡುವವನಾಗಲಿ ತಮ್ಮ ತಮ್ಮ ಕುಲದೇವರೆಂದು ಹೇಳಿಕೊಳ್ಳುವುದು ಆತ್ಮ ವಂಚನೆಗಾಗಿ, ಸ್ವಾರ್ಥಕ್ಕಾಗಿ, ಮೋಸ ಮಾಡುವುದಕ್ಕಾಗಿ, ಜನರನ್ನು ವಂಚಿಸುವುದಕ್ಕಾಗಿ, ಈ ದೇವರಲ್ಲಿ ಭಕ್ತಿ ಪ್ರದರ್ಶನ ಮಾಡುತ್ತಾರೆ. ಕಲ್ಲು ದೇವರು ಶ್ರೇಷ್ಠ ಮನುಷ್ಯ ಕಲ್ಲಿಗಿಂತ ಕನಿಷ್ಠ. ಗುರು ಶ್ರೇಷ್ಠ ಶಿಷ್ಯ ಕನಿಷ್ಠ ಮೇಲ್ಜಾತಿ ಶ್ರೇಷ್ಠ ಕೆಳಜಾತಿ ಕನಿಷ್ಠ ಎಂಬ ತಾರತಮ್ಯವನ್ನು ಬಿತ್ತಿ ಬೆಳೆಯುತ್ತಾರೆ. ಹೀಗೆ ನಿರಂತರ ಶೋಷಣೆಗೆ ಹಾದಿ ಮಾಡಿಕೊಡುತ್ತಾರೆ. ''ಊರ ಮೇಲೆ ಊಟ, ನೀರ ಮೇಲೆ ಚಲ್ಲಾಟ'' ಎಂಬ ಗಾದೆಯಂತೆ ಜನರ ಬದುಕಿನೊಡನೆ ಚಲ್ಲಾಟ ಆಡುತ್ತಾರೆ. ಈ ಆಷಾಢಭೂತಿಗಳು ಹಾರುವನ ಜನಿವಾರ, ಮಾಲೆಗಾರನ ಬಾವಿಯ ಬೊಮ್ಮ, ಬಣಜಿಗನ ಗಣಪತಿ, ಕಂಚುಗಾರನ ಕಾಳಿಕಾದೇವಿ ಇವೆಲ್ಲ ಏನು ? ನಿರ್ಜೀವ ವಸ್ತುಗಳು, ನೂಲಿನ ಎಳೆಗಳು, ಕಲ್ಲು ಹಾಗೂ ಕಂಚಿನ ಮೂರ್ತಿಗಳು ಇವಕ್ಕೆ ಬುದ್ಧಿಯಿದೆಯೆ ? ಜ್ಞಾನಿಯಾಗಿರುವ ಬುದ್ಧಿಯಿರುವ ಮನುಷ್ಯನಿಗಿಂತ ಈ ವಸ್ತುಗಳು ಶ್ರೇಷ್ಠವೆಂದು ಬಿಂಬಿಸುತ್ತಾರೆ. ದೇವ ದೇವತೆಗಳಲ್ಲಿಯೂ ಶ್ರೇಷ್ಠ ಕನಿಷ್ಠ ಎಂಬ ಭೇದ ಭಾವನೆಗಳಿವೆ. ಇದೇ ಧರ್ಮವೆಂಬ ಹಣೆಪಟ್ಟಿಯನ್ನು ಹಚ್ಚಲಾಗಿದೆ. ಧರ್ಮವೆಂದರೆ ಮೋಸ, ವಂಚನೆ, ನಿರ್ದಯ, ಮೈಗಳ್ಳತನ, ಕೊಲೆ - ಸುಲಿಗೆಗಳನ್ನು ಗರ್ಭೀಕರಿಸಿ ಕೊಂಡು ಜನರ ಮೌಢ್ಯತೆಯನ್ನು ದುರುಪಯೋಗಪಡಿಸಿಕೊಳ್ಳುವುದೇ ಧರ್ಮ ವಾಗಿದೆ. ಇಂಥವರನ್ನು ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ ಎಂದು ಹೇಳಿ ಅದರಿಂದ ಹೊರಗೆ ಬಂದವನು ಬಸವಣ್ಣ. ವಚನಸಾಹಿತ್ಯದ ಮೂಲ ಸಿದ್ಧಾಂತವನ್ನು ಮೂಲೆಗೆ ತಳ್ಳಿ ಬಸವಣ್ಣನ ಅನುಯಾಯಿಗಳೆಂದು ಹೇಳಿಕೊಳ್ಳುತ್ತ ಅದೇ ವೈದಿಕ ಧರ್ಮದ ಕೊಳಕನ್ನು ವಚನಸಾಹಿತ್ಯದ ಮೇಲೆ ಚೆಲ್ಲಿದರು, ಪ್ರಚಾರ ಮಾಡಿದರು, ಬಸವಣ್ಣನನ್ನು ವೀರಶೈವ ಧರ್ಮದ ಸಂಸ್ಥಾಪಕನೆಂದೂ ವೀರಶೈವ ಮತೋದ್ಧಾರಕನೆಂದೂ ಹಾಡಿ ಹೊಗಳಿದರು. ಅದನ್ನು ಎಲ್ಲರೂ ನಂಬಿದರು.

ವೈದಿಕರ ಈ ಬಂಗಾರದ ಚೂರಿಗೆ ಜನ ಮರುಳಾದರು. ತಮ್ಮ ಬದುಕನ್ನೇ ಕಳೆದು ಕೊಂಡು ಅನಾಥರಾದರು. ವಿಶ್ವಮಾನ್ಯ ತತ್ವಗಳಾದ ಕಾಯಕ, ದಾಸೋಹ, ಸಹೋದರತೆ ಮತ್ತು ಸಮಾನತೆಯನ್ನು ತಿಳಿ ಹೇಳುವವರು ಯಾರೂ ಇರಲಿಲ್ಲ. ಇದು ಸಾಮಾನ್ಯರಿಗೆ ತಿಳಿಯುವುದಾದರೂ ಹೇಗೆ ?

ಹೀಗೆ ವೀರಶೈವರು ಮಠ ಮಾನ್ಯಗಳನ್ನು ಬೆನ್ನಿಗೆ ಕಟ್ಟಿಕೊಂಡು ವಿಶ್ವಮಾನ್ಯ ತತ್ವಗಳನ್ನು ಗಾಳಿಗೆ ತೂರಿ ಜನರ ಅಜ್ಞಾನವನ್ನು ಮೌಢ್ಯವನ್ನು ಚೆನ್ನಾಗಿ ಬಳಸಿಕೊಂಡು ಜನರ ಕಷ್ಟನಷ್ಟಗಳ ಕಡೆಗೆ ಬೆನ್ನುತೋರಿಸಿ ತಮ್ಮ ಸ್ವಾರ್ಥ ಸಾಧಿಸಿಕೊಂಡರು. ಊರೂರು ಪ್ರಚಾರ ಮಾಡುತ್ತಾ ಸುಲಿಗೆಯನ್ನೇ ತಮ್ಮ ಕಾಯಕವನ್ನಾಗಿ ಮಾಡಿ ಕೊಂಡು ಅಷ್ಟೈಶ್ವರ್ಯಗಳಲ್ಲಿ ಮೆರೆಯುತ್ತಾ ಸ್ವರ್ಗಸುಖದಲ್ಲಿ ತೇಲಾಡಹತ್ತಿದರು. ಷಟ್‌ಸ್ಥಲವೆಂಬ ಗೋಡೆಯ ಕಟ್ಟಿ ಅಷ್ಟಾವರಣವೆಂಬ ಕಬ್ಬಿಣ ಸರಳುಗಳನ್ನು ಬಿಗಿದ ಈ ವೀರಶೈವ ಬಂದೀಖಾನೆಯಲ್ಲಿ ಬಸವಣ್ಣ ಮತ್ತು ಆತನ ಮೂಲ ಸಿದ್ಧಾಂತಗಳು ಬಂದಿಯಾಗಿ ಬಿದ್ದುಬಿಟ್ಟಿವೆ. ಬಸವ ಸಮಿತಿಯವರು, ಮಠಾಧೀಶರು ಈ ಬಂದೀಖಾನೆಯ ಜಬರದಸ್ತ ಕಾವಲುಗಾರರಾಗಿದ್ದಾರೆ ಎಂದು ಹೇಳಲು ನನಗೆ ಯಾವ ಸಂಕೋಚವೂ ಇಲ್ಲ.

ಕೆ. ಡಿ. ಮುತ್ತೂರ
ಮಲ್ಲಮ್ಮ ನಗರ, ಮುಧೋಳ - ೫೮೭ ೩೧೩ ಬಾಗಲಕೋಟೆ ಜಿಲ್ಲೆ

# ಹತ್ತನೆಯ ವಾರ್ಷಿಕೋತ್ಸವ

ಈ ಮೇ ೧೧ಕ್ಕೆ ಭಾರತ ಪೋಖ್ರಾನ್ IIರ ಅಣ್ವಸ್ತ್ರ ಪರೀಕ್ಷೆ ನಡೆಸಿ ಹತ್ತು ವರ್ಷ. ಅಂದಿನಿಂದ ನಮ್ಮ ರಾಷ್ಟ್ರವನ್ನು ಅಣ್ವಸ್ತ್ರ ಶಕ್ತಿಯುಳ್ಳ ರಾಷ್ಟ್ರ ಎಂದು ಗುರುತಿಸಲಾಗಿದೆ.

ಈ ಅವಧಿಯಲ್ಲಿ ಅಣ್ವಸ್ತ್ರ ನಿರೋಧದ ಬಗ್ಗೆ ನಮ್ಮ ರಾಷ್ಟ್ರದ ನಿಲುವಿನಲ್ಲಿ ಬಹಳಷ್ಟು ಬದಲಾವಣೆಯಾಗಿದೆ. ೧೯೯೬ರ ಸುಮಾರಿಗೆ ಅಣ್ವಸ್ತ್ರ ಪ್ರತಿರೋಧಕತೆಯನ್ನು ಮಾನವ ಭಾವನೆಗೆ ತೀವ್ರ ಅಸಹ್ಯಕರವಾದದ್ದೆಂದು ಪರಿಗಣಿಸಬೇಕು; ಏಕೆಂದರೆ, ಅಂತಹ ರಾಷ್ಟ್ರ ತನ್ನ ಅಸ್ತಿತ್ವವನ್ನು ರಕ್ಷಿಸಿಕೊಳ್ಳಬೇಕಾಗಿ ಬಂದಾಗ ತನ್ನ ಮತ್ತು ಶತ್ರುವಿನ ಜನತೆಗೆ ಆಗುವ ಪರಿಣಾಮದ ಬಗ್ಗೆ ನಿರ್ದಯ ಉಪೇಕ್ಷೆಯಿಂದ ವರ್ತಿಸುತ್ತದೆ; ಇದೇ ಆ ಪ್ರತಿರೋಧಕತೆ ಸೂಚಿಸುವುದು. ೧೯೯೬ರ ನಿಲುವು ಹೀಗಿದ್ದರೆ, ೨೦೦೩ರ ಅಣ್ವಸ್ತ್ರ ಸಿದ್ಧಾಂತ ಯಾವ ಅನುಮಾನಕ್ಕೂ ಅವಕಾಶವಿಲ್ಲದ ರೀತಿಯಲ್ಲಿ ಹೇಳಿದ್ದೇನೆಂದರೆ ನಮ್ಮ ದೇಶ ಅಣ್ವಸ್ತ್ರ ನಿರೋಧಕತೆಯನ್ನು ಮುಂದುವರೆಸುತ್ತದೆ, ಎಂದು. ಹೌದು, ನಮ್ಮದು ಕೇವಲ ಕನಿಷ್ಠ ಮಟ್ಟದ ಪ್ರತಿರೋಧಕತೆ ಎಂದೇನೋ ಹೇಳುತ್ತಲೇ ಇದೆ. ಆದರೆ ಈ ಮಟ್ಟ ಯಾವುದು ಮತ್ತು ಇದರ ನಿಯಾಮಕರು ಯಾರು, ತಾವಲ್ಲದೆ ಪ್ರತಿರೋಧಿಯೇ ? ಈ ಗುಣವಾಚಕದಿಂದ ಯಾರೂ ವಂಚಿತರಾಗುವುದಿಲ್ಲ. ಈ ಒಂದು ಧೋರಣೆಯಲ್ಲಾಗಿರುವ ಬದಲಾವಣೆ ಭಾರತದ ನೀತಿ/ಗುರಿಯಲ್ಲಿ ಬಹಳ ಮುಖ್ಯವಾದದ್ದು ಮತ್ತು ಮಹತ್ವವಾದದ್ದು.

ಇದರ ಪರಿಣಾಮವಾಗಿ ಅಂದಿನ ಅಣ್ವಸ್ತ್ರ ಹೊಂದಿದ ಅಮೆರಿಕಾ ಮತ್ತು ಇತರ ರಾಷ್ಟ್ರಗಳು, ಅದರಲ್ಲೂ ಮುಖ್ಯವಾಗಿ ಅಮೆರಿಕಾ, ಪ್ರತಿಬಂಧಕಗಳನ್ನು ಹೇರಿದವು. ಅನಂತರ ಟಾಲ್ಬಟ್ – ಜಸ್ವಂತ್ ಸಿಂಗ್ ಚರ್ಚೆಗಳು ಕಾಲಮಿತಿಯಿಲ್ಲದೆ, ಪ್ರಪಂಚದ ಮೂಲೆ ಮೂಲೆಗಳಲ್ಲಿ ಗ್ರೀನ್‌ಲೆಂಡ್ ಸಹ ಸೇರಿದಂತೆ ನಡೆದೇ ನಡೆದವು. (ಈ ಮಾತು ಕತೆಗಳು ಇಂದಿಗೂ ಗೋಪ್ಯವಾಗಿಯೇ ಉಳಿದಿವೆ.) ಇದರ ಉದ್ದೇಶ ಒಂದೇ: ಹೇಗಾದರೂ ಮಾಡಿ ಭಾರತವು ಜವಾಬ್ದಾರಿಯುತ ಅಣ್ವಸ್ತ್ರ ರಾಷ್ಟ್ರವೆಂದು ಅಮೆರಿಕಾ ಒಪ್ಪಿಕೊಳ್ಳುವಂತೆ ಮಾಡುವುದು. ಆದರೆ ಇದರಲ್ಲೆಲ್ಲಾ ಅನೇಕ ರಿಯಾಯಿತಿಗಳು ಅನಿವಾರ್ಯವಾಗಿ ಒಳಗೊಂಡು ಇದ್ದದ್ದೇ. ಈ ಮಾರ್ಗದಲ್ಲಿ ಬೆಳವಣಿಗೆಗಳು ಬಹುತೇಕ ಮುಂದುವರಿದಿವೆ. ಈ ದಿಶೆಯಲ್ಲಿ ಸರ್ವಶಕ್ತ ಅಮೆರಿಕಾ ಅನುಗ್ರಹಯಾಚಿ ಭಾರತಕ್ಕೆ ನೀಡಿರುವ ಕಿರೀಟಪ್ರಾಯ ಕಜ್ಜಾಯ, ಹಾನಿಸೂಚಕವಾಗಿ ತೂಗಾಡುತ್ತಿರುವ ಭಾರತ - ಅಮೆರಿಕಾ ನಾಗರಿಕ ಅಣುಶಕ್ತಿ ಒಪ್ಪಂದ! ಆದರೆ ಇದರ ಹಿನ್ನೆಲೆಯಲ್ಲಿರುವುದು ಭಾರತ ಒಪ್ಪಿಕೊಂಡಿರುವ ಮಾನಹೀನ ರಿಯಾಯಿತಿಗಳ ದೊಡ್ಡ ಗುಂಪೇ. ಇವುಗಳ ಪರಿಣಾಮ ಭಾರತವನ್ನು ನಿಲ್ಲಿಸಲಾಗದ ರೀತಿಯಲ್ಲಿ ಅಮೆರಿಕಾದ ಕಾಲವ್ಯೂಹಾತ್ಮಕ ಹಿತಾಸಕ್ತಿಗಳಿಗೆ ಕಿರಿಯ ಮಿತ್ರರಾಷ್ಟ್ರವನ್ನಾಗಿ ಕಟ್ಟಿಹಾಕುವುದು. ಅಮೆರಿಕಾದ ಕಾಲವ್ಯೂಹಾತ್ಮಕ ಹಿತಾಸಕ್ತಿಗಳಲ್ಲಿ ರಹಸ್ಯವೇನಿಲ್ಲ. ವಿಶ್ವಾದ್ಯಂತ ರಾಜಕೀಯವಾಗಿ ಎದುರಾಳಿಯಿಲ್ಲದೆ ಸಂಪೂರ್ಣ ಪ್ರಭಾವಶಾಲಿಯಾಗಿರುವುದು; ಎಲ್ಲೇ ಇರಲಿ ನೈಸರ್ಗಿಕ ಸಂಪನ್ಮೂಲಗಳನ್ನೆಲ್ಲಾ ಕಬಳಿಸುವುದು, ಇದಕ್ಕಾಗಿ ಪಾಶವೀ ಸಶಸ್ತ್ರ ಪಡೆಗಳನ್ನು ನಿಯೋಗಿಸುವುದು; ಚತುರತೆಗೆ ಮರುಳಾಗಬಲ್ಲ ದೇಶಗಳನ್ನೆಲ್ಲ ತನ್ನ ಹಿಡಿತದಲ್ಲಿ ಒಟ್ಟುಗೂಡಿಸಿ, ತಾನು ಸ್ವಂತ ಹಿತಾಸಕ್ತಿಗಳಿಗೆ ಹಗೆಗಳೆಂದು ಪರಿಗಣಿಸಿದ ರಾಷ್ಟ್ರಗಳನ್ನು ಅಂಕೆಗೆ ತರಲು ಕಾರ್ಯಗತ ಮಾಡುವ ತೆರೆದ ಮತ್ತು ರಹಸ್ಯವಾದ ಚತುರಚಲನೆ ಮತ್ತು ಕೆಲಸಗಳಲ್ಲಿ ಈ ರಾಷ್ಟ್ರಗಳನ್ನು ಭಾಗಿಗಳಾಗಿ ಮಾಡಿಸುವುದು – ಇವೆಲ್ಲ ಹಿತಾಸಕ್ತಿಗಳ ಅತ್ಯಂತ ಸ್ಪಷ್ಟವಾದ ಅಂಗಗಳು. ಇವುಗಳನ್ನು ಯಾರೂ ಸಹ ನೋಡದೆ ಇರಲಾಗುವುದಿಲ್ಲ. ಹೀಗಿದ್ದರೂ ಭಾರತ ಇವೆಲ್ಲವುಗಳಿಗೂ ಸ್ವಇಚ್ಛೆಯಿಂದ ನುಗ್ಗಿಹೋಗುತ್ತಿದೆ.

ಅದೇ ಕಾಲದಲ್ಲಿ ಭಾರತ ಆಗಲೇ ಒಂದು ಅಣ್ವಸ್ತ್ರ ಶಕ್ತಿಯುತ ರಾಷ್ಟ್ರದ ನಿರ್ದಿಷ್ಟ ಮಾದರಿಯ ಮನೋಭಾವ ಪ್ರದರ್ಶಿಸಲಾರಂಭಿಸಿದೆ. ಇತ್ತೀಚೆಗೆ ಐ.ಎ.ಈ.ಎ.ನಲ್ಲಿ ಅಮೆರಿಕಾದ ಒತ್ತಡದಲ್ಲಿ ಇರಾನಿಗೆ ವಿರುದ್ಧವಾಗಿ ಮತ ನೀಡಿ ಆ ದೇಶದ ಯುರೇನಿಯಂ ಅಭಿವೃದ್ಧಿ ಯಂತ್ರೋಪಕರಣಗಳ ಬಗ್ಗೆ ವ್ಯಕ್ತಗೊಳಿಸಿದ ನಿಲುವು ಒಂದು ನಿರ್ದಿಷ್ಟ ಮಾದರಿಯ ಉದಾಹರಣೆ. ಅಷ್ಟೇ ಅಲ್ಲದೆ ಆ ನಿಲುವನ್ನು ಸಮರ್ಥಿಸುತ್ತ ನಮ್ಮ ಪ್ರಧಾನಿಗಳು ಹೇಳಿದ್ದು ಗಮನಾರ್ಹ : ''ನಮ್ಮ ನೆರೆಹೊರೆಯಲ್ಲಿ ಇನ್ನೊಂದು ಅಣ್ವಸ್ತ್ರ ಶಕ್ತಿಯುಳ್ಳ ರಾಷ್ಟ್ರವಿರುವುದು ನಮಗೆ ಬೇಕಾಗಿಲ್ಲ.'' ಇದೇ ಎಲ್ಲಾ ಪ್ರಬಲ ರಾಷ್ಟ್ರಗಳೂ ಹೇಳುವುದು, ಇತರ ರಾಷ್ಟ್ರಗಳು ಅಣ್ವಸ್ತ್ರಶಕ್ತಿಯುತರಾಗುವ ವಿರುದ್ಧ!

ಇದೇ ಅವಧಿಯಲ್ಲಿ ಭಾರತ ಅಣ್ವಸ್ತ್ರ ನಿರೋಧಕತೆಯನ್ನು ಕಾರ್ಯಗತ ಮಾಡಲು ಬೇಕಾಗಬಹುದಾದ ಉಪಕರಣ, ಸಲಕರಣೆಗಳನ್ನು ಅಸ್ತಿತ್ವಕ್ಕೆ ತರಲು ವ್ಯಸ್ತವಾಗಿದೆ. ಮೊನ್ನೆ ಮೊನ್ನೆ ಸಫಲವಾಗಿ ಹಾರಿಸಿದ ಅಗ್ನಿ III ಕ್ಷಿಪಣಿ ಇತ್ತೀಚಿನ ಕುರುಹು. ಇದನ್ನು ಹೆಚ್ಚಿನ ಮಟ್ಟಕ್ಕೆ ಏರಿಸಿ ಅಗ್ನಿ - V ಕ್ಷಿಪಣಿಯನ್ನು ನಿರ್ಮಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ. ಆಗ ೫೦೦೦ ಕಿ.ಮೀ. ದೂರದ ಲಕ್ಷ್ಯಗಳು ಕ್ಷಿಪಣಿಗಳ ಕ್ಷಮತೆಯಲ್ಲಿ ಸಿಕ್ಕಿರುತ್ತವೆ.

ಈ ಬದಲಾವಣೆ ಹೊಂದಿಕೊಳ್ಳುತ್ತಿರುವ ಭಾರತದ ನೀತಿಗಳನ್ನು ಪರಿಶೀಲಿಸುವಾಗ,



ಅದರಲ್ಲೂ ಎಲ್ಲ ದಿಶೆಗಳಲ್ಲೂ ಮುಂದುವರಿಯುತ್ತಿರುವ ಅಮೆರಿಕಾ ಜೊತೆ ಸಹವರ್ತನೆಯ ಹಿನ್ನೆಲೆಯಲ್ಲಿ, ಬಹಳ ಗಂಭೀರವಾಗಿ ಯೋಚಿಸಬೇಕಾದ ವಿಷಯ: ಇದೆಲ್ಲ ನಮ್ಮ ನೆರೆಹೊರೆಯ ರಾಷ್ಟ್ರಗಳಲ್ಲಿ ನಮ್ಮ ಬಗ್ಗೆ ಉಂಟುಮಾಡುತ್ತಿರುವ ಸಂದೇಹ – ಸಂಶಯ. ನಮ್ಮ ಭವಿಷ್ಯ ನಮ್ಮ ನೆರೆಹೊರೆಯವರೊಂದಿಗೇ ಅಲ್ಲದೆ, ಯಾವುದೋ ದೂರ ದೇಶದ, ಆ ದೇಶ ಈಗ ಎಷ್ಟೇ ಪ್ರಭಾವಶಾಲಿಯಾಗಿದ್ದರೂ, ಕಿರಿಯ/ಗೌಣ ಸಹಯೋಗಿಯಾಗಿ ಅಲ್ಲ, ಎನ್ನುವ ಸ್ಪಷ್ಟ ಮಾರ್ಗವನ್ನು ನಮ್ಮ ಜನತೆ ಅನುಷ್ಠಾನಕ್ಕೆ ತರುತ್ತಾರೆಂಬ ಭರವಸೆ ದೃಢವಾಗಿರಬೇಕು. ಇದಕ್ಕಾಗಿ ಎಲ್ಲರೂ ದುಡಿಯಬೇಕು.

ವೈ. ಪಿ. ಸುಬ್ರಹ್ಮಣ್ಯ



# ಶುಕ್ರಗ್ರಹಕ್ಕೊಂದು ಪ್ರತಿಬಿಂಬ

ಇದುವರೆಗೂ ಬೆಳಗಿನ ಜಾವ ಕಾಣುತ್ತಿದ್ದ ಶುಕ್ರ ಗ್ರಹ ಈಗ ಸಂಜೆಯ ಆಕಾಶಕ್ಕೆ ಪ್ರವೇಶಿಸಿದೆ. ತಿಂಗಳ ಕೊನೆಗೆ ಅದು ಸಂಜೆಯ ಸಂಧ್ಯಾ ಪ್ರಕಾಶದಲ್ಲಿಯೂ ಕಾಣುವಷ್ಟು ಪ್ರಕಾಶಮಾನವಾಗಿ ಪಶ್ಚಿಮ ದಿಗಂತದ ಅಂಚಿನಲ್ಲಿ ಹೊಳೆಯುವುದು. ತಿಂಗಳ ಕೊನೆಯ ದಿನಗಳಲ್ಲಿ ಶನಿಗ್ರಹ ಮತ್ತು ಮಘ ನಕ್ಷತ್ರಗಳೊಡನೆ ಪುಟ್ಟ ತ್ರಿಕೋಣ ರಚಿಸುವುದು. ಆದರೆ ಸಂಜೆಗೆಂಪಿನಲ್ಲಿ ಆ ಎರಡು ಚುಕ್ಕೆಗಳನ್ನು ಗುರುತಿಸುವುದು ಪ್ರಯಾಸದ ಕೆಲಸ.

ತಿಂಗಳ ಕೊನೆಯ ಸಂಜೆ ಶುಕ್ರನನ್ನು ನೋಡಲು ಪಶ್ಚಿಮಕ್ಕೆ ತಿರುಗಬೇಕಷ್ಟೆ. ಹಾಗೆಯೇ ಪೂರ್ವಕ್ಕೆ ತಿರುಗಿದಾಗ ಅಲ್ಲೊಂದು ಫಳಗುಟ್ಟುವ ಚುಕ್ಕೆ ಕಾಣುವುದು. ಶುಕ್ರಗ್ರಹದ ಪ್ರತಿಬಿಂಬವೋ ಎಂಬ ಭ್ರಮೆಯೂ ಉಂಟಾಗಬಹುದು. ಅದು ಗುರುಗ್ರಹ. ೯ರಂದು ಅದರ ವಿಯುತಿ ಅಂದರೆ ಸೂರ್ಯಾಸ್ತವಾಗುವ ಹೊತ್ತಿನಲ್ಲಿ ಇದು ಪೂರ್ವದಲ್ಲಿ ಉದಯಿಸುತ್ತದೆ. ರಾತ್ರಿ ಇಡೀ ನೋಡಲು ಸಿಗುತ್ತದೆ. ಪ್ರಕಾಶವೂ ಗರಿಷ್ಠ. ಧನುರಾಶಿಯಲ್ಲಿ ಆಕಾಶಗಂಗೆಯ ಹರಿವನ್ನೇ ಮಂಕುಗೊಳಿಸುವಷ್ಟು ಪ್ರಕಾಶಮಾನವಾಗಿ ಕಾಣುತ್ತದೆ. ೧೭ರ ಹುಣ್ಣಿಮೆಯ ಚಂದ್ರನ ಬೆಳಕಿನಲ್ಲಿಯೂ ಸುಲಭವಾಗಿ ಗುರುತಿಸಬಹುದು. ಹುಣ್ಣಿಮೆಯ ನಂತರದ ರಾತ್ರಿಗಳಲ್ಲಿ ಇದರ ಆಸುಪಾಸಿನ ಆಕಾಶಗಂಗೆಯ ಭಾಗವನ್ನು ದುರ್ಬೀನಿನಿಂದ ವೀಕ್ಷಿಸಬಹುದು.

ಮೋಡಗಳು ಬಿಡುವು ಕೊಟ್ಟಾಗ ಸಂಜೆಯ ಆಕಾಶದಲ್ಲಿ ಗಮನಿಸಬೇಕಾದ ಘಟನೆ ಇನ್ನೂ ಒಂದಿದೆ. ಮಂಗಳ ಮತ್ತು ಶನಿ ಗ್ರಹಗಳ ಸಮಾಗಮ. ತಿಂಗಳ ಆರಂಭದಲ್ಲೇ ಜೋಡಿಯಂತೆ ಕಾಣುವ ಈ ಎರಡು ಚುಕ್ಕೆಗಳು ಸಂಜೆಯ ಆಕಾಶದಲ್ಲಿ ಪಶ್ಚಿಮದಲ್ಲಿ ಕಾಣುವುವು. ೧೧ರಂದು ಅವುಗಳ ಅಂತರ ಕನಿಷ್ಠ. ಮಧ್ಯೆ ಪೂರ್ಣ ಚಂದ್ರನನ್ನು ಕೂಡಿಸಬಹುದಾದಷ್ಟು ಜಾಗ ಮಾತ್ರ. ೬ರಂದು ಈ ಎರಡೂ ಚುಕ್ಕೆಗಳು ಬಾಲಚಂದ್ರನೂ ಸೇರಿ ಕ್ಯಾಮರಾ ಇದ್ದವರನ್ನು ಕೆಣಕುತ್ತದೆ. ತಿಂಗಳುದ್ದಕ್ಕೂ ಇವುಗಳ ಚಲನೆಯನ್ನು ಗಮನಿಸಬಹುದು. ಮಘ ನಕ್ಷತ್ರದ ಸಮೀಪ ಕಾಣುವ ಮಂಗಳ ಸುಮಾರು ಒಂದು ವಾರದಲ್ಲಿ ಶನಿಗ್ರಹವನ್ನು ಸಮೀಪಿಸುವುದು. ೧೧ರ ನಂತರ ಪುನಃ ದೂರ ಸರಿಯುವುದು. ತಿಂಗಳ ಕೊನೆಗೆ ಈ ಅಂತರ ಸ್ಪಷ್ಟವಾಗಿ ಗೋಚರಿಸುವುದು. ದಿಗಂತದಿಂದ ಮಂಗಳ ಒಂದೇ ಎತ್ತರದಲ್ಲಿ ತಟಸ್ಥವಾಗಿರುವಂತೆ ಕಾಣಬಹುದು. ಆದರೆ ವಾಸ್ತವವಾಗಿ ಮಂಗಳ ಮೇಲೇರುತ್ತದೆ. ಶನಿ ಮತ್ತು ಮಘ ದಿನದಿನಕ್ಕೆ ದಿಗಂತದತ್ತ ಸರಿದು ಸಂಜೆಗೆಂಪಿನಲ್ಲಿ ಕಳೆದುಹೋಗುತ್ತದೆ.

ಬರಿಗಣ್ಣಿಗೆ ಕಾಣುವ ಇನ್ನೊಂದು ಗ್ರಹ ಬುಧವನ್ನು ನೋಡಲು ಈ ತಿಂಗಳಲ್ಲಿ ಒಳ್ಳೆಯ ಅವಕಾಶವಿದೆ. ೧ನೇ ತಾರೀಖು ಬೆಳಗಿನ ಜಾವ ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ಸಂಜೆಗೆಂಪಿನಲ್ಲೂ ಇದನ್ನು ಕಾಣುವುದು ಸಾಧ್ಯ. ಅದರ ಪಕ್ಕದಲ್ಲಿ ಕಾಣುವ ಇನ್ನೊಂದು ಕೆಂಪು ಚುಕ್ಕೆಯೇ ರೋಹಿಣಿ. ಆ ಮುಂದೆ ದಿನದಿನಕ್ಕೆ ದಿಗಂತದತ್ತ ಧಾವಿಸುವ ಬುಧ ಕಾಣದಂತಾಗುತ್ತದೆ. ತಿಂಗಳ ಕೊನೆಗೆ ಸೂರ್ಯನ ಜೊತೆಗೂಡುತ್ತದೆ. ಆ ಮುಂದೆ ಸಂಜೆ ಆಕಾಶಕ್ಕೆ ಹೊರಳುವುದರ ಸಂಕೇತ ಇದು.




ಭೂಮಿಯ ಕಕ್ಷೆ ಪರಿಪೂರ್ಣ ವೃತ್ತವಲ್ಲ; ದೀರ್ಘವೃತ್ತ. ಈ ತಿಂಗಳ ೩ರಂದು ಸೂರ್ಯ-ಭೂಮಿ ಅಂತರ ಗರಿಷ್ಠ ಮುಟ್ಟುತ್ತದೆ. ಇದು ಕೇವಲ ಲೆಕ್ಕಾಚಾರದ ಮಾತು. ಈ ಗರಿಷ್ಠ ಕನಿಷ್ಠಗಳ ಅಂತರದ ಪ್ರಭಾವ ನಮಗೆ ಅರಿವಾಗುವುದೇ ಇಲ್ಲ.

ಆಗಸ್ಟ್ ೧ರಂದು ಗ್ರಹಣವಿದೆ. ಪಾರ್ಶ್ವಗ್ರಹಣ ಸಂಜೆ ಕಾಣುವುದರಿಂದ ಅನುಕೂಲವೊಂದಿದೆ. ಸೂರ್ಯನಿಗೆ ಬೆನ್ನು ಹಾಕಿ ನಿಂತು ಗೋಡೆಯ ಮೇಲೆ ಮರದ ನೆರಳನ್ನು ನೋಡಿದರೆ ಸಾಕು. ಗ್ರಹಣದ ಪುಟ್ಟ ಪುಟ್ಟ ಬಿಂಬಗಳು ಕಾಣುವುವು. ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿಯ ಕಾರಣ ತಿಂಗಳುದ್ದಕ್ಕೂ ಉಲ್ಕೆಗಳು ಕಾಣುತ್ತವೆ. ಗರಿಷ್ಠ ಚಟುವಟಿಕೆ ೨೭ರಂದು. ಮುಂದಿನ ತಿಂಗಳು ಗರಿಷ್ಠ ಚಟುವಟಿಕೆ ಪಡೆಯುವ ಪರ್ಸಿಯೈಡ್ ಉಲ್ಕಾವೃಷ್ಟಿ ಕೂಡ ಈ ತಿಂಗಳಲ್ಲಿಯೇ ತನ್ನ ತುಣುಕುಗಳನ್ನು ಉದುರಿಸುತ್ತದೆ. ಒಟ್ಟಿನಲ್ಲಿ ಬೆಳಗಿನ ಜಾವ (ಶುಭ್ರ ಆಕಾಶವಿದ್ದರೆ) ಉಲ್ಕೆಗಳ ದರ್ಶನವಂತೂ ಖಚಿತ. ಯಾವ ಉಲ್ಕೆ ಯಾವ ವೃಷ್ಟಿಯದು ಎಂದು ಪತ್ತೆ ಮಾಡುವುದೇ ಸವಾಲು.



ಜುಲೈ ೬ರ ಸಂಜೆ ಚಂದ್ರ, ಮಘ, ಮಂಗಳ ಮತ್ತು ಶನಿ

### ಖಗೋಳ ದಿನಚರಿ

೧ ಮಂಗಳ-ಮಘ ಜೋಡಿ, ಬುಧದ ಗರಿಷ್ಠಕೋನೋನ್ನತಿ*
೩ ಅಮಾವಾಸ್ಯೆ ೦೭.೪೯ಕ್ಕೆ, ಶುಕ್ರ-ಚಂದ್ರ ಜೋಡಿ
೪ ಭೂಮಿ-ಸೂರ್ಯ ಗರಿಷ್ಠ ಅಂತರದಲ್ಲಿ
೬ ಚಂದ್ರ-ಮಂಗಳ-ಶನಿ-ಮಘ ಸಮಾಗಮ*
೯ ಗುರುಗ್ರಹದ ವಿಯುತಿ
೧೦ ಚಾಂದ್ರಮಾಸದ ಮೊದಲ ಪಾದ
೧೧ ಶನಿ-ಮಂಗಳ ಕನಿಷ್ಠ ಕೋನದಲ್ಲಿ*
೧೪ ಚಂದ್ರ-ಜ್ಯೇಷ್ಠಾ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
೧೭ ಗುರು-ಚಂದ್ರ ಜೋಡಿ*
೧೮ ಹುಣ್ಣಿಮೆ ೧೩.೨೯ಕ್ಕೆ
೨೦ ನೆಪ್ಚೂನ್ ಆಚ್ಛಾದನೆ
೨೫ ಚಾಂದ್ರಮಾಸದ ಕೊನೆಯ ಪಾದ
೨೭ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೯ ಸೂರ್ಯ-ಬುಧ ಜೋಡಿ (ವಿಯುತಿ)
ಆಗಸ್ಟ್ ೧ ಸೂರ್ಯಗ್ರಹಣ ೧೬ ಗ. ೪೨.ನಿ ೧೮ ಗಂ.ವರೆಗೆ
೨. ಶುಕ್ರ-ಶನಿ-ಚಂದ್ರ ಸಮಾಗಮ, (*ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)


ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

**ಕೆ**ಳೆದ ಮೂವತ್ತೈದು ವರ್ಷಗಳಿಂದ ರಾಸೂರಿನ ಪಂಚಾಯತಿಯ ಚೇರಮನ್ ಕುರ್ಚಿ ಬಸವೇಗೌಡರನ್ನು ಬಿಟ್ಟರೆ ಇನ್ನೊಬ್ಬರ ಕಡೆಗೆ ಮಳ್ಳಿಗಣ್ಣಿನಿಂದಲೂ ಕೂಡ ದೃಷ್ಟಿ ಹಾಯಿಸಿಲ್ಲ. ಶ್ರೀರಾಮಚಂದ್ರನು ಸೀತಾ ಮಾತೆಯಲ್ಲಿ ಹ್ಯಾಗೆ ನಿಷ್ಠೆ ಇಟ್ಟುಕೊಂಡು ಏಕಪತ್ನಿ ವ್ರತವನ್ನು ಪಾಲಿಸಿಕೊಂಡು ಬಂದು ಆದರ್ಶ ವ್ಯಕ್ತಿ ಅನಿಸಿಕೊಂಡನೋ ಹಾಗೆ ಬಸವೇಗೌಡರೂ ಕೂಡ ಪಂಚಾಯತಿ ಚೇರಮನಗಿರಿಯನ್ನು ಬಿಟ್ಟು ಎಂದೂ ಇನ್ನೊಂದು ಅಧಿಕಾರಕ್ಕೆ ಆಶೆಪಟ್ಟವರಲ್ಲ. ಒಮ್ಮೆ ಶೇಳಗಿ ಸಿದ್ದಪ್ಪನವರು ಸಲುಗೆಯಿಂದ ಹೇಳಿದ್ದರು, ''ಬಸವೇಗೌಡ್ರೆ, ಈ ರಾಸೂರಿನ ಸೇವಾ ಸಾಕು. ಇನ್ನ ಮ್ಯಾಲೆ ಬೆಂಗಳೂರಿಗೆ ಗಾಡಿ ಬಿಡ್ರಿ. ಮುಂದಿನ ಎಲೆಕ್ಷನ್ಕ ನಿಮಗೆ ತಿಕೀಟ ಕೊಡ್ಸೋ ಜವಾಬ್ದಾರಿ ನಂದು'' ಅಂದರಂತೆ. ರಾಮಚಂದ್ರ ಎಂಪಿಯವರೂ ಕೂಡ ದಿಲ್ಲಿಗೆ ಕರೆದುಕೊಂಡುಹೋಗುವ ಆಮಿಷ ತೋರಿಸಿದ್ದರು. ಬಸವೇಗೌಡರು ಯಾವುದಕ್ಕೂ ಮಣಿದಿರಲಿಲ್ಲ. ''ದಿಲ್ಲಿ ಬೆಂಗಳೂರು ಎಲ್ಲಾ ನಿಮಗೇ ಇರ್ಲಿ. ನನಗೆ ನಮ್ಮ ರಾಸೂರೇ ಸಾಕು. ದಿಲ್ಲಿ ಬೆಂಗಳೂರು ಶಾಶ್ವತ ಅಲ್ಲ. ನಾಕಾರು ದಿನ ಮಜಾ ಮಾಡಿ ಬರ್ಲಿಕ್ಕಷ್ಟೇ ಸೈ. ಒಮ್ಮೆ ಅಲ್ಲಿನ ಚ್ಯಾಳಿ ಬಿತ್ತು ಅಂದ್ರ ಮನಷ್ಯಾ ಅಗಸನ ನಾಯಿ ಹಾಂಗ ನ ಘರ್ ಕಾ ನ ಘಾಟ್ ಕಾ ಆಗಿಬಿಡ್ತಾನ'' ಎಂದು ನಯವಾಗಿ ಕಣ್ಣು ಮಿಟುಕಿಸುತ್ತ ಮುಗುಳ್ನಗೆ ಬೀರಿ ಜಾರಿಕೊಳ್ಳುತ್ತಿದ್ದರು.

ರಾಸೂರಿನ ಬಗ್ಗೆ ಇಷ್ಟೊಂದು ಪ್ರೀತಿ, ನಿಷ್ಠೆ ಬೆಳೆಸಿಕೊಂಡಿದ್ದರಿಂದಲೇ ಇವೊತ್ತಿನವರೆಗೆ ಯಾವ ಜಾಮರ್ದನಿಗೂ ಅವರ ವಿರುದ್ಧ ದನಿ ಎತ್ತಿ ಮಾತಾಡುವ ಧೈರ್ಯ ಇರಲಿಲ್ಲ. ಇತ್ತೀಚೆಗೆ ಪೊಲೀಸಗೌಡ್ರು, ಮಾಲಿಗೌಡ್ರು, ಬಿರಾದಾರ್ರು, ಕುಲಕರ್ಣೇರು, ಸಾವಕಾರರ ಮಕ್ಕಳು ಹಳ್ಳಿ ಶಾಲೆ ಮುಗಿಸಿ ಕಲಬುರ್ಗಿಯವರೆಗೆ ಕಲಿಯಲು ಹೋಗಿ, ಅಲ್ಲಿಯ ಥಳಕು-ಬಳುಕಿಗೆ ಮಾರುಹೋಗಿ ಹೆಚ್ಚೂ ಕಡಿಮೆ ಶ್ಯಾರದವರೇ ಆಗಿಬಿಟ್ಟು ರಾಸೂರಿನ ರಾಜಕೀಯದಲ್ಲಿ ಮೂಗು ತೂರಿಸಬೇಕು ಅನ್ನುವಷ್ಟು ತಿಳುವಳಿಕೆ ಬೆಳೆಸಿಕೊಳ್ಳಲಿಲ್ಲ. ಹಿಂಗಾಗಿ ಬಸವೇಗೌಡರು ಒಂದು ರೀತಿಯಿಂದ ರಾಸೂರಿನ ಅಜಾತಶತ್ರುವಾಗಿ, ಏಕಛತ್ರಾಧಿಪತಿಯಾಗಿ ರಾಸೂರಿನ ಪಂಚಾಯಿತಿ ಎಂಬ ಸಾಮ್ರಾಜ್ಯವನ್ನು ನಿಷ್ಕಂಟಕವಾಗಿ ಆಳಿಕೊಂಡು ಬಂದಿದ್ದರು.

ಆದರೆ ಇತ್ತೀಚೆಗೆ ಬಂಜಾರ ಕೇರಿಯ ಹೈದರು ಸರಕಾರಿ ಸೌಲತ್ತು ಪಡೆದು ಕಲ್ಬುರ್ಗಿವರೆಗೆ ಕಲಿಯಲು ಹೋಗಿ, ಅಲ್ಲಿಂದ ಮುಂದೆ ಬೆಂಗಳೂರಿಗೂ ತಂಗಳೂರಿಗೂ ಮತ್ತೆನ್ನೆಲ್ಲಿಗೂ ಹೋಗಿ ಕಲಿತು ಶ್ಯಾಣ್ಯಾರಾಗಹತ್ತಿದರು. ಹಿಂದೆ ಅಪ್ಪ ಗಳಿಸಿದ ಆಸ್ತಿ ಇದ್ದಿದ್ದರೆ ಅವರೂ ಶ್ಯಾರಿನ ಥಳಕು-ಬಳಕಿನ ಸುಳಿಗೆ ಸಿಕ್ಕು ಗೋತಾಹೊಡೀತಿದ್ದರೂ ಏನೋ! ಆದರೆ ಹಂಗಾಗಲಿಲ್ಲ. ಮನಸ್ಸು ಕೊಟ್ಟು ಓದಹತ್ತಿದರು, ಓದಿದ್ದನ್ನು ಮನನ ಮಾಡಹತ್ತಿದರು, ಮನನ ಮಾಡಿದುದರ ಬಗ್ಗೆ ಚಿಂತನೆ ಮಾಡಹತ್ತಿದರು. ಬಂಜಾರ ಕೇರಿ ಹೈದರು ತನಗೆ ಎಂದೂ ಪ್ರತಿಸ್ಪರ್ಧಿಗಳು ಆಗಲಾರರು ಎಂಬ ನಂಬಿಕೆ ಬಸವೇಗೌಡರಿಗೆ ಇತ್ತು. ಹಿಂಗಾಗಿ ಆ ಹೈದರ ಪ್ರಗತಿಯನ್ನು ಕಂಡು ಕರುಬುವ ಬದಲು, ದಿಗಿಲುಗೊಳ್ಳುವ ಬದಲು, ಹೆಮ್ಮೆಪಡುತ್ತಿದ್ದರು. ಅವರ ಮನೆಗಳಿಗೆ ಹೋಗಿ ಅವರ ತಾಯಿ-ತಂದೆಗಳ ಜೊತೆಗೆ ಹೊರಸಿನ ಮ್ಯಾಲೆ ಕುಳಿತು ಅವರ ಮಕ್ಕಳ ಗುಣಗಾನ ಮಾಡುತ್ತಿದ್ದರು. ಹೀಂಗಾಗಿ ಬಂಜಾರ ಕೇರಿ ಅಂಬಾದು ಬಸವೇಗೌಡರ ಕೇರೀನೇ ಆದಂಗಿತ್ತು.

ಹೆಚ್ಚೂ ಕಡಿಮೆ ಒಂದು, ಒಂದೂವರೆ ವರ್ಷದ ಹಿಂದಿನ ಮಾತು. ಬಂಜಾರ ಕೇರಿಯ ಸಿಂಗೇರ ಮಲ್ಲವ್ವನ ಮಗ ಬೆಳ್ಳಪ್ಪ ಅದೇನೋ ಎಂ.ಎ. ಪಾಸು ಮಾಡಿದ ಸುದ್ದಿ ಬಂದಿತು. ಮಲ್ಲವ್ವನ ಗಂಡ ಸೈಬಣ್ಣ ಯಾತರೊಳಗೂ ಇಲ್ಲದ ಸಾಧೂ ಮನುಷ್ಯ. ಹಿಂಗಾಗಿ ಬಂಜಾರ ಕೇರಿ ಸಿಂಗೇರ ಸೈಬಣ್ಣನಕ್ಕಿಂತ ಆತನ ಹೆಣ್ತಿ ಮಲ್ಲವ್ವಂದೇ ಜೋರು. ಊರ ಮಂದಿಗೆಲ್ಲ ಬೆಳ್ಳಪ್ಪಗ ಮಲ್ಲವ್ವನ ಮಗ ಅಂದ್ರೇನೇ ಗುರುತು ಹತ್ತತ್ತಿತ್ತು. ಅಂಥ ಮಲ್ಲವ್ವನ ಮಗ ಬೆಳ್ಳಪ್ಪ ಎಂ.ಎ. ಪಾಸುಮಾಡಿ ಊರಿಗೆ ಬರೋ ದಿನ ಖುದ್ ಬಸವೇಗೌಡರೇ ಮುಂದಾಗಿ ಜೋಡೆತ್ತಿನ ಗಾಡಿಯ ಮೇಲೆ ಬಡಿಗೇರ ಮೋನಪ್ಪನಿಂದ ವಿಮಾನ ಕಟ್ಟಿಸಿ, ಇಸ್ಲಾಂಪೂರ ಶಿವಾನಂದನಿಂದ ಅದನ್ನು ಅಲಂಕರಿಸಿ, ಅದರಲ್ಲಿ ಬೆಳ್ಳಪ್ಪನ್ನ ಕೂಡಿಸಿ ಊರ ತುಂಬ ಮೆರವಣಿಗೆ ಮಾಡಿಸಿದ್ದರು. ಬೆಳ್ಳಪ್ಪನ ಆ ಐಸಿರಿ ಕಂಡು ಊರಂಥ ಊರಿನ ಜನರ ಕಣ್ಣುಗಳಲ್ಲಿ ಆನಂದದ ಬಾಷ್ಪಗಳು ಉಕ್ಕಿಬಂದಿದ್ದವು.

ತಮ್ಮ ಕೇರಿಯವನಲ್ಲ, ಕುಲಗೋತ್ರದವನಲ್ಲ ಆದರೂ ಊರ ಹೊರಗಿನ ಬಂಜಾರ ಕೇರಿಯ ಬೆಳ್ಳಪ್ಪನಿಗೆ ಇಷ್ಟೊಂದು ಸನ್ಮಾನ ಮಾಡಿದ್ದು ಸಣ್ಣ ಮಾತಲ್ಲ. ಇದರಲ್ಲಿ ಬೆಳ್ಳಪ್ಪನ ಸಾಧನೆಗಿಂತ ಮಿಗಿಲಾಗಿ ಬಸವೇಗೌಡರ ಘನತೆ ಎದ್ದುಕಾಣುತ್ತಿತ್ತು. ಮೆರವಣಿಗೆ ನೋಡಲು ರಸ್ತೆಯ ಇಕ್ಕೆಲಗಳಲ್ಲಿ ಸೇರಿದ್ದ ಜನರಲ್ಲಿ ಮಾತು ಕೇಳಿಸುತ್ತಿತ್ತು –

''ಬಸವೇಗೌಡ ಎಂಥ ದೊಡ್ಡ ಮನುಷ್ಯಾ !''

# ಒಳಗಿನವನು

**ಭಾಲಚಂದ್ರ ಜಯಶೆಟ್ಟಿ**



''ಹೌಂದೇ ಯಕ್ಕಾ! ಖಾಸಾ ಮಗ ಇದ್ರೂ ಇಷ್ಟು ಐಸಿರಿ ಮಾಡ್ತಿದ್ನೇ ಇಲ್ಲೋ !''

''ಸಾಲಿಮ ಊರಿಗೇನೇ ಸಂದೀ ಇದ್ದಾಂಗ ಹಾನ. ಅಂವನ ಹೊಟ್ಟಿ ತಣ್ಣಗಿರ್ಲಿ !''

''ಗೌಡನ ಬಲ್ಲಿ ಒಳಕೇರಿ ಹೊರಕೇರಿ ಅಂಬಾ ಭೇದ ಇಲ್ಲ. ನೋಡು. ಬೆಳ್ಳಪ್ಪ ತನ್ನ ಮಗಾನೇ ಅಂತ ತಿಳ್ಕೊಂಡಾನ ಗೌಡ !''

''ಇಂಥ ಮುತ್ತಿನಂಥ, ಊರಿಗೆ ಕೀರ್ತಿ ತರುವಂಥ ಮಕ್ಕಳಿದ್ರ ಯಾರಿಗೆ ಕೀರ್ತಿ ಬರಾಂಗಿಲ್ಲೇಳು ?''

ಅಲ್ಲೇ ಜನಸಂದಣಿಯಲ್ಲಿದ್ದ ಮಲ್ಲವ್ವನ ಕಿವಿಗೆ ನೇರವಾಗಿ ಈ ಮಾತುಗಳು ಬೀಳುತ್ತಿದ್ದುವು. ಮಗನ ಏಳಿಗೆಯನ್ನು ಕಾಣುವುದರಲ್ಲಿ ಮೈಮರೆತುಹೋಗಿದ್ದ ಅವಳಿಗೆ ಈ ಮಾತುಗಳನ್ನು ಕೇಳಿ [illegible] ದೇಹವು ರೋಮಾಂಚನಗೊಂಡಿತು. ತುಟಿಗಳು ಅದುರಿದವು. ಏನೋ ಮಾತು ಹೊರಕ್ಕೆ ನುಗ್ಗಿ ಬರುವ ಪ್ರಯತ್ನದಲ್ಲಿ ಒಳ ತುಟಿಗೆ ಸಿಕ್ಕಿ [illegible]. [illegible] ಸಂಯಮದ ಬೀಗ ಹಾಕಿ ಮಲ್ಲವ್ವ ಬಾಯಿಗೆ [illegible] ಹೆಪ್ಪು ಹಾಕಿದಳು.

* * *

ಮುಂದೊಂದು ದಿನ ಪ್ರಕಾಶ [illegible] ಸುದ್ದಿ ಬಂತು. ಈ ಪ್ರಕಾಶ ಯಾರು ಎಂದೇ [illegible]

ಬೇಕಿಲ್ಲ. ಮಲ್ಲವ್ವನ ಮಗ ಬೆಳ್ಳಪ್ಪನೇ ಈಗ ಪ್ರಕಾಶ ಆಗ್ಯಾನ. ಮದುವ್ಯಾಗಿ ಏಳು ವರ್ಷ ಆದ್ರೂನೂ ಮಲ್ಲವ್ವನ ನೀರು ನಿಂತರಲೇ ಇಲ್ಲ. ಬಂಜಾರ ಕೇರಿಗೇ ಏನು ಶಾಪ ತಗುಲಿತ್ತೋ ಗೊತ್ತಿಲ್ಲ, ಕೇರಿಗೆ ಬಂದ ಹೊಸ ಗರತೇರಹಾಂಗ ಮಲ್ಲವ್ವನ ಸೂಲಾನೂ ಭಾಳ ದೂರ ಇರಬೇಕು ಅಂತ ತಿಳಿದು ಅದರ ಬಗ್ಗೆ ಯಾರೂ ತಲೆಕೆಡಿಸಿಕೊಂಡಿರಲಿಲ್ಲ. ಆದರೆ ತಾನೆಲ್ಲಿ 'ಬಂಜೆ' ಎಂಬ ಅಪವಾದಕ್ಕೆ ಬಲಿಯಾಗ್ತೇನೋ ಎಂಬ ನೋವು ಮತ್ತು ದಿಗಿಲು ಮಲ್ಲವ್ವನ ಮನಸ್ಸಿನಲ್ಲಿ ಕೊರೆಯುತ್ತಲೇ ಇತ್ತು. ಹಾಣಾದಿ ಹಳ್ಳದ ಎಲ್ಲಮ್ಮ, ಹೊಲಗೇರ್‍ಯಾನ ಮಾರೆಮ್ಮಗ, ಸಿವಾರದ ಕೊಕಲಮ್ಮಗ ಹರಕೆ ಹೊತ್ತಳು. ''ಅಲ್ಲs ಮಲ್ಲೀ! ಹೆಣ್ಣ ದೇವ್ರು ಎಂದಾರೆ ಹೆಣ್ಣಿಗೆ ಒಲೀತಾವೇನೆ? ಒಂದು ಹೆಣ್ಣಿಂದು ಛಲೋ ಆಗೋದು ಇನ್ನೊಂದು ಹೆಣ್ಣಿಗೆ ಸಹಿಸಲಿಕ್ಕಾಗಲ್ಲ. ಅದು ಮನುಷ್ಯಾರ ಜಾತಿ ಹೆಣ್ಣರಬೌದು, ದೇವರ ಜಾತೀ ಹೆಣ್ಣರಬೌದು, ಎಲ್ಲಾ ಒಂದೆ, ತಿಳ್ಕೋ. ಬೇಕಾರ ನಿನ್ನ ಗಂಡ ಸೈಬಣ್ಣಗ ಯಾವುದರ ಹೆಣ್ಣ ದೇವ್ರಿಗೆ ಸ್ವಾರೆಕಾಯಿ ಸೇವಾ ಮಾಡ್ಲಾಕ ಹೇಳು. ಗಣಸಂತ ಅವನಿಗಿ ಒಲೀದ್ರೂ ಒಲೀಬಹುದು. ಆಗ ಗಕ್ಕಂತ ನಿನ್ನ ಸೆರಗ ನಿಂತ್ರೂ ನಿಲ್ಲಬೌದು. ನನ್ನ ಮಾತು ಸುಳ್ಳಲ್ಲ'' ಎಂದು ಒಬ್ಬ ವಾರಗಿತ್ತಿ ಕಳಕಳಿಯಿಂದ ಸಲಹೆ ಮಾಡಿದಳು.

ಮಲ್ಲವ್ವ ಈ ವಿಚಾರನ್ನ ಗುಟ್ಟಾಗಿ ತನ್ನ ಗಂಡ ಸೈಬಣ್ಣನಿಗೆ ತಿಳಿಸಿದಳು. ಆತ ಒಮ್ಮೆಲೇ ಬೆಂಕಿ ಕೆಂಡವಾಗಿ ಸಿಡಿದುಬಿದ್ದ. ''ರಾಸೂರ ಪ್ಯಾಟ್ಯಾಗ ಹೆಣ್ಣ ದೇವ್ರಿಗೆ ನಾನು ಸ್ವಾರೆಕಾಯಿ ಸೇವಾ ಮಾಡೋದಂದ್ರೇನು? ಸರೀಕದವ್ರು ಏನಂತಾರ! ಪೋಣೇ ಆತ ನನಮಗ, ಸ್ವಾರೆಕಾಯಿ ಸೇವಾ ಮಾಡಲಕತ್ಯಾನ ಅಂತ ಆಡಿಕೊಳ್ಳಾಂಗಿಲ್ಲೇನು? ಈಗ ನನ್ನಲ್ಲಿ ಏನ ದೋಷ ಕಂಡ ಬಂದದ? ನಾ ಕಮಕುವ್ವತ ಅನಿಸ್ತೀನೇನು ನಿನಗ? ನಿನಗ ಖುಷಿ ಕೊಡ್ತೀನೋ ಇಲ್ಲೋ?'' ಎಂದು ಜಬರಿಸಿ ಹೆಂಡತಿಯ ಬಾಯಿ ಮುಚ್ಚಿಸಿದ್ದ.

ಮಲ್ಲವ್ವ ಬಾಯಿಮುಚ್ಚಿಕೊಂಡು ಕೆಲವು ದಿನ ಸುಮ್ಮನಿದ್ದಳು. ಆದರೆ ತಾನು ತಾಯಿಯಾಗಬೇಕೆಂಬ ಹಂಬಲ ಆಕೆಗೆ ನೆಗ್ಗಿಲ ಮುಳ್ಳಾಗಿ ಹಗಲೂ ರಾತ್ರಿ ಒಂದೇ ಸವನೇ ಚುಚ್ಚುತ್ತಲೇ ಇತ್ತು. ''ರಾಸೂರಾಗ ದೇವಿ ಸೇವಾ ಮಾಡ್ಲಾಕ ನಿನಗ ಧೈರ್ಯಾ ಇರಲಿಲ್ಲಂದ್ರ ದೂರದೂರಿಗಿ, ಚುಂಚೂರ ಮಾಪುರತಾಯಿಗಿ ಸೇವಾ ಸಲ್ಲಿಸಿ ಬರೋಣ. ಮಾಪುರತಾಯಿ ಬೆಂಕಿಯಂಥ ದೇವಿ. ಆಕಿ ನಮ್ಮ ಸೇವಾ ಒಪ್ಕೊಂಡಳಂದ್ರ ಇನ್ನೇನ ಕೇಳ್ತಿ! ಉಡಿ ಚಾಚಿ ಹೋದಾವ್ರಿಗೆ ಆಕಿ ಎಂದೂ ಖಾಲಿ ಕೈಲೆ ವಾಪಸ ಕಳಿಸಿಲ್ಲ. ಏನಂತಿ? ಊರಾಗ ಯಾರಿಗೂ ಕಾಣೋಕಾನ ಖಬರ ಇಲ್ದಂಗ ಹೋಗಿ ಬರೋಣಂತ.'' ಗಂಡನ ಲಹರಿ ನೋಡಿಕೊಂಡು ಒಮ್ಮೆ ಮಲ್ಲವ್ವ ಅವನ ಮನಸ್ಸಿನಲ್ಲಿ ಆಶೆಯ ಬೀಜ ಬಿತ್ತಿದಳು. ತನ್ನ ತಾಕತ್ತು ಸಾಬೀತುಪಡಿಸಬೇಕಾದರೆ ತಾನೂ ತಂದೆಯಾಗಲೇ ಬೇಕು ಎಂದು ಒಳಗೊಳಗೇ ಸೈಬಣ್ಣನಿಗೂ ಚಿಂತೆಯಾಗಿತ್ತು. ಹೆಂಡತಿಯ ಈ ಸಲಹೆ ಆತನಿಗೆ ಹಿಡಿಸಿತು. ಮುಂದೊಂದು ದಿನ ಅಂಬಲಗಿ ಜಾತ್ರಿಯ ನೆವ ಮಾಡಿಕೊಂಡು ಗಂಡಹೆಂಡತಿ ಇಬ್ಬರೂ ಅಡ್ಡಾರ್ಗದಿಂದ ಚುಂಚೂರು ಹಾದಿ ಹಿಡಿದರು.

ಅಲ್ಲಿ ಗಂಡ ಹೆಂಡತಿ ಇಬ್ಬರೂ ಜೋಡಿಲೆ ಭಯಭಕ್ತಿಯಿಂದ ಮಾಪುರತಾಯಿಗೆ ಬೆತ್ತಲೆ ಸೇವೆ ಸಲ್ಲಿಸಿದರು. ಬೇರೆಯವರ ಪರಸಿಯಲ್ಲಿ ತಾವೂ ಒಂದಿಷ್ಟು ಹಣ ಕೊಟ್ಟು ನೇವ್ದ್ಯಾ ಮಾಡಿದರು. ಅದೇ ಪರಸಿಯಲ್ಲಿ ಹೊಟ್ಟೆ ಬಿರಿಯುವಷ್ಟು ಉಂಡು ಗಿಡದ ಕೆಳಗೆ ಅಡ್ಡಾದವರು ಎಚ್ಚರಾದಾಗ ನಡುರಾತ್ರಿ ಮೀರಿ ಹೋಗಿತ್ತು. ಮಲ್ಲವ್ವ ಮಗ್ಗುಲಲ್ಲಿ ಕೈಯಾಡಿಸಿ ನೋಡಿದಳು. ಸೈಬಣ್ಣ ಇರಲಿಲ್ಲ. ನರೋಣಾದ ಜೋಗಿತಿ ಮಧ್ಯಾಹ್ನದಿಂದಲೇ ತನ್ನ ಗಂಡನ ಹಿಂದೆ ಬಿದ್ದಿದ್ದು ಆಕೆ ಗಮನಿಸಿದ್ದಳು. ತಕ್ಷಣ ನೆಲ ಬಿಟ್ಟು ಎದ್ದು ಬೆಳದಿಂಗಳ ಬೆಳಕಿನಲ್ಲಿ ಗಂಡನನ್ನು ಹುಡುಕುತ್ತ ನಡೆದಳು. ಮೈಮರೆತು ಚದುರಿ ಬಿದ್ದಿದ್ದ ಹೆಣ್ಣು ಗಂಡುಗಳ ಜೋಡಿಗಳಲ್ಲಿ ಎಲ್ಲಿಯೂ ಆಕೆಯ ಗಂಡ ಕಾಣಸಲಿಲ್ಲ.

ಮರುದಿನ ಮಧ್ಯಾಹ್ನದವರೆಗೆ ಹಾದಿ ಕಾಯ್ದು ಗಂಡ ಎಲ್ಲಿಗೆ ಹೋಗ್ತಾನೆ, ಬಂದಾಗ ಬರಲಿ ಎಂದು ಸಮಾಧಾನ ಮಾಡಿಕೊಂಡು ಮಾಪುರತಾಯಿಯ ಮೇಲೆ ಭಾರ ಹಾಕಿ ಊರ ಹಾದಿ ಹಿಡಿದಳು. ಮುಡಬಿ ಸೀಮೆಗೆ ಬರುವಷ್ಟರಲ್ಲಿ ಹೊತ್ತು ಮುಳುಗಿತು. ಮೆಲ್ಲಮೆಲ್ಲನೆ ಕತ್ತಲೆ ಮೈ ಮೇಲೆ ಏರಿ ಬರುತ್ತಿತ್ತು. 'ಇನ್ನೇನು ಮಾಡುವುದು ಶಿವನೇ!' ಎಂದು ಆಕೆಯ ಎದೆ ಡವಗುಟ್ಟಹತ್ತಿತು. ಮುಡಬಿಯಲ್ಲಿ ಯಾರದಾದರೂ ಮನೆಯ ಜಗಲಿಯ ಮೇಲೆ ರಾತ್ರಿ ಕಳೆದು ಬೆಳ್ಳಿಮೂಡಿದಾಗ ಮುಂದಿನ ಹಾದಿ ತುಳಿದರಾಯಿತು ಎಂದು ಯೋಚನೆ ಮಾಡುತ್ತಿದ್ದಂತೆ ಹಿಂದಿನಿಂದ ಜೋಡೆತ್ತಿನ ಗಾಡಿಯೊಂದು ಘಲ್‌ಘಲ್ ಎಂದು ಗಂಟೆನಾದ ಮಾಡುತ್ತ ಓಡಿಬರುತ್ತಿತ್ತು. ಮಲ್ಲವ್ವ ಹಾದಿ ಬಿಟ್ಟು ಸರಿದು ನಿಂತು ಗಾಡಿಯವನಿಗೆ ಮಾತಾಡಿಸಿದಳು –

''ಯಪ್ಪಾ, ನಾನು ಒಬ್ಬೊಂಟಿ ಹೆಂಗ್ಸು. ರಾಸೂರಿಗೆ ಹೋಗಬೇಕು. ಕತ್ತಲಾಯ್ತು. ಮುಡಬ್ಯಾಗ ರಾತ್ರಿ ಕಳ್ದು ಮುಂದ ಹೋಗಬೇಕಂತ ಮಾಡೇನಿ. ನೀ ಒಂದೀಟು ಗಾಡಿ ಹಳ್ಳೂಗ ಹೊಡದ್ರ ನಾ ಹಿಂದ ಹಿಂದೇ ಮುಡಬಿ ತನಕಾ ಬರ್ತೇನಿ. ಅರೀದ ಸೀಮಿ. ಒಬ್ಬಾಕೀಗೆ ಅಂಜಿಕಿ ಆಗಲತ್ಯಾದ.''

ಮಲ್ಲವ್ವನ ದನಿ ಗುರುತಿಸಿ ಗಾಡಿಯೊಳಗಿನಿಂದ ಒಂದು ಗಡಸು ದನಿ ಚಿಮ್ಮಿ ಬಂತು –

''ಯಾರು? ಸಿಂಗೇರ ಮಲ್ಲೀ ಏನೆ? ಒಬ್ಬಾಕೀನೇ ಎಲ್ಲಿ ಹೋಗಿದ್ದೀಯೇ?''

ಅದು ಬಸವೇಗೌಡರ ದನಿ ಎಂಬುದನ್ನು ಮಲ್ಲವ್ವ ಗುರುತಿಸಿದಳು. ಸ್ವರ್ಗದಿಂದ ದೇವರೇ ತನ್ನ ರಕ್ಷಣೆಗೆ ಧಾವಿಸಿ ಬಂದಷ್ಟು, ಹಿಡಿಸಲಾರದಷ್ಟು ಹಿಗ್ಗಾಯಿತು.

''ಗೌಡ್ರೂ? ನೀವು? ಈ ಕಡೆ?'' ಅನೇಕ ಆಶ್ಚರ್ಯಗಳಿಂದ ಕೂಡಿದ ಪ್ರಶ್ನೆಗಳು ಏಕ ಕಾಲಕ್ಕೆ ಆಕೆಯ ಬಾಯಿಂದ ಹರಿದು ಬಂದುವು.

''ಇಲ್ಲೇ, ಹಾರ್ಕೂಡಕ್ಕ ಹೋಗಿದ್ದೆ. ಹುಣ್ಣೀ ಇತ್ತಲ್ಲ, ಸ್ವಾಮಿಗೋಳ ದರ್ಶನಕ್ಕ. ನೀ ಎಲ್ಲಿ?''

ಮಲ್ಲವ್ವ ತನ್ನ ಗೋಳನ್ನು ತೋಡಿಕೊಂಡಳು. ಬಸವೇಗೌಡರು ಆಕೆಗೆ ಸಮಾಧಾನ ಹೇಳಿ ಗಾಡಿಯಲ್ಲಿ ಜಾಗ ಮಾಡಿಕೊಟ್ಟರು. ಮಾಪುರತಾಯಿಯ ಮೇಲೆ ಭಾರ ಹಾಕಿ ಧೈರ್ಯದಿಂದ ಒಬ್ಬೊಂಟಿಗಳು ದೂರದ ಹಾದಿ ತುಳಿದು ಬಂದಿದ್ದಳು. ತಾಯಿ ಕೈಬಿಡಲಿಲ್ಲ. ಮೈಮೇಲೆ ಏರಿ ಬರುತ್ತಿದ್ದ ಕತ್ತಲೆಯಲ್ಲಿಯೂ ಆಕಾಶದೊಳಗೆ ಮಿಣುಕು ಬೆಳಕು ನೀಡುತ್ತಿದ್ದ ನಕ್ಷತ್ರಗಳು ಮಿನುಗುತ್ತಿದ್ದುವು. ಕತ್ತಲೆಯ ಅಂಜಿಕೆಯಲ್ಲಿ ಹೌಹಾರುತ್ತಿದ್ದ ಮಲ್ಲವ್ವನಿಗೆ ಬಸವೇಗೌಡರು ಬೆಳಕಾಗಿ ಬಂದರು.

ಹಾದಿಯಲ್ಲಿ ಎತ್ತುಗಳ ದಣಿವಾರಿಸಲು ಅಲ್ಲಲ್ಲಿ ಕೊಳ್ಳು ಬಿಟ್ಟು ಗಾಡಿ ತರಬುತ್ತಿದ್ದರು. ಗೌಡರ ಎದುರಿಗೆ ಹ್ಯಾಗೆ ಚುಟ್ಟಾ ಸೇದುವುದು ಎಂದು ಆಳು ಕಾಲ್ಮಡಿಯ ನೆವ ಮಾಡಿಕೊಂಡು ಅಷ್ಟು ದೂರ ಹೋಗಿ ನಿಧಾನಕ್ಕೆ ಚುಟ್ಟದ ಹೊಗೆ ಎಳೆಯುತ್ತ, ಆಕಾಶದ ನಕ್ಷತ್ರಗಳಲ್ಲಿ ತನ್ನ ಕನಸುಗಳಿಗೆ ಅರ್ಥ ಹುಡುಕುತ್ತ ಆಲಸ್ಯ ಮಾಡುತ್ತಿದ್ದ. ಹಾಂಗೂ ಹಿಂಗೂ ಅವರು ರಾಸೂರು ಸೀಮೆ ತಲುಪಿದಾಗ ಬೆಳ್ಳಿ ಮೂಡಿತ್ತು.

*　*　*

ಕಥೆ ದಿಕ್ಕು ತಪ್ಪುತ್ತಿದೆ ಎಂದು ಅನಿಸುತ್ತಿದೆಯೇ? ಹಾಗೇನಿಲ್ಲ. ಚುಂಚೂರಿಗೆ ಹೋದ ಸೈಬಣ್ಣ ನಾಲ್ಕಾರು ದಿನ ನರೋಣಾದ ಜೋಗುತಿಯ ಮಗ್ಗುಲಲ್ಲಿ ಮೈ ಬಿಸಿ ಆರಿಸಿಕೊಂಡು ಊರಿಗೆ ವಾಪಸ್ಸಾಗಿದ್ದ. ನಾಕಾರು ದಿನ ಗಂಡ ಹೆಂಡತಿಯಲ್ಲಿ ಗುಸುಮುಸು ನಡೆಯಿತು, ನಿಜ. ಆದರೆ ಅದೇ ತಿಂಗಳು ಗಕ್ಕಂತ ಮಲ್ಲವ್ವನ ನೀರು ನಿಂತಿತು. ಗಂಡ ಹೆಂಡತಿ ಇಬ್ಬರೂ ಆದದ್ದನ್ನೆಲ್ಲ ಮರೆತು ಪ್ರತಿ ದಿನ ಹಾಲು ಜೇನಿನಂತೆ ಬೆರೆಯಹತ್ತಿದರು. ಆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದು ಖುಷಿಯಲ್ಲಿ ಕುಣಿದಾಡಹತ್ತಿದರು. ಮಾಪುರತಾಯಿ ದೊಡ್ಡವಳು. ಅವಳಿಗೆ ಹೊತ್ತ ಹರಕೆ ಹುಸಿಯಾಗಲಿಲ್ಲ. ಯಾವ ತೊಂದರೆಯೂ ಇಲ್ಲದೆ ನವಮಾಸ ತುಂಬಿ ಭೂತಾಯಿಯ ಗರ್ಭದಿಂದ ಮೊಳಕೆ ಚಿಮ್ಮಿ ಬರುವಂತೆ, ಹಾಲ್ಗಡಲಿನಿಂದ ಪರಮಾತ್ಮಾ ಮೂಡಿಬರುವಂತೆ ಮಲ್ಲವ್ವನ ಗರ್ಭದಿಂದ ಗಂಡು ಸಂತಾನವೊಂದು ಅವತಾರ ತಾಳಿತು. ಆಗ ಆಗಸದಲ್ಲಿ ಬೆಳ್ಳಿ ಮೂಡಿತ್ತು. ಮಲ್ಲವ್ವ ಮತ್ತು ಸೈಬಣ್ಣರ ಬಾಳಿನಲ್ಲೂ ಬೆಳ್ಳಿಮೂಡಿ ಬೆಳಕಾಗಿತ್ತು. ಅದಕ್ಕಾಗಿ ಮಗುವಿಗೆ 'ಬೆಳ್ಯಾ', ಬೆಳ್ಳಪ್ಪಾ' ಎಂದು ನಾಮಕರಣ ಮಾಡಿದ್ದರು.

ಬಾಲ್ಯದಿಂದಲೂ 'ಬೆಳ್ಯಾ' 'ಬೆಳ್ಯಾ' ಎಂದು ರೂಢಿಯಾಗಿದ್ದ ಹೆಸರು ಮುಂದೆ ಬೆಳೆದಂತೆ ಬೆಳ್ಳಪ್ಪನಿಗೆ ಅಸಹ್ಯವಾಗಿ ಕಾಣಹತ್ತಿತ್ತು. ಇಷ್ಟೊಂದು ಓದಿ ಬೆಳೆದು

## ಉಪಯೋಗ

ಮಣ್ಣನ್ನು ಸುಟ್ಟು
ಇಟ್ಟಿಗೆ ಮಾಡುವುದು ಬೇಡ;
ಹಾಗೇ ಬಿಟ್ಟರೆ,
ಬೆಳೆ ತೆಗೆಯಬಹುದು,
ಮರ ಬೆಳೆಸಬಹುದು!

ಸಿ.ಪಿ.ಕೆ.
ಮೈಸೂರು

'ಬೆಳ್ಯಾ', 'ಬೆಳ್ಯಪ್ಪ' ಎಂದು ಕರೆಸಿಕೊಳ್ಳುವುದು ಗಮಾರನ ತರಹ ಅನಿಸಹತ್ತಿತ್ತು. ಬೆಳ್ಳಿ ಮೂಡೋದು ಅಂದ್ರೆ ಬೆಳಕು ಹರಿಯೋದು, ಅಂದ್ರೆ ಪ್ರಕಾಶವಾಗೋದು ಎಂದು ಆತನ ಕಲಿತ ತಲೆಗೆ ಫಕ್ಕನೇ ಅರ್ಥ ಹೊಳೆಯಿತು. ತಲೆಯಲ್ಲಿ ಪ್ರಕಾಶ ಮೂಡಿದ ಮರುದಿನವೇ ಲಾಯರ ಹತ್ತಿರ ಹೋಗಿ 'ಬೆಳ್ಯಪ್ಪ'ನಿಂದ 'ಪ್ರಕಾಶ'ನಾಗಲು ಏನೇನು ಬೇಕೋ ಅದನ್ನೆಲ್ಲ ಮಾಡಿ ಈಗ 'ಪ್ರಕಾಶ' ಎಂಬ ಖಾಯಂ ಹೆಸರು ಪಡೆದಿದ್ದ.

ತನ್ನ ಮೂಲ ಹೆಸರಿನ ಸಂಶೋಧನೆಯೊಂದಿಗೆ ಶೋಧ ಕಾರ್ಯ ಆರಂಭಿಸಿದ ಬೆಳ್ಯಪ್ಪ, ಛೇ, ಛೇ, ಬೆಳ್ಯಪ್ಪ ಅಲ್ಲ ಪ್ರಕಾಶ ಮುಂದೆ ಹೊಸ ಹೊಸ ಸಂಶೋಧನೆಗಳನ್ನು ಮಾಡಹತ್ತಿದ. ಅವನ ಸಂಶೋಧನೆಗೆ ಬೆರಗಾಗಿ ಕಲ್ಬುರ್ಗಿ ವಿದ್ಯಾಪೀಠವು ಡಾಕ್ಟರೇಟ ಡಿಗ್ರಿಯ ಜೊತೆಗೆ 'ಶೋಧ ಪ್ರಕಾಶ' ಎಂಬ ಗೌರವದ ಬಿರುದನ್ನೂ ನೀಡಿ ಸನ್ಮಾನಿಸಿತು. ದೊಡ್ಡ ಡಾಕ್ಟರ ಅನಿಸಿಕೊಂಡು ಆತ ಊರಿಗೆ ಬಂದಾಗ ಊರಿನ ಅನೇಕ ರೋಗಿಗಳು ಚಿಕಿತ್ಸೆಗಾಗಿ ಅವನ ಮನೆಯ ಮುಂದೆ ಸಾಲಾಗಿ ನಿಲ್ಲಹತ್ತಿದರು. ತಾನು ಔಷಧಿ ಕೊಡುವ ಡಾಕ್ಟರ ಅಲ್ಲ, ಸಾಹಿತ್ಯದಲ್ಲಿ ಡಾಕ್ಟರ ಆಗಿದ್ದೇನೆ ಎಂದು ಜನರಿಗೆ ತಿಳಿಸಿ ಹೇಳುವುದರಲ್ಲಿ ಸಾಕುಬೇಕಾಗುತ್ತಿತ್ತು. ''ಇಂವಾ ಸಾಹಿತ್ಯದ ಡಾಕ್ಟರ ಅಂತ್ಯೋ! ಸಾಹಿತ್ಯ ಅಂದ್ರೇನು ? ಅದಕ್ಕ ಎಂಥ ಬ್ಯಾನಿ ಬರ್ತದ? ಆದಕ್ಕ ಹ್ಯಾಂಗ ಔಷಧಿ ಇಂಜಕ್ಷನ ಕೊಡ್ತಾನ ?'' ಎಂದು ಜನರು ಒಣಗುಟ್ಟುತ್ತ ಹೊರಟು ಹೋಗುತ್ತಿದ್ದರು.

ಪ್ರಕಾಶನು ಸಾಹಿತ್ಯದ ಡಾಕ್ಟರ ಆಗಿದ್ದರ ಫಲವಾಗಿ 'ಬಂಜಾರ ಕೇರಿ' ಅಂತ ಇದ್ದುದು ಈಗ 'ಬಂಜೇರ ಕೇರಿ' ಆಗಿದೆ. ಮರಾಠಾ ಆಳ್ವಿಕೆಯ ರಾಮಚಂದ್ರ ಜಾಧವನು ಈಗಿನ ರಾಸೂರು ನಿರ್ಮಿಸಿದನೆಂದು ಚಾರಿತ್ರಿಕ ದಾಖಲೆಗಳಿವೆ. ಆ ರಾಮಚಂದ್ರನಿಂದ ಹಿಡಿದು ಇತ್ತೀಚಿನವರೆಗಿನ ಚರಿತ್ರೆಯನ್ನು ಪ್ರಕಾಶನು ಜಾಲಾಡಿ ನೋಡಿದನು. ರಾಸೂರೇನು ಬಂತು, ಆಸುಪಾಸಿನ ಹತ್ತು ಹದಿನೆಂಟು ಹಳ್ಳಿಗಳಲ್ಲಿ ಎಲ್ಲಿಯೂ 'ಬಂಜಾರಾ' ಅಂದರೆ ಲಂಬಾಣಿ ಜನಾಂಗವಿಲ್ಲ. ಒಂದೂ ಲಂಬಾಣಿ ತಾಂಡೆ ಇಲ್ಲ. ಅಂದ ಮೇಲೆ ರಾಸೂರಿನ ಹೊರಕೇರಿ ಅದ್ಹೇಗೆ 'ಬಂಜಾರ ಕೇರಿ' ಆಯಿತು ಎಂಬ ಯಕ್ಷ ಪ್ರಶ್ನೆ ಪ್ರಕಾಶನಿಗೆ ಕಾಡಹತ್ತಿತು. ಅದು 'ಬಂಜಾರ ಕೇರಿ' ಆಗಿರಲು ಖಂಡಿತ ಸಾಧ್ಯವಿಲ್ಲ. 'ಬಂಜೇರ ಕೇರಿ' ಆಗಿದ್ದಿರಬೇಕು. ಯಾರೋ ಪುರೋಹಿತಶಾಹಿಗಳು 'ಗಂಗೆ'ಗೆ 'ಗಂಗಾ', 'ಯಮುನೆ'ಗೆ 'ಯಮುನಾ' ಮಾಡಿದಂತೆ 'ಬಂಜೇರ' ಪದಕ್ಕೆ 'ಬಂಜಾರ' ಎಂದು ಸಂಸ್ಕೃತೀಕರಣ ಮಾಡಿರಬೇಕು ಎಂದು ತರ್ಕಿಸಿದನು. ತನ್ನ ತರ್ಕ ಸರಿಯೆಂದು ಸಾಧಿಸಿ 'ಬಂಜಾರ ಕೇರಿ'ಯನ್ನು 'ಬಂಜೇರ ಕೇರಿ'ಯನ್ನಾಗಿ ಬದಲಾಯಿಸಿ ಬಿಟ್ಟ. ಅದರಲ್ಲಿ ಯಾರಿಗೂ ಕಳೆದುಕೊಳ್ಳುವುದು ಏನೂ ಇರಲಿಲ್ಲ. ಹೀಗಾಗಿ ಎಲ್ಲರೂ ಸೈ ಎಂದರು. ಈಗ 'ಬಂಜೇರ ಕೇರಿ' ಎಂಬ ಹೆಸರೇ ಚಾಲ್ತಿಯಲ್ಲಿದೆ.

ಮುಂದೊಂದು ದಿನ ಪ್ರಕಾಶನ ಸಂಶೋಧಕ ತಲೆಯಲ್ಲಿ ಇನ್ನೊಂದು ಅನುಮಾನದ ಹೊಸ ಪ್ರಕಾಶ ಮೂಡಿತು. ಅದು ಕಣ್ಣು ಕುಕ್ಕಿಸುವಂಥ ಪ್ರಕಾಶ, ಹಿಂದೆ ಮುಂದೆ ಏನು ಎಂತ ಅನ್ನೊಂದು ತಿಳಿಯದಂಥ ಕಣ್ಣಿಗೆ ಕತ್ತಲೆ ಕಟ್ಟಿಸುವಂಥ ಪ್ರಕಾಶ. 'ಬಂಜೇರ ಕೇರಿ' ಎಂದು



ಹೆಸರಿನ ಪರಿಷ್ಕರಣೆ ಮಾಡುವಾಗ ತಾನು ದುಡುಕಿದೆನೇನೋ ಎಂಬ ಅನುಮಾನ ಅವನಿಗೆ ಕಾಡಹತ್ತಿತು. ಅದು 'ಬಂಜೇರ ಕೇರಿ' ಆಗಿರಬೇಕಾದರೆ ಅಲ್ಲಿರುವ ಹೆಂಗಸರೆಲ್ಲ ಬಂಜೇರೇ ಆಗಿರಬೇಕಲ್ಲ! ಹಾಗಾದರೆ ತನ್ನ ಅವ್ವನೂ ಬಂಜೆಯೇ ಆಗಿದ್ದಿರಬೇಕು. ಅದು ಹೇಗೆ? ಬಂಜೆಯಾದವಳಿಗೆ ಮಕ್ಕಳಾಗುವುದು ಹೇಗೆ? ಪ್ರಕಾಶನಿಗೆ ಇದು ಒಡೆಯಲಾರದ ಒಗಟಾಯಿತು. ಯು.ಜಿ.ಸಿ.ಯಿಂದ ಧನ ಸಹಾಯ ಪಡೆದು ಹೊಸ ಸಂಶೋಧನೆಗೆ ಕೈ ಹಾಕಿ ಫುಟಪಾಥಮೇಲೆ ಸಿಗುವ ಎಲ್ಲ ಪತ್ತೇದಾರಿ ಸಾಹಿತ್ಯವನ್ನು ಸಂಗ್ರಹಿಸಿ ಹೊಸ ಹೊಸ ಸತ್ಯಶೋಧನೆಯ ಪತ್ತೇದಾರಿ ಕಾರ್ಯದಲ್ಲಿ ತೊಡಗಿದ್ದ ಅವನಿಗೆ ಈ ಪ್ರಶ್ನೆ ಧುತ್ತೆಂದು ಕಾಡಹತ್ತಿತು.

ಇಂಥ ಸಮಸ್ಯೆ ಎದುರಾದಾಗಲೆಲ್ಲ ಪ್ರಕಾಶನು ಕಲ್ಬುರ್ಗಿಗೆ ಹೋಗಿ ಹೋಟೆಲ ಪಂಚಮಿಯಲ್ಲೋ, ಸಿಟಿ ಸ್ಟಾರನಲ್ಲೋ ಕುಡಿದು ಉಂಡು ತಿಂದು ಊರೆಲ್ಲ ಸುತ್ತಾಡಿ, ಹಳೆ ಗೆಳೆಯರು ಕೆಲಸ ಮಾಡುವ ಸ್ಥಳಗಳಿಗೆ ಹೋಗಿ ಗಂಟೆಗಟ್ಟಲೇ ಹರಟೆ ಕೊಚ್ಚುತ್ತಿದ್ದ. ನಾಲ್ಕಾರು ದಿನಗಳಲ್ಲಿ ಮನಸ್ಸು ಸ್ಥಿಮಿತಕ್ಕೆ ಬಂದ ಮೇಲೆ ಊರಿಗೆ ವಾಪಸ್ಸಾಗುತ್ತಿದ್ದ. ಈ ಸಾರೆಯೂ ಮನಸ್ಸು ಕ್ಷುಬ್ಧಗೊಂಡಾಗ ಸೀದಾ ಕಲ್ಬುರ್ಗಿಗೆ ದೌಡಾಯಿಸಿದ್ದ. ಒಬ್ಬೊಬ್ಬ ಗೆಳೆಯರನ್ನು ನೆನಪು ಮಾಡಿಕೊಂಡು ಅವರ ಭೇಟಿಗೆ ಹೋಗುತ್ತಿದ್ದ.

ಒಮ್ಮೆ ಜಗತ್ ಸರ್ಕಲ್‌ನಲ್ಲಿ ಅಕಸ್ಮಾತ್ತಾಗಿ ಡಾ|| ವೀರೇಂದ್ರನ ಭೇಟಿಯಾಯಿತು. ಪಿ.ಯು.ನಲ್ಲಿ ವೀರೇಂದ್ರ ಪ್ರಕಾಶ ಇಬ್ಬರೂ ಸಹಪಾಠಿಗಳು. ಮುಂದೆ ಇಬ್ಬರ ಹಾದಿಗಳು ಬೇರೆಯಾಗಿ ವೀರೇಂದ್ರನು ಔಷಧಿ ವಿಜ್ಞಾನದ ಡಾಕ್ಟರನಾದರೆ ಪ್ರಕಾಶನು ಸಾಹಿತ್ಯದ ಡಾಕ್ಟರನಾಗಿದ್ದ. ಡಾ|| ವೀರೇಂದ್ರನು ಧಾರವಾಡಕರ ದವಾಖಾನೆಯಲ್ಲಿ ಕೆಲಸ ಮಾಡುತ್ತಿದ್ದ. ಇಬ್ಬರೂ ಹಳೆಯ ನೆನಪುಗಳನ್ನು ಮೆಲುಕು ಹಾಕುತ್ತ ದವಾಖಾನೆಯವರೆಗೆ ಬಂದರು. ಬಾಗಿಲಿಗೆ ಬರುತ್ತಿದ್ದಂತೆ ಒಬ್ಬಳು ಎದುರಾಗಿ ಒಂದು ತುರ್ತು ಕೇಸ್ ಇದೆ ಎಂದು ಡಾ|| ವೀರೇಂದ್ರನಿಗೆ ತಿಳಿಸಿದಳು. ಪ್ರಕಾಶನಿಗೆ ಒಳಗೆ ಕನ್ಸಲ್ಟಿಂಗ್ ರೂಮಿನಲ್ಲಿ ಕೂಡಲು ಹೇಳಿ ವೀರೇಂದ್ರ ನರ್ಸಳ ಹಿಂದೆ ದೌಡಾಯಿಸಿದ.

ಪ್ರಕಾಶ ಒಳಗೆ ಹೋಗಿ ಕೂಡುತ್ತಿದ್ದಂತೆ ಬಾಜೂ ಕೋಣೆಯಿಂದ ಮಾತು ಕೇಳಿಸುತ್ತಿದ್ದುವು. ಇನ್ನೊಬ್ಬ ಡಾಕ್ಟರು ಒಬ್ಬ ಪೇಷಂಟ ಜೊತೆಗೆ ಮಾತಾಡುತ್ತಿದ್ದರು. ಪೇಷಂಟನು ದೀನನಾಗಿ ಬೇಡಿಕೊಳ್ಳುತ್ತಿದ್ದನು –

''ಏನಾದ್ರೂ ಮಾಡ್ರಿ ಡಾಕ್ಟರ್. ಇನ್ನೊಮ್ಮೆ ರಿಪೋರ್ಟ್ ನೋಡ್ರಿ. ಬೇರೆ ಏನೇ ಪರೀಕ್ಷೆ ಮಾಡ್ಸೋದಿದ್ರೂ ಹೇಳ್ರಿ. ಹೈದ್ರಾಬಾದ, ಸೋಲಾಪುರ, ಬೆಂಗಳೂರು ಎಲ್ಲಿಗೆ ಹೋಗಂದ್ರೂ ಹೋಗ್ತೇನಿ. ಏನಾರ ಹಾದಿ ತೋರಿಸ್ರಿ ಡಾಕ್ಟರ್.''

''ಎಲ್ಲಾ ಪರೀಕ್ಷೆ ಮಾಡ್ಸೇವಿ. ನೀನು ಎಲ್ಲಿಗೆ ಹೋದ್ರೂನೂ ಇದೇ ರಿಜಲ್ಟ್ ಅದ. ನಿನ್ನಲ್ಲಿ ಸಂತಾನ ಉತ್ಪತ್ತಿ ಮಾಡೋ ಶಕ್ತಿ ಇಲ್ಲ. ಇದಕ್ಕ ಬೇಕಾದ್ರ ನಿಮ್ಮ ಹಳ್ಳಿ ಮಾತಿನಾಗ ಗಂಡಸರ ಬಂಜೆತನ ಅಂತ ಅಂದ್ಕೊ. ದೊಡ್ಡ ಊರಿಗೆ ಹೋದ್ರೂನೂ ಅದೂ ಇದೂ ಅಂತ ದುಡ್ಡು ಸುಲ್ದು ಕಳಿಸ್ತಾರ ಅಷ್ಟೆ. ಇದಕ್ಕ ಇನ್ನೂ ತನಕ ಇಲಾಜ ಕಂಡುಹಿಡ್ದಿಲ್ಲ.''

ಅವರ ಮುಂದಿನ ಸಂಭಾಷಣೆ ಪ್ರಕಾಶನ ಕಿವಿ ಸೇರಲಿಲ್ಲ. ಅಂದ್ರೆ ಗಂಡಸರಲ್ಲೂ ಬಂಜೆತನ ಇರ್ತದೇನು ? ಎಂದು ಯೋಚಿಸಹತ್ತಿದ. ಯಾರು ಯಾರಲ್ಲಿ ಅಂಥ ಬಂಜೆತನ ಇದ್ದಿರಬಹುದು ಎಂದು ರಾಸೂರಿನ ಒಬ್ಬೊಬ್ಬರೇ ಗಂಡಸರ ಚಿತ್ರಗಳನ್ನು ತನ್ನ ಕಣ್ಣೆದುರಿಗೆ ತಂದುಕೊಳ್ಳಹತ್ತಿದ. ಮಕ್ಕಳಾಗದೇ ಇರುವ ಊರಲ್ಲಿಯ ದಂಪತಿಗಳಲ್ಲೆಲ್ಲ ಗಂಡಸರೇ ಬಂಜೆಯರಾಗಿ ಕಾಣಹತ್ತಿದರು. ತನ್ನ ಕೇರಿಯಲ್ಲಿ ಅಂಥ ದಂಪತಿಗಳು

ಅಪರೂಪಕ್ಕೆ ಒಂದಿಬ್ಬರು ಕಂಡುಬಂದರು. ಹಾಗಾದರೆ ನಮ್ಮ ಕೇರಿಯಲ್ಲಿ ಗಂಡಸು ಬಂಜೆಯರು ಇಲ್ಲ ಅನ್ನುವಷ್ಟರ ಮಟ್ಟಿಗೆ ಇದ್ದು ಊರೊಳಗೆ ಇರುವ ಗಂಡಸರಲ್ಲೇ ಬಂಜೆತನ ಹೆಚ್ಚಾಗಿದ್ದಿರಬೇಕೆ, ಎಂದು ಅವನ ಸಂಶೋಧಕ ಮನಸ್ಸು ತರ್ಕ ಹೇಳಹತ್ತಿತು.

ಅಷ್ಟರಲ್ಲೇ ತಮ್ಮ ಕೇರಿಯ ತೊಂಬತ್ತರ ಗಡಿ ದಾಟಿದ್ದ ಸಾತವ್ವಾಯಿ ಹೇಳಿದ ಒಂದು ಮಾತು ನೆನಪಾಯಿತು, ''ನಮ್ಮ ಕೇರೀಗಿ ಏನ ಶಾಪ ಅದಾನೋ ನೋಡ ಮಗ, ಈ ಕೇರಿಗೆ ಸೊಸೆಯರಾಗಿ ಬರೋ ಹೆಣ್ಣುಗಳಿಗೆ ಜಲ್ದಿ ಮಕ್ಕಳೇ ಆಗಂಗಿಲ್ಲ. ಒಬ್ಬೊಬ್ಬರ ಸೂಲಾ ದೂರ ಇರ್ತವ ಅಂಬಾದೇನೋ ಖರೆ. ಆದ್ರ ಕೇರಿಗೆ ಬಂದ ಗರತೇರೆಲ್ಲರ ಸೂಲಾ ದೂರ ಹ್ಯಾಂಗ ಇರ್ತಾವ ? ಇದೂ ಶಾಪಾನೇ ಇರ್ಬೇಕು. ಆರಾರು, ಎಂಟೆಂಟು ವರ್ಷದ ಮ್ಯಾಲ ಹೊಟ್ಟಿ ನಿಂತು ಅವರ ಬಂಜೆತನ ಹರ್ದ ಹೋಗ್ಯಾದ ನೋಡು. ನಿಮ್ಮವ್ವನ ಬಂಜೆತನ ಹರೀಬೇಕಾದ್ರೂನೂ ಏಳ ವರ್ಷ ಕಾಯಬೇಕಾಯ್ತು!''

ಹೆಣ್ಣು ಖರೇನೇ ಬಂಜೆಯಾಗಿದ್ದರೆ ಆ ಬಂಜೆತನ ಆರೆಂಟು ವರ್ಷದವರೆಗೆ ಮಾತ್ರ ಹ್ಯಾಂಗ ಇರ್ತದೆ ? ಹಂಗಾದರೆ ಬಂಜಯಾಗಿರೋವ್ರು ಹೆಂಡ್ತೀನೋ ಗಂಡನೋ ? ಗಂಡನೇ ಬಂಜೆಯಾಗಿದ್ದರೆ ಏಳೆಂಟು ವರ್ಷ ಆದ ಮ್ಯಾಲಾದ್ರೂ ಮಕ್ಕಳು ಹ್ಯಾಂಗಾದ್ವು ? – ಪ್ರಕಾಶನಿಗೆ ಮುಂದೆ ಯೋಚನೆ ಮಾಡೋದು ಅಸಹ್ಯ ಅನಿಸಿತು. ತಮ್ಮ ಸಮಾಜದ ಗಂಡಸರಲ್ಲಿ ಬಾಲ ಬಸಪ್ಪಾ ಮತ್ತು ಹೆಂಗಸರಲ್ಲಿ ದೇವದಾಸಿ (ಬಸವಿ) ಸಂಪ್ರದಾಯ ಇರುವುದನ್ನು ಕೇಳಿದ್ದ, ಕಂಡಿದ್ದ. ಹೆಂಗಸರು ದೇವದಾಸಿಯರಾಗಿ ಸಮಾಜದ ಒಂದು ವರ್ಗಕ್ಕೆ ಸೇವೆ ಸಲ್ಲಿಸುತ್ತಿದ್ದರೆ ಗಂಡಸರು ದೇವಿಯರ ದಾಸರಾಗಿ ಇನ್ನೊಂದು ವರ್ಗದವರ ಕಾಮನೆಗಳನ್ನು ಈಡೇರಿಸುತ್ತಿದ್ದಿರಬೇಕು. ದೇವಿದಾಸ, ಅಂಬಾದಾಸ, ದುರ್ಗಾದಾಸ, ಚಂಡೀದಾಸ, ಕಾಳಿದಾಸ – ಇವೆಲ್ಲ ಗಂಡು ಬಸವಿಯರ ಹೆಸರುಗಳೇ ಆಗಿರುವಂತಿವೆ ಎಂದು ಪ್ರಕಾಶನಿಗೆ ಖಾತ್ರಿಯಾಯಿತು.

ಅಷ್ಟೊತ್ತಿಗೆ ಐವತ್ತು ದಾಟಿದ ಒಬ್ಬ ಹಿರಿಯಳು ಅಲ್ಲಿಗೆ ಬಂದಳು. ಪ್ರಕಾಶನಿಗೆ ದಿಟ್ಟಿಸಿ ನೋಡುತ್ತ ಕೇಳಿದಳು,

''ಯಾವೂರಪ್ಪ ನಿಮ್ದು? ಡಾಕ್ಟರಗ ತೋರ್ಸಾಕ ಬಂದಿರೇನು ?''

''ನಮ್ದು ರಾಸೂರು. ಡಾ|| ವೀರೇಂದ್ರ ನನ್ನ ಗೆಳೆಯ'' ಪ್ರಕಾಶ ಹೇಳಿದ.

''ಯಾವ ರಾಸೂರು ? ಧರೀಮ್ಯಾಲ ಅದಾ ನೋಡು, ಅದೇ ರಾಸೂರೇನು ?'' ಆಕೆ ಮತ್ತೆ ಕೇಳಿದಳು.

''ಹೌಂದ ಯವ್ವಾ. ಅದೇ ರಾಸೂರು. ರಾಸೂರಂಬೋದು ಅದೊಂದೇ ಇರಾದು.''

''ರಾಸೂರಂದ್ರ ನೆಪ್ಪಾಯ್ತು ನೋಡು. ಈಗ ಮುವತ್ತು ವರ್ಷ ಹಿಂದಿನ ಮಾತು. ನಾನು ಹೊಸದಾಗಿ ಆಯಾ ಅಂತ ಇಲ್ಲಿ ಸೇರ್ಕೊಂಡಿದ್ದೆ. ಆಗ ನಿಮ್ಮೂರಿನ ಮಾದೇವಮ್ಮಾ ಅಂತ ಒಬ್ಬಾಕಿನ ಬಾಣತನಾ ಆಗಿತ್ತು ಇಲ್ಲಿ. ಪಾಪ, ಕೂಸು ಸತ್ತು ಹುಟ್ಟಿತ್ತು. ಮಾದೇವಮ್ಮಗ ಮೈಮ್ಯಾಗೆ ಸುದ್ದೀನೆ ಇರಲಿಲ್ಲ. ಒಂದು ಹಗಲು ಎರಡು ರಾತ್ರಿ ನಾನೇ ಕಣ್ಣಾಗ ಕಣ್ಣ ಇಟ್ಕೊಂಡು ಆಕೀಗೆ ನೋಡ್ಕೊಂಡಿದ್ದೆ. ಆಕೀನ ಗಂಡನೂ ಜೊತೆಯಲ್ಲೇ ಬಂದಿದ್ದ. ಬಾಣತಿಗೆ

## ವಿರಹ ನೀಗು



ಕೀರ್ತಕದ ಕಿರಿಕಿರಿಯ ಬಿಸಿಲು
ಗಾಳಿ ನೆಲ ನೀರಿಗೂ ಬಿಸಿ ಮುಟ್ಟಿಸುವ
ಬೆದೆ ಬಿಸಿಲು, ವರ್ಷಾ ಋತುವಿಗೆ
ಮೊದಲು ಬಾಯಾರಿ ಬೆಂಡೇಳುವ ಬಿಸಿಲು

ಭೂಮಿ ಬಿರಿದು ಮೈ ಉರಿದು
ತಂಪು ಎಲ್ಲೆಂದು ಹುಡುಕಿಸುವ ಬಿಸಿಲು

ಅಜ್ಜಿ ಬೆನ್ನು ತೆರೆದು ಬಾಚಣಿಗೆ ಕೊಟ್ಟು
ತುರಿಸು ಮಗ ಎಂದು ಬೆವರ ಸಾಲಿಗೆ
ಕಂಗೆಟ್ಟು, ಮಾವು ತಿಂದು ಮೈಗೆ
ಕುರುವು ಗೆಡ್ಡೆ ತಂದ ನೋವು
ಸೆಳೆತ, ಉಸ್ ಉಸ್ ಎಂದು
ಉಸಿರೆಡೆ, ತಾಪಿಸುವ ಸೂರ್ಯ
ಹುಟ್ಟುಹಾಕಿದ ಅವಾಂತರದ ಸುಡು ಬಿಸಿಲು

ಮನೆ ಬೇಡ ಮಠ ಬೇಡ ಮಸೀದಿಯೂ
ಬೇಡ ಸಾಕು ಬಯಲೆ ಸಾಕು
ಸಿಕ್ಕರೆ ಸ್ವಲ್ಪ ಗಾಳಿ ಸಾಕು
ಹೊಟ್ಟೆ ತಣಿಯೆ ನೀರು ಸಾಕು
ಹಪಹಪಿಸುವ ಜೀವಕ್ಕೆ
ಇವುಗಳದೆ ಕೊರತೆ
ಬಟ್ಟೆ ಬಿಡಿಸಿ ಮಾನ ಕಳೆವ
ಕಾಲ, ಛೀ ! ಬೈಸಿಕೊಂಡು
ಮತ್ತೂ ಉರಿವ ಸೂರ್ಯ ಸೇಡಿನಿಂದ

ಕುಂಟಾಬಿಲ್ಲೆ ಆಡಲಾಗದೆ, ಕ್ರಿಕೆಟ್ ಚೆಂಡು
ಎಸೆಯಲಾಗದೆ, ಕಾದ ಗೋಡೆ, ಕಾದ ಛೆತ್ತು
ಮನೆಯೆ ಅಗ್ನಿ ಕುಂಡವಾಗಿ ನಡೆದಿದೆ ಯಜ್ಞ
ಮುಗ್ಧತೆ ಮನೋಹರತೆಯ ತರ್ಪಣ
ಮನೆಯಾಕೆ ಮನೆ ಮಕ್ಕಳ ಮೇಲೆ
ಸ್ವಯಂ ಘೋಷಿತ
ಯಜಮಾನನ ಉರಿಗಣ್ಣ ಲೀಲೆ
ಬಯಕೆ ಭಾವನೆಗಳ ನಿರಂತರ ಕಗ್ಗೊಲೆ

ಬೇಡ ಸೂರ್ಯ ಉರಿಯ ಬೇಡ
ಉರಿದುರಿದು ಪರಿತಪಿಸಬೇಡ
ನೀನುರಿದು ನನ್ನುರಿಸಬೇಡ
ಉರಿಯಿಂದ ಉರಿ ಆದೀತು ದಳ್ಳುರಿ
ಶಾಂತನಾಗು ಸೈರಿಸು, ಇದೊ ಬಂದಳು ವರ್ಷೆ
ಸುದೀರ್ಘ ವಿರಹ ನೀಗಿ ಸಂಗಮಿಸಿ ಸುಖಿಸೆ.

ಬಿದರಿ ಚಂದ್ರಕಲಾ
ಗಂಗೋತ್ರಿ, ವಿದ್ಯಾನಗರ, ಸೇಡಮ್ - ೫೮೫ ೨೨೨

ಸುದ್ದೀ ಬಂದಮ್ಯಾಲ ತನ್ನ ಕೂಸು ಸತ್ತುಹುಟ್ಯಾದ ಅಂತ ಏನರೆ ತಿಳ್ದರ ಹೆಣ್ಮಗಳ ಜೀವಕ್ಕ ಧೋಕಾ ಅದಾ ಅಂತ ಡಾಕ್ಟರು ಕಡ್ಡಿ ಮುರ್ದಾಂಗ ಹೇಳಿದ್ರು. ಪಾಪ, ಆ ಗಣಸಿನ ಜೀವಾನೇ ಹೋದಾಂಗ ಆಗಿತ್ತು.''

ಪ್ರಕಾಶನಿಗೆ ಕುತೂಹಲ ಕೆರಳಿತು, ''ಆ ಹೆಣ್ಮಗಳ ಗಂಡನ ಹೆಸರು ಏನಿತ್ತ ಯವ್ವಾ ?''

''ಯಾರಿಗೆ ನೆಪ್ಪಾದಾ ? ಮೂವತ್ತ ವರ್ಷದ ಹಿಂದಿನ ಮಾತು. ಮಾಣಿಕ, ಮಾಲಿಂಗ, ಮಾರುತಿ, ಮಾದೇವ ಅಂತ ಹಿಂಗೇ ಏನೋ ಮಾ ದಿಂದ ಸುರು ಆಗತ್ತಿತ್ತನಸ್ತದ ನೋಡು.'' ಆಕೆ ನೆನಪು ಮಾಡಿಕೊಂಡು ಹೇಳಿದಳು.

''ಹ್ಞಂ! ಮುಂದೇನಾಯ್ತು?'' ಚಂದಮಾಮಾದ ಕಥೆ ಕೇಳುವ ಮಕ್ಕಳ ಹಾಗೆ ರೋಮ ರೋಮಗಳೆಲ್ಲ ಕಿವಿ ಮಾಡಿಕೊಂಡು ಕುತೂಹಲಿತನಾಗಿ ಕೇಳಿದ.

''ದೇವರ ಮೈಮಾ ಏನ ಹೇಳ್ಲಿ ಮಗಾ? ಅದೇ ಕಾಲಕ್ಕ ಈ ದವಾಖಾನ್ಯಾಗ ಇನ್ನೊಂದು ಹೆಣ್ಣಿನ ಬಾಣತನಾ ಆಯ್ತು. ಸೂರ್ಯಾ ಚಂದ್ರಾಮನಂಥ ಗಂಡ ಕೂಸು ಲಕಲಕ ಹೊಳೀತಿತ್ತು. ಆದರ, ಅಪ್ಪೇಸಿ ಕೂಸು. ಹಡದ ಅವ್ವನ ಉಳಿಸಿಕೊಳ್ಳೋ ಭಾಗ್ಯ ಅದಕ್ಕ ಇರಲಿಲ್ಲ. ಅದರ ಅವ್ವನ ಹಾಲತ್ತು ಆ ಬಾಣತನದಲ್ಲಿ ಬದುಕಿ ಉಳಿಯುವಂಗಿರಲಿಲ್ಲ. ಈ ಸಂಗತಿ ಆಕೆಗೂ ತಿಳೀತು. ಆಕಿ ಡಾಕ್ಟರ ಮುಂದ ಕೈ ಜೋಡಿಸಿ ಕೇಳಿಕೊಂಡಳು. ಆಗ ದೊಡ್ಡ ಡಾಕ್ಟರ ಇದ್ರು. ಒಬ್ರೇ ಎಲ್ಲಾ ನೋಡ್ಕೋತಿದ್ರು. ಈಗಿನ ಡಾಕ್ಟರ ಕೈಯಾಗ ಮೂರ್ನಾಕ ಮಂದಿ ಮರಿ ಡಾಕ್ಟರಗೋಳು ಇದ್ದಾರೆ.''

ಆಯಾನ ಮಾತು ವಿಷಯಾಂತರ ಆಗ್ತಾ ಇದೆ ಎಂದು ಪ್ರಕಾಶನಿಗೆ ಅನಿಸಿತು. ವಿಷಯದ ಕಡೆಗೆ ಆಕೆಯ ಗಮನ ಸೆಳೆಯುತ್ತ ಆತ ಕೇಳಿದ, ''ಆ ಹೆಣ್ಮಗಳು ಏನಂತ ಕೇಳಿಕೊಂಡಳು ?''

ಮತ್ತೆ ತನ್ನ ವಿಷಯದ ಹಳಿಯ ಮೇಲೆ ಬರುತ್ತ ಆಯಾ ತನ್ನ ಮಾತು ಮುಂದುವರಿಸಿದಳು, ''ಡಾಗ್ದರ ಸಾಬ್ರೆ! ನಾನು ಬಸವಿ. ನನಗ ಯಾರೂ ಇಲ್ಲ. ಇನ್ನ ನಾನು ಬದುಕೂದಿಲ್ಲ. ನನ್ನ ಕೂಸು ಅನಾಥ ಆಗಬಾರ್ದು. ಅದು ಎಲ್ಲ್ಯಾದ್ರೂ ಬದುಕಲಿ. ಯಾರಿಗಾದ್ರೂ ದಾನಾ ಮಾಡ್ರಿ... ಇಷ್ಟು ಹೇಳೋದರೊಳಗೆ ಆಕೆಗೆ ಬಿಕ್ಕು ಸುರುವಾಯ್ತು. ಬಿಕ್ಕುತ್ತಾನೇ ತೊದಲಿದಳು – ನನ್ನ ಕುಡಿ ಉಳೀಬೇಕು, ನನ್ನ ಹೆಸರು ಉಳೀಬೇಕು... ಮುಂದ ಆಕೀಗೆ ಮಾತೇ ಬರಲಿಲ್ಲ. ಸ್ವಲ್ಪ ಹೊತ್ತಿನ್ಯಾಗೇ ಆಕೆಯ ಜೀವ ಹಾರಿಹೋಗಿತ್ತು.''

''ಮುಂದ ಆ ಮಗೂನ ಏನ ಮಾಡಿದ್ರಿ ?'' ಪ್ರಕಾಶ ಕೇಳಿದ.

''ನಾನೇ ನನ್ನ ಕೈಯಾರೆ ಆ ಕೂಸಿಗೆ ಎತ್ಕೊಂಡು ಹೋಗಿ ಮಾದೇಮ್ಮನ ಮಗಲಾಗ ಮಲಗಿಸಿದೆ. ಆಕೆ ಗಂಡಸಿಗೆ ಓಡಿಸಲಾರದಷ್ಟು ಹಿಗ್ಗಾಗಿ ಅಂವನ ಕಣ್ಣಾಗ ಬಳಬಳಾ ನೀರು ಸುರಿಯಾಕ ಹತ್ತಿತು. 'ತಂಗಿ, ನಿನ್ನ ಉಪಕಾರ ನಾ ಎಂದಿಗೂ ಮರ್ಯ್ಯಾಂಗಿಲ್ಲ, ಆದರ ಕೈ ಮುಗದ ಕೇಳ್ಕೋತೀನಿ. ಆ ಮಾತು ಬೈಲಿಗೆ ಹಾಕೋದು ಬ್ಯಾಡ' ಅಂತ ಹೇಳಿ ಬೇಸುದ್ದ ಆಗಿ ಬಿದ್ದಿದ್ದ ಮಾದೇಮ್ಮನ ಕೊಳ್ಳಾನ ಒಂಟೆಳಿ ಸರ ತೆಗೆದು ನನ್ನ ಕೊಳ್ಳಿಗೆ ಹಾಕಿದ್ದ ಪುಣ್ಯಾತ್ಮಾ. ಈ ಸಂಗತಿ ನಂಗ, ಅಂವಗ ಮತ್ತ ಡಾಕ್ಟರಗ ಬಿಟ್ರ ಮತ್ಯಾರಿಗೂ ತಿಳಿದಿರಲಿಲ್ಲ. ಇವೊತ್ತ ಏನೋ ನಿನ್ನ


ಚುನಾವಣೆ ಮುಗಿದು ಒಂದು ವಾರದೊಳಗೆ ಸೀರೆ ಬಣ್ಣಹೋಯ್ತು...! ಕೊಟ್ಟ ಟಿ.ವಿ. ಎಕ್ಕುಟ್ಹೋಯ್ತು...!!

ಎದುರಿಗೆ ಬಾಯಿ ಬಿಚ್ಚೇನಿ.''

ಪ್ರಕಾಶನ ಸಂಶೋಧನೆಗೆ ಇನ್ನೊಂದು ಹೊಸ ವಿಷಯ ಸಿಕ್ಕಂತಾಯಿತು. ''ಯವ್ವಾ, ಆ ಮಾದೇವಮ್ಮನ ಗಂಡನ ಹೆಸರ ಹೋಗ್ಲಿ, ಅಡ್ಡ ಹೆಸರೇನಾದ್ರೂ ನೆಪ್ಪ ಅದಾ ಏನು ?''

''ಒಂಟೆಳಿ ಸರ ತೊಡಿಸಿದ ಆಕೀ ಗಂಡ ಪುಣ್ಯಾತ್ಮನ ಹೆಸರೇ ನೆಪ್ಪಿಲ್ಲಂದ್ರ ಅಡ್ಡ ಹೆಸರ ಎಲ್ಲಿಂದ ನೆಪ್ಪಿರಬೇಕು, ಮಗಾ ?''

ಇಷ್ಟು ಮಾಹಿತಿಯ ಆಧಾರದ ಮೇಲೆ ಪ್ರಕಾಶನು ತನ್ನ ಸಂಶೋಧನೆಯ ತಲೆ ಓಡಿಸಹತ್ತಿದ. ಏನೇ ಆಗಲಿ, ಆ ಮಾದೇವಮ್ಮಾ ಬೇರೆ ಯಾರೂ ಅಲ್ಲ, ನಮ್ಮೂರಿನ ಬಸವೇಗೌಡರ ಅವ್ವನೇ ಆಗಿರಬೇಕು. 'ಮಾ'ದಿಂದ ಸುರುವಾಗುವ ಆಕೆಯ ಗಂಡನ ಹೆಸರು ಮಾದೇಗೌಡರೇ ಇರಬೇಕು. ಹಾಗಾದರೆ? ಪ್ರಕಾಶನ ತಲೆಯಲ್ಲಿ ವಿದ್ಯುತ್ತಿನ ಕಿಡಿ ಹರಿದಾಂಗಾಯಿತು. ಬಸವೇಗೌಡರು ಮಾದೇವಮ್ಮ ಮತ್ತು ಮಾದೇಗೌಡರಿಗೆ ಹುಟ್ಟಿದ ಮಗ ಅಲ್ಲ, ಆ ಸಂಗತಿ ಮಾದೇವಮ್ಮನಿಗೂ ಗೊತ್ತಿರಲಿಲ್ಲ. ಮಾದೇಗೌಡರು ಸಾಯೋತನಕ ಈ ಗುಪಿತ ಬಾಯಿ ಬಿಟ್ಟಿರಲಿಲ್ಲ. ಖರೇವಂದ್ರೂ ಬಸವೇಗೌಡರು ಬಸವಿಯ ಮಗ. ಆಕೆ ಸಾಯೋ ಮುಂದ ''ನನ್ನ ಕುಡಿ ಉಳೀಬೇಕು, ನನ್ನ ಹೆಸರು ಉಳೀಬೇಕು'' ಎಂದು ನುಡಿದಿದ್ದಳಂತೆ. ಆಕೆಯ ಹೆಸರು ಉಳಿಸೋದಕ್ಕಾಗಿಯೇ ಮಾದೇಗೌಡರು ಮಗುವಿಗೆ ಬಸವಿಯ ಮಗ 'ಬಸವ' ಎಂದು ಇಟ್ಟಿರಬೇಕು. ಗೌಡರು ತಮ್ಮ ಮಗನಿಗೆ ಕಲ್ಯಾಣದ ಬಸವಣ್ಣನ ಹೆಸರು ಇಟ್ಟಾರ ಅಂತ ಜನ ಮಾತಾಡಿಕೊಂಡರ ಮಾದೇಗೌಡರು. 'ಹಂಗೇ ತಿಳ್ಕೋರಿ, ಏನ ಫರಕ ಬೀಳಲ್ಲ' ಅಂತ ನುಡಿದು ಮಾತು ಹಾರಿಸಿಬಿಡುತ್ತಿದ್ದರಂತೆ. ಈ ಸಂಗತಿಗಳೆಲ್ಲ ಏನು ಹೇಳುತ್ತವೆ ? ಬಸವೇ ಗೌಡರು ಮಾದೇಗೌಡರ ಉದರ ಸಂಜಾತ ಮಗನಲ್ಲ, ಕರ ಸಂಜಾತ ಮಗನೆಂದು ಸಾರಿ ಹೇಳುತ್ತವೆ. ಅದಕ್ಕಾಗಿಯೇ ಬಸವೇಗೌಡರು ಯಾವಾಗಲೂ ಬಂಜೇರ ಕೇರಿಯ ಜೊತೆಗೆ ಭಾವನಾತ್ಮಕ

ಸಂಬಂಧ ಬೆಳೆಸಿಕೊಂಡಿದ್ದಾರೆ. ಅವರ [illegible] ಅವರನ್ನು ಈ ಕಡೆಗೇ ಎಳೆದು ತರುತ್ತವೆ.

ಇಂಥ ಒಂದು ಅದ್ಭುತ ರಹಸ್ಯವನ್ನು ಊರಿನ ಜನರ ಮುಂದೆ ಬಿಚ್ಚಿಟ್ಟರೆ ಎಂಥ ಕೋಲಾಹಲವೆದ್ದೀತು! ಬಸವೇಗೌಡರ [illegible] ಬಯಲಿಗಿಟ್ಟಂತಾಗುತ್ತದೆ. ಈ ಹಿಗ್ಗಿನಲ್ಲಿ ಪ್ರಕಾಶ ರಾಸೂರಿಗೆ ಹಿಂದಿರುಗಿದ.

ತನ್ನಂಥ ಪ್ರಗತಿಪರ ವಿಚಾರವುಳ್ಳಂಥ ಗೆಳೆಯರನ್ನು ಕೂಡಿಸಿಕೊಂಡು ತನ್ನ ಹೊಸ ಸಂಶೋಧನೆಯ [illegible] ಬಗ್ಗೆ ಚರ್ಚಿಸಹತ್ತಿದ. ಒಬ್ಬ ಗೆಳೆಯ ಒಂದು ಅನುಮಾನ ಮುಂದಿಟ್ಟ. ''ಬಸವೇಗೌಡರು ನೋಡಿದ್ರ ಅರವತ್ತರ ಹತ್ತಿರದವರು ಅಂತ ಕಾಣಸ್ತದ. ನಿನಗ ಆ ಆಯಾ ಹೇಳಿದ ಸಂಗತಿ ನೋಡಿದರ ಅಷ್ಟು ಹಳೇದು ಅಂತ ಅನಸೂದಿಲ್ಲ. ಈ ಎರಡಕ್ಕೂ ಹ್ಯಾಂಗ ಸಂಗತಿ ಕೂಡ್ತಾದಪಾ ?''

''ಭಾಳ ಶ್ಯಾಣ ಆಗಿದಿ ನೋಡೋ, ತಿಪ್ಪಾ. ಮಗನ, ಹಿಂದಕ್ಕ ನಮ್ಮೂರಾಗ ಯಾರಾರೇ ಹುಟ್ಟಿದ ವ್ಯಾಳ್ಯಾ, ತಾರೀಕು ವಗೈರೆ ಡೈರಿ ಬರ್ದು ಇಟ್ಟಾರೇನಲೆ, ನನ ಮಗನೆ ? ಎಲ್ಲಾ ಅಂದಾಜ ಪಂಚೇನ ಧಾಗೋದರ್ಸೇ ಲೆಕ್ಕ. ಆದರ ದವಾಖಾನ್ಯಾಗ ದಾಖಲಾಗಿರೋದನ್ನು ಸುಳ್ಳಂತ ಸಾಬೀತ ಮಾಡ್ಲಾಕ ಸಾಧ್ಯನೇ ಇಲ್ಲ, ತಿಳ್ಕೋ.'' ಪ್ರಕಾಶ ತನ್ನ ಪಕ್ಷವನ್ನು ಸಮರ್ಥಿಸಿಕೊಂಡ.

ರಾಸೂರು ಅಂಥ ಶ್ಯಾರಪ್ಯಾಟಿ ಏನೂ ಅಲ್ಲ. ಬಂಜೇರ ಕೇರಿಯಲ್ಲಿ ನಡೆದ ಈ ಗುಪ್ತ ಮಾತುಕತೆಯ ಹೊಗೆ ಬಾಜಾರಕ್ಕೆ ಬರಲು ತಡವಾಗಲಿಲ್ಲ. ಎಲ್ಲರಲ್ಲೂ ಗುಸುಪುಸು ಶುರುವಾಗಿ ಇದೇ ಮಾತು ಮೊಳಕೆಯೊಡೆದು ಬೆಳೆಯಹತ್ತಿತು. ಊರಿಗೆ ಖಾಂದಾನಿ ಮನೆತನಗಳ ಪಡಸಾಲೆಯಿಂದ ಹಿಡಿದು ಅಡಿಗೆಮನೆ, ಹಿತ್ತಲ ಮನೆಯವರೆಗೂ ಇದೇ ಚರ್ಚೆಯಾಗಹತ್ತಿತು.

ಒಂದು ದಿನ ಬಸವೇಗೌಡರಿಗೂ ಇದರ ವಾಸನೆ ಬಡಿಯಿತು. ಒಬ್ಬಿಬ್ಬರಾಗಿದ್ದರೆ ಅವರ ಬಾಯಿ ಮುಚ್ಚಿಸಬಹುದಾಗಿತ್ತು. ಈಗ ಊರಿನ ತುಂಬ ಹೊಗೆ ಆವರಿಸುತ್ತಿದೆ. ಇದಕ್ಕೆ ಏನಾದರೂ ಇಲಾಜು ಮಾಡದೇ ಹೋದರೆ ಈ ಹೊಗೆ ಬಲಿತು ಬೆಂಕಿಯಾಗಿ, ಜ್ವಾಲೆಯಾಗಿ ತನ್ನನ್ನು ಸುಟ್ಟು ಭಸ್ಮ ಮಾಡಬಹುದು ಎಂದು ಬಸವೇಗೌಡರಿಗೆ ಚಿಂತೆಯಾಯಿತು. ಇಂಥ ಇಕ್ಕಟ್ಟಿನ ಸಂದರ್ಭಗಳಲ್ಲಿ ಅವರಿಗೆ ಸರಿಯಾದ ಹಾದಿ ತೋರಿಸುವವರೆಂದರೆ ಕುಲಕರ್ಣಿ ರಾಮರಾಯರು ಮಾತ್ರ.

ರಾಮರಾಯರನ್ನು ಏಕಾಂತದಲ್ಲಿ ಕರೆದು ಬಸವೇಗೌಡರು ಸಲಹೆ ಕೇಳಿದರು. ಇದೇನಂಥ ತಲೆ ಹೋಗುವ ಸಮಸ್ಯೇನೇ ಅಲ್ಲ ಅನ್ನುವಂಥ ನಿಷ್ಕಾಳಜಿಯಿಂದ ದೇಶಾವರಿ ನಗೆ ನಗುತ್ತ ರಾಮರಾಯರು ಹೇಳಿದರು –

''ಇದೇನಪಾ ಗೌಡ್ರೇ! ಇಂಥದ್ದಕ್ಕೆಲ್ಲ ತಲೀ ಕೆಡಿಸಿಕೋತಾರೇನಪಾ ? ಊರ ತುಂಬ ಹೊಗಿ ಆಡ್ತಾ ಇದೆ ಅಂದ್ರ ಹೊಗಿ ಉಗಳೋ ಕಟಗೀಗೆ ಬೆಂಕಿ ಹತ್ಯಾದ ಅಂತ ಅರ್ಥ. ಆ ಕಟಗೀನೇ ಇಲ್ಲಾಂತ ಅನಿಸಿ ಬಿಟ್ರಾತಪಾ ! ಸರಳ ಸಮೀಕರಣ ಅದು.''

''ಅಂದ್ರ ? ನೀವನ್ನೋದು [illegible] ಮುಗಿಸಿ...''

ಬಸವೇಗೌಡರು ಮಾತನ್ನು ಅರ್ಥಕ್ಕೆ ತಡೆದ[illegible]

''ಹ್ಹಾಂ! ಹ್ಹಾಂ! ಹಂಗೇ [illegible]

ಮಾತಾಡಬಾರ್ದು ರೀ ಗೌಡರೇ, ಮಾಡೀ ತೋರಿಸ್ಬೇಕು. ಆಡಿ ಕೆಡಬ್ಯಾಡೆಲೋ ಮನುಜಾ ಅಂತ ದಾಸರು ಹೇಳ್ಯಾರೇನಪಾ'' ರಾಮರಾಯರು ಹಿತವಾದ ಮಾತು ನುಡಿದರು.

ಅಷ್ಟರಲ್ಲಿ ಇವರು ಕುಳಿತ ಕೋಣೆಯ ಬಾಗಿಲಿನ ಹೊರಗೆ ಕರಸಿಯ ಮೇಲೆ ಕುಳಿತಿದ್ದ ಬೆಕ್ಕೊಂದು ಚಂಗನೇ ನೇರವಾಗಿ ನೆಲದ ಮೇಲಿದ್ದ ಕಬ್ಬಿಣದ ಬುಟ್ಟಿಯೊಂದಕ್ಕೆ ಹಾರಿತು. ಬುಟ್ಟಿ ಟರ್ರಪರ್ರ ಎಂದು ಕುಣಿಯಹತ್ತಿತು.

''ಯಾರು ?... ಯಾರಿದ್ದೀರಿ ?...'' ಎಂದು ಕೂಗುತ್ತ ಬಸವೇಗೌಡರು ಕೋಣೆಯಿಂದ ಹೊರಗೆ ಓಡಿಬಂದರು. ಅವರ ದನಿ ಕೇಳಿಯೇ ಒಂದು ಕಪ್ಪು ಆಕೃತಿ ಅಲ್ಲಿಂದ ಓಡಿಹೋಗುತ್ತಿರುವುದನ್ನು ಅವರು ಕಣ್ಣಾರೆ ಕಂಡರು. ಓಡಿಹೋಗಿ ಹಿಡಿಯಬೇಕೆನ್ನುವಷ್ಟರಲ್ಲಿ ಆ ಆಕೃತಿ ಮಟಾಮಾಯವಾಯಿತು. ಮನೆಯವರಂತೂ ಅಲ್ಲ ಎಂದು ಗೌಡರಿಗೆ ಖಾತ್ರಿಯಾಯಿತು. ಯಾವನೋ ಕಳ್ಳ ಬಂದಿದ್ದನೋ ಏನೋ ಎಂದು ತಿಳಿದು ಆಳು ಮಕ್ಕಳಿಗೆಲ್ಲ ಎಚ್ಚರದಿಂದ ಇರಬೇಕೆಂದು ತಾಕೀತು ಮಾಡಿದರು.

ಗೌಡರ ಮನೆಯಿಂದ ಓಡಿಹೋದ ವ್ಯಕ್ತಿ ನೇರವಾಗಿ ಪ್ರಕಾಶನನ್ನು ಹುಡುಕಿಕೊಂಡು ಬಂದ. ಹಿತ್ತಲಿನಲ್ಲಿ ಏನೋ ಕೆಲಸ ಮಾಡುತ್ತ ನಿಂತಿದ್ದ ಪ್ರಕಾಶನಿಗೆ ತಾನು ಕೇಳಿದ ಸಂಗತಿಯನ್ನು ತುಣುಕು ತುಣುಕಾಗಿ ವಿವರಿಸಿ ಹೇಳಿದ. ಓಡಿ ಬಂದ ಆಯಾಸದಿಂದ ಆತ ತೇಗುತ್ತಿದ್ದ. ಸರಿಯಾಗಿ ಮಾತುಗಳು ಹೊರಡುತ್ತಿರಲಿಲ್ಲ. ಆದರೆ ಪ್ರಕಾಶನು ಆ ಹರಕು ಮಾತುಗಳ ಕೊಂಡಿಯನ್ನು ಜೋಡಿಸಿಕೊಂಡು ವಿಷಯವೇನೆಂದು ತಕ್ಷಣ ಅರ್ಥ ಮಾಡಿಕೊಂಡ.

''ಹೀಂಗ ? ಆ ಕುಲಕರ್ಣಿ ನನ್ನ ಮುಗಿಸಿಬಿಡು ಅಂತ ಹೇಳಿದ್ನ? ಅವ್ನ ಮಾತಿಗಿ ಆ ಗೌಡನೂ ಹ್ಞೂಂ ಅಂದ್ನ ? ಈ ಪ್ರಕಾಶ ಅಂದರ ಏಂತ ತಿಳಕೊಂಡಾರ ಅವ್ರು ? ನಾ ಏನಿದ್ದೀನಿ ಅಂಬೋದು ತೋರಿಸ್ತೀನಿ ಆ ಶಿವದಾರ ಜನಿವಾರಗೊಳಿಗಿ...''

ಪ್ರಕಾಶ ಆರ್ಭಟಿಸಿ ನುಡಿಯುತ್ತಿದ್ದ. ಅಡಿಗೆ ಮನೆಯಿಂದ ಮುಸುರೆ ಚೆಲ್ಲಲು ಹಿತ್ತಲಿಗೆ ಬಂದಿದ್ದ ಮಲ್ಲಕ್ವನ ಕಿವಿಗೆ ಈ ಮಾತುಗಳು ಬಿದ್ದುವು.

''ಏನೋ ಬೆಳ್ಯಾ ? ಯಾರು ಏನ ಮಾಡ್ತಾರಂತೋ ? ಗೌಡಾ ಕುಲಕರ್ಣಿ ಅಂತ ಏನೋ ಅಡ್ರಾಸಿ ಮಾತಾಡತಿದ್ದಿ ?'' ಮಲ್ಲಕವ್ವ ಕೇಳಿದಳು.

''ಅದೆಲ್ಲ ನಿಂಗ ತಿಳ್ಯಾಲ. ನೀ ಸುಮ್ಮನಿರು ಯವ್ವಾ. ಈ ಮ್ಯಾಲಿನ ಕೇರ್‍ಯಾವ್ನಿಗಿ ಸೊಕ್ಕ ಬಂದಾದ...'' ಪ್ರಕಾಶ ಗುಡುಗಿದ.

''ಅವ್ರು ಏನರೇ ಮಾಡಿಕೊಳ್ಲಿ. ನೀ ಯಾಕ ಅವ್ರ ತಂಟೆಗೆ ಹೋಗ್ತಿ ? ಬಸವೇಗೌಡ್ರ ಬಗ್ಗೆ ಏನೇನೋ ಸುದ್ದಿ ಹಬ್ಬಿಯಂತ. ಇದೆಲ್ಲ ಛಲೋದಲ್ಲ.'' ಆಕೆ ಮಗನಿಗೆ ತಿಳಿಹೇಳಲು ಪ್ರಯತ್ನಿಸಿದಳು.

''ನೀ ಏನ್ ಗಾಬರ್‍ಯಾಗಬೇಡ ಯವ್ವ. ನಿನ್ನ ಮಗ ಯಾವುದಕ್ಕೂ ಅಂಜಾವಲ್ಲ'' ಎಂದು ಹೇಳಿ ಮಲ್ಲಕ್ವನ ಬಾಯಿ ಮುಚ್ಚಿಸಿದ.

* * *

ಆ ದಿನ ರಾತ್ರಿ ಮಲ್ಲಕ್ವನಿಗೆ ನಿದ್ದೆಯೇ ಬರಲಿಲ್ಲ. ಎಡ ಮಗ್ಗುಲದಿಂದ ಬಲ ಮಗ್ಗುಲಿಗೆ, ಬಲ ಮಗ್ಗುಲದಿಂದ ಎಡ ಮಗ್ಗುಲಿಗೆ ಹೊರಳಾಡುವುದರಲ್ಲೇ ಸರಿರಾತ್ರಿ ಯಾಗಿರಬೇಕು. ಮಲ್ಲಕ್ವನ ಬೆನ್ನು ನೆಲಕ್ಕೆ ಹತ್ತದಂತಾಯಿತು. ಆಕೆ ಹಳೂಕ ಎದ್ದು ಸುತ್ತಮುತ್ತ ನೋಡಿದಳು. ಎಲ್ಲಾ ಕಡೆಗೂ ಸಾಮಸೂಮ ಇತ್ತು. ಮಲಗಿದವರು ಗೊರಕೆ ಹೊಡೆಯುತ್ತಿದ್ದರು. ಆಕೆ ಮೆಲ್ಲಗೆ ಎದ್ದು ಹೊರಬಾಗಿಲ ಕಡೆಗೆ ನಡೆದಳು. ಅಕಸ್ಮಾತ್ತಾಗಿ ಯಾರಾದರೂ ನೋಡಿದರೆ ಅಂತ ಅನುಮಾನಪಟ್ಟು ಕೈಯಲ್ಲಿ ಒಂದು ತುಂಬಿದ ತಂಬಿಗೆ ಹಿಡಿದು ಬೈಲಕಡಿಗೆ ಹೋಗಾವ್ಯಾಂಗ ಕಳ್ಳ ಹೆಜ್ಜೆ ಇಡುತ್ತ ಮನೆಯ ಬಾಗಿಲಿನ ಹೊರಗಾದಳು.

ಆ ಕಡೆ ಪ್ರಕಾಶನಿಗೂ ಮನಸ್ಸಿಗೆ ಬೇಚೈನಾಗಿ ನಿದ್ದೆ ಹಾರಿ ಹೋಗಿತ್ತು. ಈ ಗೌಡಾ ಕುಲಕರ್ಣೇರ ಹಲ್ಲು ಹ್ಯಾಂಗ ಮುರೀಬೇಕು ಎಂದು ಲೆಕ್ಕ ಹಾಕುತ್ತ ಹಾಸಿಗೆಯ ಮೇಲೆ ಹೊರಳ್ಯಾಡುತ್ತಿದ್ದ. ಮಲ್ಲಕವ್ವ ಎಷ್ಟೇ ಎಚ್ಚರದಿಂದ ಬಾಗಿಲು ತೆರೆದರೂ ಅದು ಒಂದಿಷ್ಟು 'ಕಿರ್ರ್ಽಽಽ' ಎಂದು ಶಬ್ದ ಮಾಡಿತು. ಪ್ರಕಾಶನೂ ಸದ್ದಿಲ್ಲದಂತೆ ಎದ್ದು ನೋಡಿದ. ಅವ್ವ ಹೊರಗೆ ಹೋಗುತ್ತಿದ್ದಾಳೆ. ಕೈಯಲ್ಲಿ ತಂಬಿಗೆ ಇದೆ. ಇಂಥ ಅಪರಾತ್ರಿಯಲ್ಲಿ ಹೊರಗೆ ಬೈಲಕಡಿಗೆ ಹೋಗೋ ಬದ್ಲು ಹಿಂದೆ ಹಿತ್ತಲಲ್ಲೇ ಕೂಡ ಬಹುದಿತ್ತಲ್ಲ! ಹಿಂದೆ ಎಷ್ಟೋ ಸಾರೇ ಹೆಂಗಸರು ಹಾಗೆ ಮಾಡಿದ್ದುಂಟು. ಈಕೆ ಹೊರಗೆ ಯಾಕೆ ಹೋಗುತ್ತಿರ ಬಹುದು ? ಪ್ರಕಾಶನಿಗೆ ಏನೋ ಅನುಮಾನ ಮೂಡಿತು. ಅವನೂ ಆಕೆಯ ಹಿಂದೆ ಜಾಡು ಹಿಡಿದು ನಡೆದ.

ಗೊತ್ತಿಲ್ಲದಂತೆ ಮಲ್ಲಕ್ವನ ಕಾಲುಗಳು ಆ ಕಾಳಾಂಧಕಾರದಲ್ಲಿ ಆಕೆಯನ್ನು ನೇರವಾಗಿ ಬಸವೇಗೌಡರ ತೋಟದ ಮನೆಗೆ ಎಳೆದೊಯ್ದುವು. ಬಾಗಿಲಿಗೆ ಹೊರಗೆ ಕೊಂಡಿ ಇರಲಿಲ್ಲ. ಬಾಗಿಲು ಬಡಿಯಲೇ ಎಂದು ಆಕೆ ಕ್ಷಣಹೊತ್ತು ಯೋಚಿಸಿದಳು. ಮುಂದೆ ಏನಾಗಬಹುದು ಎಂದು ತರ್ಕಿಸುವಷ್ಟು ಸಮಾಧಾನ ಆಕೆಗೆ ಇರಲಿಲ್ಲ. ಏನಾದರಾಗಲಿ ಎಂದು ಒಮ್ಮೆ ಬಾಗಿಲು ತಳ್ಳಿ ನೋಡಿದಳು. ಆಗೆ ತಳ್ಳುತ್ತಿದ್ದಂತೆ ಕದ ತಾನೇ ತಾನಾಗಿ ತೆರೆದುಕೊಂಡವು. ಕಳ್ಳ ಹೆಜ್ಜೆಯಿಂದ ಒಳಗೆ ಕಾಲಿಟ್ಟಳು. ಒಂದು ಜೀರೋ ಬಲ್ಬು ಉರಿಯುತ್ತಿತ್ತು. ಅದರ ಮಂದ ಬೆಳಕಿನಲ್ಲಿ ಮಂಚದ ಮೇಲೆ ಗೌಡರು ಅಸ್ತವ್ಯಸ್ತವಾಗಿ ಅಂಗಾತ ಮಲಗಿದ್ದುದು ಕಂಡಿತು. ಮೈಯಲ್ಲಿ ಬನೀನು ಇರಲಿಲ್ಲ. ಸೊಂಟಕ್ಕೆ ಕಟ್ಟಿದ್ದ ಪಂಚೆ ಹರಡಿಕೊಂಡಿತ್ತು. ಅದನ್ನು ನೋಡಿ ಒಂದೇ ಒಂದು ಕ್ಷಣದ ಮಟ್ಟಿಗೆ ಆಕೆಯ ದುಗುಡವೆಲ್ಲ ಮಾಯವಾಗಿ ಗೌಡರ ಬಲಿತ ಅಂಗಾಂಗಗಳಲ್ಲಿ ಮನಸ್ಸು ಸಿಲುಕಿಕೊಂಡಿತು. ಅಷ್ಟರಲ್ಲಿ ಗೌಡರು ಮಗ್ಗುಲು ಬದಲಾಯಿಸಿದರು. ಮಲ್ಲಕವ್ವನಿಗೆ ತಾನು ಬಂದ ಕಾರ್ಯ ಎಚ್ಚರಿಸಿತು.

''ಗೌಡ್ರೆ... ಗೌಡ್ರೇ... ಗೌಡ್ರೇಽಽ...'' ಆಕೆ ಹಗುರವಾಗಿ ಕೂಗಿದಳು.

ಗೌಡರಿಗೆ ಎಚ್ಚರವಾಗಲಿಲ್ಲ.

ಇನ್ನೊಂದಿಷ್ಟು ಜೋರಾಗಿ ಕೂಗಿದಳು.

ಗೌಡರು ತಡಬಡಿಸಿಕೊಂಡು ಎದ್ದು ಗಾಬರಿಯಾಗಿ, ''ಯಾರು ?... ಯಾರು ?...'' ಎಂದು ಕೂಗಿಕೊಳ್ಳುತ್ತ ಬಿಚ್ಚಿ ಹೋಗಿದ್ದ ಪಂಚೆಯನ್ನು ಸರಿಪಡಿಸಿಕೊಳ್ಳಹತ್ತಿದರು.

''ನಾನು ಗೌಡ್ರೇ ! ಸಿಂಗೇರ ಮಲ್ಲಿ.''

ಗೌಡರು ದಿಗಿಲುಗೊಂಡರು. ''ಈಗ್ಯಾಕ ಬಂದಿ ? ನಾ ಏನ ನಿನಗ ಬಾಂತ ಹೇಳಿ ಕಳ್ಸಿದ್ದಿಲ್ಲ...'' ಎಂದು ಅವರು ಸಿಡಿಮಿಡಿಗೊಂಡು ಕೇಳಿದರು.

''ನಾನೇ ಬಂದೇನಿ. ಇವೊತ್ತು ಸಂಜೀಮುಂದ ನೀವೂ ಕುಲಕರ್ಣ್ಯಾರು ಏನೋ ಮಾತಾಡಿಕೊಂಡ್ರೆಂತ ಕೇಳ್ದೆ.'' ಆಕೆ ದುಗುಡದಿಂದ ಕೇಳಿದಳು.

''ಹಾಂಗಽಽ! ಕಳ್ಳಂತ ತಿಳಿದಿದ್ದ ಆ ಸೂಳೆಮಗ ಕೈಗೆ ಸಿಗ್ದೆ ಓಡಿಹೋಗಿ ನಿನಗ ಸುದ್ದಿ ಮುಟ್ಸ್ಯಾನನ್ನು.''

''ಸುದ್ದಿ ಹ್ಯಾಂಗರೆ ಮುಟ್ಟಲಿರ್ಲಿ, ಗೌಡ್ರೆ. ನನ್ನ ಬೆಳ್ಯಾನ ಜೀಂವಕ್ಕ ಧೋಕಾ ಮಾಡಬ್ಯಾಡ್ರಿ. ಏನೋ ನಿಮ್ಮ ಪರಸಾದದಿಂದ ನನ್ನ ಹೊಟ್ಯಾಗ ಅದೊಂದು ಕುಡಿ ಮೂಡಿ ನನ್ನ ಬಂಜೆತನ ಅನ್ನೋ ಕಳಂಕ ತೊಳ್ದು ಹಾಕ್ಯಾದ. ಅದು ಹೊರ್ಗಿಂದಲ್ಲ, ದೇವ್ರು, ಒಳಗಿಂದೇ... ನಿಮ್ಮೊಳಗಿಂದೇ...'' ಆಕೆ ರೋದಿಸಹತ್ತಿದಳು.

''ಈ ಮಾತು ನಂಗ ನಿಂಗ ಗೊತ್ತದ. ನಿನ್ನ ಮಗಗ ಗೊತ್ತಾದ ಏನು ? ಗೊತ್ತಿದ್ದರ ಹೀಂಗ ನನ್ನ ಮ್ಯಾಲ ರಾಡಿ ಎರಚೋ ಕೆಲಸ ಮಾಡ್ತಿದ್ನೇನು ? ಅಂವನಿಗೆ ಬುದ್ಧಿ ಕಲಿಸ್ಲೇಬೇಕು. ಅಂದ್ರ ತಿಳೀತದ...'' ಎಂದು ಗೌಡರು ಹಾರಾಡಹತ್ತಿದರು.

''ಬ್ಯಾಡ ಗೌಡ್ರೆ, ನಮ್ಮಿಬ್ಬರ ಬಿಟ್ಟು ಈ ಗುಪಿತ ಬ್ಯಾರೆ ಯಾರಿಗೂ ಗೊತ್ತಾಗೋದು ಬ್ಯಾಡ, ದೇವ್ರು. ಮುಷ್ಟ್ಯಾಗ ಇಷ್ಟು ದಿನ ಮುಚ್ಚಿಟ್ಟಿದ್ದು ಈಗ ಬಯಲು ಮಾಡೋದು ಬ್ಯಾಡ. ಮುಚ್ಚಿದ ಮುಷ್ಟಿ ಮುಚ್ಚೇ ಇರ್ಲಿ. ನಾ ಎಲ್ಲಾ ನೋಡ್ಕೋತೀನಿ. ಅಂವನಿಗೆ ಬುದ್ದಿ ಹೇಳ್ತೇನಿ. ನಿಮ್ಮ ಹೆಸರಿಗೆ ಬರ್ಲಾರ್ದಂಗ ನೊಡ್ಕೋತೀನಿ. ಇವೊತ್ತು ಜೋಗಿಣಿಯಾಗಿ ಉಡಿ ಚಾಚಿ ಜೋಗಾ ಬೇಡಾಕ ಬಂದೇನಿ. ಜೋಗಾ ಇಲ್ಲ ಅನ್ಬ್ಯಾರ್ದು ದೇವ್ರು...''

ಮಲ್ಲಕವ್ವ ಗೌಡರ ಕಾಲ ಮೇಲೆ ಬಿದ್ದು ಹೊರಳಾಡಹತ್ತಿದಳು.

ಹೊರಗೆ ನಿಂತಿದ್ದ ಪ್ರಕಾಶನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು, ನೆಲ ಕುಸಿದಂತಾಯಿತು. ನೂರಾರು ಚೇಳುಗಳು ಏಕಕಾಲಕ್ಕೆ ಕಡಿದಂತಾಯಿತು. ಅವನು ನಿಂತಲ್ಲಿಯೇ ಕುಸಿದುಬಿದ್ದ.



ಭಾಲಚಂದ್ರ ಜಯಶೆಟ್ಟಿ
'ನಮ್ಮ ಮನೆ', ಜಯನಗರ, ಸೇಡಂ ರಸ್ತೆ
ಗುಲಬರ್ಗಾ - ೫೮೫ ೧೦೫

ಇಂದಿನ ಉನ್ನತ ಶಿಕ್ಷಣದ ಮೌಲ್ಯಮಾಪನವು ಹೊಸದಾದ ಸಿ.ಬಿ.ಎಸ್.ಇ. ಪಠ್ಯಕ್ರಮಕ್ಕೆ ಯಾವುದೇ ಹೊಂದಿಕೆ ಇಲ್ಲ ಎಂಬಂತಾಗಿದೆ. ಉಪನ್ಯಾಸಕರುಗಳ ತಲೆಯಲ್ಲಿರುವ ಹಳೆಯ ಮೌಲ್ಯಮಾಪನವೇ ಮುಂದುವರಿದಿರುವುದು ಒಂದು ವಿಪರ್ಯಾಸ. ಅದೇ ರೀತಿಯಲ್ಲಿ ಉತ್ತರ ಪತ್ರಿಕೆಯಲ್ಲಿನ ಪಾಯಿಂಟ್‌ಗಳನ್ನು ಲೆಕ್ಕ ಮಾಡಿ ಅಂಕ ನೀಡಿ ಕಳುಹಿಸುವ ಜಾತೀಯತೆಯ ವ್ಯವಸ್ಥೆ ಒಂದು ಕಡೆಯಾದರೆ, ಇನ್ನೊಂದು ಮಗ್ಗುಲಲ್ಲಿ ವಿದ್ಯಾರ್ಥಿಗಳಲ್ಲಿನ ಹಣ ಮತ್ತು ಪ್ರಭಾವಗಳನ್ನು ಗಣನೆಗೆ ತೆಗೆದುಕೊಂಡು ಆಯ್ಕೆ ಮಾಡಿಕೊಳ್ಳುತ್ತಿರುವ ಕೆ.ಪಿ.ಎಸ್.ಸಿ.ಯ ಕಾರ್ಯ ಎಷ್ಟರಮಟ್ಟಿಗೆ ಸರಿ ? ಈ ರೀತಿಯ ಮೌಲ್ಯಮಾಪನದಿಂದಾಗಿ ನಮ್ಮ ವ್ಯವಸ್ಥೆಯಲ್ಲಿ ಬೋಧಕರಾಗಿ ಆಯ್ಕೆಗೊಳ್ಳುತ್ತಿರುವ ಉಪನ್ಯಾಸಕರು ನಮ್ಮ ಸಮಾಜದ ಜಾಗತಿಕ ಶಿಕ್ಷಣದ ಭವಿಷ್ಯವನ್ನು ಹೇಗೆ ಮೌಲ್ಯೀಕರಿಸುವರು, ಎಂಬುದೇ ನಮ್ಮ ಎದುರಿಗಿರುವ ಬಹು ದೊಡ್ಡ ಪ್ರಶ್ನೆಯಾಗಿದೆ.

# ಜಾಗತೀಕರಣದಲ್ಲಿ ಬದಲಾಗುತ್ತಿರುವ ಉನ್ನತ ಶಿಕ್ಷಣ ಮತ್ತು ಮೌಲ್ಯಮಾಪನ

ವಿಶ್ವದ ಪ್ರಗತಿಯ ವಿದ್ಯಮಾನಗಳಲ್ಲಿ ಜಾಗತೀಕರಣವು ಇಂದು ಅವಿಭಾಜ್ಯ ಅಂಗ ಎನ್ನುವಂತಾಗಿದೆ. 'ಜಾಗತೀಕರಣ' ಆಧುನಿಕ ಜಗತ್ತಿನ ಉಲ್ಲಾಸದ - ಏರುಗತಿಯ ಆದರ್ಶ. ಭಾರತೀಯ ಶಿಕ್ಷಣ ಕ್ಷೇತ್ರದಲ್ಲಿ ಜಾಗತೀಕರಣ ಈಗ ಹಾಸುಹೊಕ್ಕಾಗಿದೆ. ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣದವರೆಗೆ ಜಾಗತಿಕ ಕಾರಣದಿಂದಾಗಿ ಅನೇಕ ಬದಲಾವಣೆಗಳಾಗಿವೆ. ಮೂಲತಃ ಭೌತಿಕ ಪರಿಸರದಲ್ಲಿ, ವಿದ್ಯಾರ್ಥಿಗಳ ಹೊರನೋಟಗಳಲ್ಲಿ, ಪಠ್ಯಪುಸ್ತಕಗಳಲ್ಲಿ ಹಾಗೂ ವಿದ್ಯಾರ್ಥಿಗಳು, ಪೋಷಕರು ಭರಿಸಬೇಕಾದ ಶೈಕ್ಷಣಿಕ ವೆಚ್ಚಗಳಲ್ಲಿ ಬದಲಾವಣೆಗಳು ಕಂಡುಬಂದಿವೆ. ಒಂದು ಶೈಕ್ಷಣಿಕ ಸಂಸ್ಥೆ ಔನ್ನತ್ಯಕ್ಕೆ ಏರಬೇಕಾದರೆ ಅದು ತನ್ನಲ್ಲಡಗಿಸಿಕೊಂಡ ಭೌತಿಕ ಪರಿಸರಕ್ಕಿಂತ ತನ್ನದಾಗಿಸಿಕೊಂಡಿರುವ ಪಾಠ ಪ್ರವಚನಗಳ, ವಿದ್ಯಾರ್ಥಿ ಉಪನ್ಯಾಸಕರುಗಳ, ವಿದ್ಯಾರ್ಥಿ - ವಿದ್ಯಾರ್ಥಿಗಳ ಹಾಗೂ ಉಪನ್ಯಾಸಕ - ಉಪನ್ಯಾಸಕರುಗಳ ನಡುವಿನ ಪರಿಣಾಮಕಾರಿ ಸಂವಹನ ಕ್ರಿಯೆಗೆ ಪ್ರಾಮುಖ್ಯತೆಯನ್ನು ನೀಡಬೇಕಾಗುತ್ತದೆ.

ರಾಷ್ಟ್ರೀಯ ಮಟ್ಟದಿಂದ ಜಾಗತಿಕ ಮಟ್ಟದ ಚಿಂತನೆ ಇಪ್ಪತ್ತೊಂದನೆಯ ಶತಮಾನದ ಆದಿಯಲ್ಲಿ ಪ್ರಚಲಿತವಾಗಿರುವ ಹಿನ್ನೆಲೆಯಲ್ಲಿ ಈ ಚಿಂತನೆಗೆ ಪುಟಗೊಡಲು ಇಂದಿನ ಉಪನ್ಯಾಸಕರು ಜಾಗತೀಕರಣದ ಬಗ್ಗೆ ಅಧ್ಯಯನ ಮಾಡುವ ಅವಶ್ಯಕತೆ ಇದೆ. ತಾವು ಬೋಧಿಸುವ ವಿಷಯಗಳು ಹಾಗೂ ಪ್ರಚಲಿತ ವಿದ್ಯಮಾನಗಳು ಹಾಗೂ ಅವುಗಳ ನಡುವಿನ ಸಂಬಂಧದ ಬಗ್ಗೆ ನಿರಂತರ ಚಿಂತನೆಗೆ ಆದ್ಯತೆ ಕೊಡಬೇಕಾಗುತ್ತದೆ; ಅಧ್ಯಾಪನದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕಾಗುತ್ತದೆ. ಹಾಗೆ ತೊಡಗಿಸಿಕೊಳ್ಳುವಲ್ಲಿ ಶ್ರವಣ, ಮನನ, ನಿದಿಧ್ಯಾಸನ ಹಂತಗಳ ಜೊತೆಗೆ ನಿರಂತರ ಅಧ್ಯಯನ ಮಾಡಲೇಬೇಕಾದ ಅನಿವಾರ್ಯತೆ ಇದೆ. ಆದರೆ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಈಗ ಇದು ನಮ್ಮ ಪ್ರಾಧ್ಯಾಪಕರುಗಳಿಂದ ಸಾಧ್ಯವಾಗುತ್ತಿದೆಯೆ, ಎಂಬ ಪ್ರಶ್ನೆ ಸಹಜವಾಗುತ್ತಿದೆ ಎನಿಸುತ್ತದೆ.

ಇಂದಿನ ವಿದ್ಯಾರ್ಥಿಗಳಿಗೆ ಪದವಿ, ಸ್ನಾತಕೋತ್ತರ ಪದವಿ, ಪಿಹೆಚ್.ಡಿ. ಪದವಿಗಳನ್ನು ನೀಡುತ್ತಿರುವ ವಿಶ್ವವಿದ್ಯಾನಿಲಯಗಳು, ಅಭಿವೃದ್ಧಿಯತ್ತ ಸಾಗುತ್ತಿರುವ ದೇಶಕ್ಕೆ ನಿರುದ್ಯೋಗಿಗಳನ್ನು ಸೃಷ್ಟಿಸಿ ಹೊರಬಿಡುತ್ತಿರುವ ಮೂಲಕ ಶಿಕ್ಷಣದ ವ್ಯಾಪಾರೀಕರಣ ಆಗುತ್ತಿದ್ದು, ಅದು ಕೈಗಾರಿಕೆ, ಮಾರುಕಟ್ಟೆಗಳ ಸಂಬಂಧವಾಗಿ ಬೆಳೆಯುತ್ತಿದೆ.

ಒಂದು ಕೈಗಾರಿಕೆಗೆ ಇರುವಂತಹ ಎಲ್ಲಾ ತರಹದ ರಚನಾತ್ಮಕವಾದ ಕೆಲವು ಅಂಶಗಳು ಇಂದಿನ ವಿಶ್ವವಿದ್ಯಾನಿಲಯಗಳಿಗಿವೆ, ಆದರೆ ಕೈಗಾರಿಕೆಯಲ್ಲಾಗುವಂತಹ ಗುಣಮಟ್ಟದ ಉತ್ಪಾದನೆ ಕಾರ್ಯ ಆಗುತ್ತಿಲ್ಲವಷ್ಟೆ! ಕಲಿಯುವುದರಲ್ಲಿ, ಕಲಿಸುವುದರಲ್ಲಿ ಬರೀ ವ್ಯವಹಾರವಾಗಿರುವ ಇಂದಿನ ಉನ್ನತ ಶಿಕ್ಷಣ ವ್ಯವಸ್ಥೆಯು ಹೊಸ ಹೊಸ ಕೋರ್ಸ್‌ಗಳನ್ನು ಪರಿಚಯಿಸುವುದು, ಹೊಸ ವಿದ್ಯಾರ್ಥಿಗಳಿಗೆ ಸ್ವಾಗತ ನೀಡುವುದು, ಅವರಿಂದ ಸಾಕಷ್ಟು ಹಣ ಪಡೆದು ದಾಖಲಾತಿ ನೀಡುವುದು, ದಾಖಲಾದ ವಿದ್ಯಾರ್ಥಿಗಳು ವಿಶ್ವವಿದ್ಯಾನಿಲಯದ ವಿಶ್ವದೃಷ್ಟಿಯೊಂದಿಗೆ ಉನ್ನತ ಕನಸು, ಮನಸ್ಸಿನ ತುಂಬಾ ಎಲ್ಲಿಲ್ಲದ ಆಸೆ, ಭವಿಷ್ಯದ ಬೆಳಕಿನ ಆಶಾಭಾವನೆಯೊಂದಿಗೆ ಕ್ಯಾಂಪಸ್ಸಿನ ಹಚ್ಚಹಸಿರಿನ ಸೌಂದರ್ಯಕ್ಕೆ ಮನಸೋತು, ಹಾಸ್ಟೆಲ್‌ಗಳಲ್ಲಿನ ಸಪ್ಪೆ ಊಟವನ್ನು ತಿಂದು ಬೇಸತ್ತು, ಹೊಸದಾಗಿ ಬಾರ್, ರೆಸ್ಟೋರೆಂಟ್‌ಗಳಲ್ಲಿನ ಊಟಕ್ಕೆ ಆಸೆಬಿದ್ದು ಕುಡಿಯುವುದನ್ನು ನಿಧಾನವಾಗಿ ಅಭ್ಯಾಸ ಮಾಡಿಕೊಂಡು, ಕ್ಯಾಂಪಸ್ ತುಂಬಾ ಬಣ್ಣದ ಚಿಟ್ಟೆಗಳಂತೇ ನಡೆದಾಡುವ ಹೊಸ ಹುಡುಗಿಯರನ್ನು ನೋಡಿಕೊಂಡು ಲೈಬ್ರರಿ ಪುಸ್ತಕಗಳ ಮೇಲಿನ ದೂಳು ಕೊಡವಿಕೊಂಡು, ಅಲ್ಲಿನ ಪತ್ರಿಕೆಗಳು, ಫಿಲಂಫೇರ್, ವುಮೆನ್ಸ್ ಎರಾ, ಫೆಮಿನಾಗಳಂತಹ ಅನೇಕ ನಿಯತಕಾಲಿಕಗಳ ಪುಟಗಳನ್ನು ತೆರೆಯುತ್ತಾ, ಅರಿಯುತ್ತ, ತಮ್ಮ ಕೈಯಲ್ಲೊಂದು ನೋಟ್‌ಬುಕ್ ಹಿಡಿದುಕೊಂಡೋ ಇಲ್ಲವೆ ಬರೀ ಕೈಲಿ ನಡೆದು, ತಮ್ಮ ವಿಭಾಗಗಳಲ್ಲಿ ಉಪನ್ಯಾಸಕರ ಇಂಟರ್‌ನಲ್ ಅಂಕಗಳಿಗೆ ಹೆದರಿ ವಿನಯಾತಿವಿನಯರಾಗಿ ಅವರು ಏನೇ ಹೇಳಿದರೂ 'ಯೆಸ್ ಸರ್', ಎನ್ನುತ್ತಾ ವರ್ಷದ ಆರಂಭದಲ್ಲಿ ವೆಲ್ಕಂ ಪಾರ್ಟಿಯಲ್ಲಿ ತಲ್ಲೀನರಾಗಿ, ನಂತರ ಪರೀಕ್ಷೆ ಹತ್ತಿರದ ದಿನಗಳಲ್ಲಿ ಸಿಲೆಬಸ್ ನೋಡಿಕೊಂಡು, ಫೋಟೋಕಾಪಿ ಮಾಡಿಸಿಕೊಂಡ ನೋಟ್ಸ್‌ಗಳನ್ನು ಓದಿಕೊಂಡು, ಪಾಯಿಂಟ್‌ಗಳನ್ನು ಕಂಠಪಾಠ ಮಾಡಿಕೊಂಡು, ಪರೀಕ್ಷೆ ಬರೆದು ಹೇಗೋ ಹಾಗೆ ಬರೀ ಪಾಯಿಂಟ್‌ಗಳನ್ನು ನೋಡಿ ಅಂಕಗಳನ್ನು ಕೊಡುವ ಮೌಲ್ಯಮಾಪಕರ ತಲೆಯಂತೆಯೇ ಪಾಸ್ ಆಗಿಯೋ ಅಥವಾ ರ್‍ಯಾಂಕ್ ಗಳಿಸಿ ಕೊನೆಗೆ 'ಸೆಂಡ್ ಆಫ್' ಸಮಾರಂಭದಲ್ಲೊಮ್ಮೆ ಹೀರೋ ಆಗಿ ಮಿಂಚಿ, ಕೊನೆಯ ಭವಿಷ್ಯದ ಪುಟಗಳಿಗೆ ಆಟೋಗ್ರಾಫ್ ಹಾಕಿಸಿಕೊಂಡು ಎರಡು ವರ್ಷದ ಕೋರ್ಸ್ ಮುಗಿಸಿ ಹೊರಡುವಾಗ ಮೊದಲ ಭರವಸೆಯನ್ನು ನೆನೆಪಿಸಿಕೊಳ್ಳುತ್ತಾ ತಮ್ಮ ಕಣ್ಣುಗಳಲ್ಲಿದ್ದ ಕನಸು, ಭರವಸೆ ಮತ್ತು ಆಶಾಭಾವನೆಯನ್ನು ಮರೆತು ಮನೆಗೆ ಅಂಕಪಟ್ಟಿಗಳೊಂದಿಗೆ ವಾಪಸ್ಸಾಗುವುದು ಇಂದಿನ ವಿದ್ಯಾರ್ಥಿಗಳ ಬದುಕಿನ ನಿರಂತರ ಪ್ರಕ್ರಿಯೆಯಾಗಿಬಿಟ್ಟಿದೆ.

ಇಂದಿನ ಮೌಲ್ಯಮಾಪನ ಕಾರ್ಯವು ಹಳೆಯ ಊಳಿಗಮಾನ್ಯ ವ್ಯವಸ್ಥೆಯ ಗುಣಗಳಂತೆಯೇ ಕಾಣಿಸುತ್ತಿದೆ. ಮೌಲ್ಯಮಾಪನ ವಿಷಯದಲ್ಲಿ ಪ್ರಾಥಮಿಕ ಶಿಕ್ಷಣಕ್ಕೂ ಉನ್ನತ ಶಿಕ್ಷಣಕ್ಕೂ ತುಂಬಾ ಅಂತರವಿರುವುದನ್ನು ಕಾಣಬಹುದಾಗಿದೆ.

ಇಂದಿನ ಉನ್ನತ ಶಿಕ್ಷಣದ ಮೌಲ್ಯಮಾಪನವು ಹೊಸದಾದ ಸಿ.ಬಿ.ಎಸ್.ಇ. ಪಠ್ಯಕ್ರಮಕ್ಕೆ ಯಾವುದೇ ಹೊಂದಿಕೆ ಇಲ್ಲ ಎಂಬಂತಾಗಿದೆ. ಉಪನ್ಯಾಸಕರುಗಳ ತಲೆಯಲ್ಲಿರುವ ಹಳೆಯ ಮೌಲ್ಯಮಾಪನವೇ ಮುಂದುವರಿದಿರುವುದು ಒಂದು ವಿಪರ್ಯಾಸ. ಅದೇ ರೀತಿಯಲ್ಲಿ ಉತ್ತರ ಪತ್ರಿಕೆಯಲ್ಲಿನ ಪಾಯಿಂಟ್‌ಗಳನ್ನು ಲೆಕ್ಕ ಮಾಡಿ ಅಂಕ ನೀಡಿ ಕಳುಹಿಸುವ ಜಾತೀಯತೆಯ ವ್ಯವಸ್ಥೆ ಒಂದು ಕಡೆಯಾದರೆ, ಇನ್ನೊಂದು ಮಗ್ಗುಲಲ್ಲಿ ವಿದ್ಯಾರ್ಥಿಗಳಲ್ಲಿನ ಹಣ ಮತ್ತು ಪ್ರಭಾವಗಳನ್ನು ಗಣನೆಗೆ ತೆಗೆದುಕೊಂಡು ಆಯ್ಕೆ ಮಾಡಿಕೊಳ್ಳುತ್ತಿರುವ ಕೆ.ಪಿ.ಎಸ್.ಸಿ.ಯ ಕಾರ್ಯ ಎಷ್ಟರಮಟ್ಟಿಗೆ ಸರಿ ? ಈ ರೀತಿಯ ಮೌಲ್ಯಮಾಪನದಿಂದಾಗಿ ನಮ್ಮ ವ್ಯವಸ್ಥೆಯಲ್ಲಿ ಬೋಧಕರಾಗಿ ಆಯ್ಕೆಗೊಳ್ಳುತ್ತಿರುವ ಉಪನ್ಯಾಸಕರು ನಮ್ಮ ಸಮಾಜದ ಜಾಗತಿಕ ಶಿಕ್ಷಣದ ಭವಿಷ್ಯವನ್ನು ಹೇಗೆ ಮೌಲ್ಯೀಕರಿಸುವರು, ಎಂಬುದೇ ನಮ್ಮ ಎದುರಿಗಿರುವ ಬಹು ದೊಡ್ಡ ಪ್ರಶ್ನೆಯಾಗಿದೆ.

ಹೀಗಿರುವಾಗ ನಮ್ಮ ಶಿಕ್ಷಣದ ಚಿಂತನೆ ಹೊಸ

ಶಿವಣ್ಣ, ಎಚ್. ಎಸ್. (ಶಿಂಶಾ)

ಆಯಾಮವನ್ನು ಪಡೆದುಕೊಳ್ಳಬೇಕಾಗಿದೆ. ಪ್ರಪಂಚದೆಲ್ಲೆಡೆಯಿಂದ ನಮಗೆ ಗಾಳಿ, ಬೆಳಕು, ಸದ್ವಿಚಾರಗಳು ಬರಲಿ, ಆದರೆ ನಮ್ಮ ಸಂಸ್ಕೃತಿಯ ಅಡಿಪಾಯವನ್ನು ಬುಡಮೇಲು ಮಾಡದಿರಲಿ (ಮಹಾತ್ಮಾ ಗಾಂಧೀಜಿ) ಎಂಬ ವಿಚಾರದ ಬಗ್ಗೆ ನಾವು ಜಾಗೃತರಾಗಬೇಕಿದೆ.

ಜಾಗತೀಕರಣ, ತಂತ್ರಜ್ಞಾನಗಳ ಅಂತರ್ಜಾಲ ಇವು ಪ್ರಪಂಚವನ್ನು ಒಂದು ಜಾಗತಿಕ ಗ್ರಾಮವನ್ನಾಗಿಸಿವೆ. ಇದರಿಂದಾಗಿ ಭೌಗೋಳಿಕ ಚೌಕಟ್ಟು, ರಾಷ್ಟ್ರೀಯ ವ್ಯವಸ್ಥೆಗಳು, ವ್ಯಕ್ತಿಗಳು, ಸಂಸ್ಥೆಗಳು ಒಂದುಗೂಡಲು ಪ್ರಾರಂಭಿಸಿವೆ. ಜಗತ್ತು ಚಿಕ್ಕದಾಗುತ್ತಿದೆ. ವೈಜ್ಞಾನಿಕ ಸಮುದಾಯವೂ ಕೂಡ ಈಗ ಒಂದು ಜಾಗತಿಕ ಸಮುದಾಯವಾಗುತ್ತಿದೆ. ಜಾಗತೀಕರಣದಿಂದಾಗಿ ಪ್ರತಿರಾಷ್ಟ್ರವೂ ಸಹ ವಿವಿಧ ವಿಷಯಗಳಿಗೆ ಸಂಬಂಧಿಸಿದ ಪ್ರಾಕ್‌ಕಲ್ಪನೆ ಹಾಗೂ ಸಿದ್ಧಾಂತಗಳನ್ನು ಅಂತರರಾಷ್ಟ್ರೀಯ ಚೌಕಟ್ಟಿನಲ್ಲಿ ಚರ್ಚಿಸುತ್ತಿವೆ. ಮುಖ್ಯವಾಗಿ ಈ ಚರ್ಚೆಗಳು ಯಾವುದೆಂದರೆ :

* ವಿದ್ಯಾರ್ಥಿ ಹಾಗೂ ಉಪನ್ಯಾಸಕರುಗಳಲ್ಲಿ ಜಾಗತಿಕ ಪ್ರಜ್ಞೆ ಹಾಗೂ ಜಾಗತಿಕ ಕಾಳಜಿ.
* ಇರುವ ಕಂದಕಗಳನ್ನು ನಿವಾರಿಸಿ ಜ್ಞಾನದಾಹಿಗಳೆಡೆಗೆ ಸಾಗುವುದು.
* ಮಾಹಿತಿ ತಂತ್ರಜ್ಞಾನದ ಪ್ರಭುತ್ವದೊಂದಿಗೆ ಸಂವಹನ ಕೌಶಲ್ಯಕ್ಕೆ ಒತ್ತು ನೀಡುವುದು.
* ಸಮಾನತೆಯ ಸವಾಲುಗಳು ಹಾಗೂ ವೈವಿಧ್ಯತೆಗಳಿಗೆ ಅವಕಾಶಗಳನ್ನುಂಟುಮಾಡುವುದು.

ಆದುದರಿಂದ ಜಾಗತೀಕರಣವೆಂದರೆ ಆರ್ಥಿಕ, ಸಾಮಾಜಿಕ, ತಾಂತ್ರಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಪರಿಸರದ ಕ್ಷೇತ್ರಗಳಲ್ಲಿ ಉಂಟಾಗುವ ಸಂಪರ್ಕ, ಐಕ್ಯ ಹಾಗೂ ಅನ್ಯೋನ್ಯ ಸಂಬಂಧಗಳ ಒಗ್ಗೂಡಿಸುವಿಕೆ. ಇದೊಂದು ಏಕತಾ ಕ್ರಿಯೆ.

ಶಿಕ್ಷಣ ಮೌಲ್ಯಾಧಾರಿತವಾಗಿ ಒಮ್ಮತದ ಆಯ್ಕೆಯಾಗುವುದರ ಬದಲು ಅದು ವೈಯಕ್ತಿಕವಾಗಿದ್ದು ಶಿಕ್ಷಣ ಬಂಡವಾಳ ಹೂಡಿಕೆದಾರರಿಗೆ ಲಾಭ ತಂದುಕೊಡುವಂತಹುದಾಗುತ್ತದೆ. ಇಂದು ಶಿಕ್ಷಣ ವ್ಯಾಪಾರೀಕರಣವಾಗುತ್ತಿದೆ. ಇದಕ್ಕೆ ಉದಾಹರಣೆಯೆಂದರೆ ಹೆಚ್ಚುತ್ತಿರುವ ಶೈಕ್ಷಣಿಕ ಸಾಲದ ಸವಲತ್ತುಗಳು ಹಾಗೂ ವಿದ್ಯಾಸಂಸ್ಥೆಗಳು. ಈ ನಿಟ್ಟಿನಲ್ಲಿ ಪ್ರತಿ ಶಿಕ್ಷಣ ಸಂಸ್ಥೆಯೂ ಕೂಡ ಸಮಾಜದಲ್ಲಿ ತನ್ನ ಛಾಪನ್ನು ಒತ್ತಲು ಪ್ರಯತ್ನಿಸುತ್ತಿದೆ. ೮೦ರ ದಶಕದಿಂದೀಚೆಗೆ ಶೈಕ್ಷಣಿಕ ಸಂಸ್ಥೆಗಳೂ ಜಾಹೀರಾತಿಗೆ ಮೊರೆಹೋಗಿವೆ.

ಈ ಎಲ್ಲ ಕಾರಣಗಳಿಂದಾಗಿ ಪಾಠ ಪ್ರವಚನ ವಿಧಾನಗಳಲ್ಲಿ ಬದಲಾವಣೆಯಾಗಲೇಬೇಕಾದ ಅಗತ್ಯವಿದೆ. ಮೊದಲು ಅಧ್ಯಾಪನ ಹಾಗೂ ಅಧ್ಯಾಪಕರ ಮನೋಭಾವನೆಯಲ್ಲೇ ಮೂಲತಃ ಬದಲಾವಣೆಯಾಗಬೇಕು. ವಿಶ್ವ ವಾಣಿಜ್ಯ ಸಂಸ್ಥೆಯ ಸದಸ್ಯ ರಾಷ್ಟ್ರವಾಗಿ ಭಾರತ ಅಂಗೀಕೃತವಾದ ನಂತರ, ಉನ್ನತ ಶಿಕ್ಷಣ ಕುರಿತು ಭಾರತದಲ್ಲಿ ಬಂಡವಾಳಶಾಹಿಗಳು, ಸರಕಾರಗಳು ಹೊಸ ಹೊಸ ಚಿಂತನೆಗಳನ್ನು ಮಾಡಹತ್ತಿದರು. ಉನ್ನತ ಶಿಕ್ಷಣ ಬೇಕಾದವರು ಅದಕ್ಕೆ ತಕ್ಕಷ್ಟು ಹಣ ಕೊಡಬೇಕಾದದ್ದು ಅನಿವಾರ್ಯ ಹಾಗೂ ಅಗತ್ಯ ಎಂದು ವಾದಿಸಲಾಯಿತು. ೨೦೦೦ನೇ ವರ್ಷದಲ್ಲಿ ಕೇಂದ್ರ ಸರಕಾರ ನಿಯೋಜಿಸಿದ ಬಿರ್ಲಾ-ಅಂಬಾನಿ ತಯಾರಿಸಿದ ನೀತಿ ಸಂಹಿತೆಯ ವರದಿಯನ್ನು ಹೊರತರಲಾಯಿತು. ಈ ವರದಿಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಅಧೋರಚನೆಗೆ ಬೇಕಾದ ಬಂಡವಾಳವನ್ನು ಉನ್ನತ ಶಿಕ್ಷಣಕ್ಕೆ ಹೂಡಿರುವ ಹಣವನ್ನು ಕಡಿತಗೊಳಿಸುವುದರಿಂದ ಮಾತ್ರ ರೂಢಿಸಲು ಸಾಧ್ಯ. ಆದ್ದರಿಂದ ಕಾಲೇಜು ಮತ್ತು ವಿಶ್ವವಿದ್ಯಾಲಯಗಳು ಆರ್ಥಿಕವಾಗಿ ಸ್ವತಂತ್ರವಾಗಬೇಕು ಹಾಗೂ ತಮ್ಮ ಹಣ ಸಂಪನ್ಮೂಲಗಳನ್ನು ಹೆಚ್ಚುವರಿ ಶುಲ್ಕ, ವಂತಿಗೆ, ದೇಣಿಗೆ, ಕಾರ್ಪೊರೇಟ್ ಸಂಸ್ಥೆಗಳ ಜೊತೆ ಒಪ್ಪಂದ ಇತ್ಯಾದಿ ಕ್ರಮಗಳಿಂದ ಪಡೆದುಕೊಳ್ಳಬೇಕು ಎಂದು ತಿಳಿಸಲಾಗಿದೆ. ವಿಶ್ವ ವಾಣಿಜ್ಯ ಸಂಸ್ಥೆಯ ಪ್ರಣೀತ ಶಿಕ್ಷಣ ಪದ್ಧತಿಯಲ್ಲಿ ಶಿಕ್ಷಣವನ್ನು ಒಂದು ವಹಿವಾಟು ಎಂದು ಪರಿಗಣಿಸಲ್ಪಡಲಾಗುತ್ತದೆ. ಈ ವಹಿವಾಟಿನಲ್ಲಿ 'ಜ್ಞಾನೋದ್ಯಮ' ಉದ್ಯಮ ಎನಿಸಿಕೊಳ್ಳುತ್ತದೆ. ಶಿಕ್ಷಕರು 'ಜ್ಞಾನ ಕರ್ಮಿಗಳು' ಎನಿಸಿಕೊಳ್ಳುತ್ತಾರೆ. ವಿದ್ಯಾರ್ಥಿಗಳು ಶಿಕ್ಷಣ ಪಡೆಯುವಾಗ 'ಗಿರಾಕಿ'ಗಳಾಗಿದ್ದು, ಶಿಕ್ಷಣ ಪಡೆದು ಕೆಲಸ ಹುಡುಕುವಾಗ ಉದ್ಯೋಗ ಮಾರುಕಟ್ಟೆಯಲ್ಲಿ ಬಿಕರಿಗೊಳ್ಳುವ ಸರಕುಗಳಾಗುತ್ತಾರೆ. ಯಾರು ಕಡಿಮೆ ಬೆಲೆಗೆ ಸಿಗುವ ಉತ್ತಮ ಸರಕುಗಳೋ ಅವರಿಗೆ ಮಾರುಕಟ್ಟೆಯಲ್ಲಿ ಉತ್ತಮ ಭವಿಷ್ಯವಿದೆ. ಉತ್ತಮ ವಿದ್ಯಾರ್ಥಿಗಳೆಂದರೆ ಉತ್ತಮ ಸರಕುಗಳಾಗುವುದು. ಈ ಉತ್ತಮ ಸರಕುಗಳನ್ನು ಉತ್ಪಾದಿಸಲು ಉತ್ತಮ ಯಂತ್ರ ಕೌಶಲ್ಯಗಳ ಅಭಿವೃದ್ಧಿ ಅಗತ್ಯವಾಗುತ್ತದೆ.

ವಿಶ್ವ ವಾಣಿಜ್ಯ ಸಂಸ್ಥೆಯ ಪ್ರಣೀತ ಶಿಕ್ಷಣ ಪದ್ಧತಿಯ ಮತ್ತೊಂದು ಮುಖ್ಯ ಅಂಶ ಸ್ವಾಯತ್ತತೆ. ಶಿಕ್ಷಣವನ್ನು ಸರಕಾರದ ಹಿಡಿತದಿಂದ ತಪ್ಪಿಸಿ ಜಾಗತಿಕ ವ್ಯಾಪಾರದ ಕೈಗೆ ಕೊಡುವ ಕ್ರಮ ಇದು. ೧೯೫೦-೫೧ರಲ್ಲಿ ಕೇವಲ ೧೭ ವಿಶ್ವವಿದ್ಯಾಲಯಗಳಿದ್ದಂತಹವುಗಳು ಇಂದು ೨೫೯ಕ್ಕೆ ಏರಿವೆ. ವಿದ್ಯಾರ್ಥಿಗಳ ಸಂಖ್ಯೆ ೭೪.೧೮ ಲಕ್ಷಕ್ಕೇರಿದೆ. ೧೨,೩೦೦ ಕಾಲೇಜುಗಳಿದ್ದು ಅವುಗಳಲ್ಲಿ ೪,೬೮೩ ಕಾಲೇಜುಗಳು ಗ್ರಾಮಾಂತರ ಪ್ರದೇಶಗಳಲ್ಲಿವೆ. ೯ನೇ ಪಂಚವಾರ್ಷಿಕ ಯೋಜನೆಯಲ್ಲಿ ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಉನ್ನತ ಶಿಕ್ಷಣ ಸಂಸ್ಥೆಗಳನ್ನು ವಿಸ್ತರಿಸುವುದು, ಶಿಕ್ಷಕರಿಗೆ ತರಬೇತಿ ನೀಡುವುದು, ಮಹಾ ವಿದ್ಯಾಲಯಗಳಿಗೆ ಸ್ವಾಯತ್ತತೆ ನೀಡುವುದು, ಸಂಶೋಧನೆಯನ್ನು ಬಲಪಡಿಸುವುದು, ಶಿಕ್ಷಣದ ಗುಣಮಟ್ಟ ಹೆಚ್ಚಿಸುವುದು, ಹೀಗೆ ಹಲವಾರು ಧ್ಯೇಯಗಳನ್ನು ಈ ಯೋಜನೆಯಲ್ಲಿ ಅಳವಡಿಸಲಾಗಿದೆ. ಈ ಯೋಜನಾ ಅವಧಿಯಲ್ಲಿ 'ನ್ಯಾಕ್' ಆರಂಭಗೊಳ್ಳುವುದರೊಂದಿಗೆ ಉನ್ನತ ಶಿಕ್ಷಣದ ಮೌಲ್ಯ ಹಾಗೂ ಗುಣಮಟ್ಟದ ಸಾಮರ್ಥ್ಯದ ಮೌಲ್ಯಮಾಪನ ಕೈಗೊಳ್ಳಲಾಯಿತು. ಸಮಗ್ರ ಗುಣಮಟ್ಟ ನಿರ್ವಹಣೆಗಳಂತಹ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ. ತಾಂತ್ರಿಕ ಹಾಗೂ ನಿರ್ವಹಣಾ ಶಿಕ್ಷಣದತ್ತ ಕೇಂದ್ರ ಸರಕಾರ ಒಲವು ತೋರಿದೆ. ಈ ಹಿನ್ನೆಲೆಯಲ್ಲಿ ಸುಮಾರು ೧,೭೧೫ ತಾಂತ್ರಿಕ ಹಾಗೂ ನಿರ್ವಹಣಾ ಸಂಸ್ಥೆಗಳು ದೇಶದಾದ್ಯಂತ ಹೊಸದಾಗಿ ಸ್ಥಾಪಿಸಲ್ಪಟ್ಟಿವೆ. ಭಾರತ ಹಸಿರು ಕ್ರಾಂತಿ, ಶ್ವೇತ ಕ್ರಾಂತಿಗಳನ್ನು ಮಾಡಿದಂತೆ ಇಂದು ಜ್ಞಾನ ಬಂಡವಾಳದ ಕ್ರಾಂತಿಯನ್ನು ಮುಂಬರುವ ದಿನಗಳಲ್ಲಿ ಮಾಡಬೇಕಾದ ಅಗತ್ಯತೆ ಇದೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯನ್ನು ಆಧುನೀಕರಣಗೊಳಿಸಬೇಕಾಗಿದೆ.

ಗ್ಲೋಬಲ್ ಇನ್‌ಫರ್ಮೇಷನ್ ಇನ್ಫ್ರಾಸ್ಟ್ರಕ್ಚರ್ ಕಮಿಷನ್ ಹೇಳುವಂತೆ 'ಜಾಗತೀಕರಣ ಯುಗದಲ್ಲಿ ಶಿಕ್ಷಣ ತನ್ನತನವನ್ನು ಬದಲಿಸಿಕೊಳ್ಳಬೇಕಾಗಿದೆ. ಈ ಸಂದರ್ಭದಲ್ಲಿ ವಿದ್ಯಾರ್ಥಿಗಳು ವಿಷಯವನ್ನು ಹೇಗೆ ಪಡೆಯುತ್ತಾರೆ, ಗ್ರಹಿಸುತ್ತಾರೆ, ವಿಶ್ಲೇಷಿಸುತ್ತಾರೆ ಹಾಗೂ ಬಳಸಿಕೊಳ್ಳುತ್ತಾರೆ ಎಂಬುದು ಅತಿಮುಖ್ಯವಾಗಿರುತ್ತದೆ. ವಿದ್ಯಾರ್ಥಿಗಳು ಚಿಂತನಶೀಲರಾಗಬೇಕು, ಸಾಂದರ್ಭಿಕವಾಗಿ ಸಮಸ್ಯೆಗಳನ್ನು ಎದುರಿಸುವ ಶಕ್ತಿಯನ್ನು ಪಡೆದುಕೊಳ್ಳಬೇಕು. ಆದುದರಿಂದ, ಕೇವಲ ಮಾಹಿತಿಯನ್ನು ಒದಗಿಸಿಕೊಡುವುದು ಶಿಕ್ಷಣವಲ್ಲ. ಆದರೆ ಹಳೆಯದನ್ನು ಹೊಸದರೊಂದಿಗೆ ಬೆಸೆದು, ಸಮಸ್ಯೆಗಳನ್ನು ಬಿಡಿಸಿ, ಯಾವ ರೀತಿ ಕಲಿಯಬೇಕು ಎಂಬುದನ್ನು ಕಲಿಸುವುದೇ ಶಿಕ್ಷಣವಾಗಿದೆ.'

ಇದೇ ದೃಷ್ಟಿಕೋನವನ್ನು ಡಿ.ವಿ.ಜಿ.ಯವರು ತಮ್ಮ ಮಂಕುತಿಮ್ಮನ ಕಗ್ಗದಲ್ಲಿ ಹೀಗೆ ತಿಳಿಸುತ್ತಾರೆ:

*ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಬಗು*
*ಹೊಸ ಯುಕ್ತಿ ಹಳೆ ತತ್ತ್ವ ಒಡಗೂಡೆ ಧರ್ಮ*
*ಋಷಿವಾಕ್ಯದೊಳು ವಿಜ್ಞಾನ ಕಲೆ ಮೇಳವಿಸೆ*
*ಜಸವು ಜನಜೀವನಕೆ – ಮಂಕುತಿಮ್ಮ ||*

ಜಾಗತೀಕರಣ ಚಿಂತನೆಯಲ್ಲಿ ಶಿಕ್ಷಣ ಅರ್ಥವನ್ನೇ ಬದಲಿಸಿರುವುದು ಹಾಗೂ ವಿದ್ಯಾರ್ಥಿಗಳನ್ನು ನೋಡುವ ದೃಷ್ಟಿಕೋನ ಕಾಳಜಿಯನ್ನುಂಟುಮಾಡುತ್ತದೆ. ಸಾರ್ವಜನಿಕ ಹಿತಾಸಕ್ತಿ ಹಾಗೂ ಸ್ವತಂತ್ರ ಚಿಂತನಶೀಲ ತತ್ವಗಳ ಅಡಿಪಾಯಗಳೇ ಅಪಾಯದ ಅಂಚಿನಲ್ಲಿವೆ. ಮಾನವನ ವಿಕಾಸಕ್ಕೆ ಅಥವಾ ಒಳ್ಳೆಯ ಜೀವನಕ್ಕೆ ಬುನಾದಿಯಾಗಬೇಕಾಗಿದ್ದ ಶಿಕ್ಷಣ ಇಂದು ಉಪಭೋಗ ವಸ್ತುವೆನಿಸಿದೆ. ಬಾಳಿನ ಅರ್ಥವೇನು, ಎಂಬ ಪ್ರಶ್ನೆ ಶಿಕ್ಷಣ ತಜ್ಞರಿಗೆ ಹಾಗೂ ಉಪಾಧ್ಯಾಯರಿಗೆ ಪ್ರಶ್ನಾರ್ಥಕ ಚಿಹ್ನೆಗಳಾಗಿವೆ. ಶಿಕ್ಷಣಕ್ಕೆ ಈಗ ಕೊಟ್ಟಿರುವ ಹೊಸ ವ್ಯಾಖ್ಯೆಯಿಂದಾಗಿ ನಾವು ಇಂದು ಶಾಲಾ ಕಾಲೇಜುಗಳಲ್ಲಿ ಕೊಡುತ್ತಿರುವುದು ನಿಜವಾಗಿಯೂ 'ವಿದ್ಯಾ ಯಾ ವಿಮುಕ್ತಯೇ' ಎಂಬ ವಾಕ್ಯಕ್ಕೆ ಅನ್ವರ್ಥವಾಗಿದೆಯೇ ಎಂಬ ಸಂದೇಹ ಮೂಡುತ್ತದೆ. ಜಾಗತೀಕರಣದಿಂದಾಗಿ, ಎರಿಕ್ ಫ್ರೋಮ್ ಎನ್ನುವಂತೆ, ಇಂದಿನ ಮಾನವ ತನ್ನಿಂದಲೇ ತಾನು, ತನ್ನ ಒಡನಾಡಿಗಳಿಂದ ಹಾಗೂ ಪ್ರಕೃತಿಯಿಂದ ದೂರವಾಗುತ್ತಿದ್ದಾನೆ. ಅವನನ್ನು ಒಂದು ಭೋಗವಸ್ತುವನ್ನಾಗಿ ಪರಿಗಣಿಸಲಾಗುತ್ತಿದೆ. ಅವನ ಒಟ್ಟು ಅನುಭವಗಳನ್ನು ವ್ಯಾಪಾರೀಕರಣದ ದೃಷ್ಟಿಯಿಂದ ಗಮನಿಸಿ ಲಾಭ - ನಷ್ಟಗಳ ಲೆಕ್ಕಾಚಾರಗಳನ್ನು ಮಾಡಬೇಕಾಗಿದೆ. ಈ ಶಿಕ್ಷಣ ಬದುಕುವ ಕಲೆಯನ್ನು ಕಲಿಸುವುದಕ್ಕಿಂತ ಏನನ್ನು ಪಡೆಯಬೇಕು ಎಂಬುದರ ಬಗ್ಗೆ ಗಮನ ಸೆಳೆಯುತ್ತದೆ.

ಇಂದಿನ ಜ್ಞಾನ ಸಂಪತ್ತೇ ನಾಳಿನ ಸದೃಢ ಆರ್ಥಿಕ ಬುನಾದಿಗೆ ನಾಂದಿಯಾಗಬೇಕು. ಆದ್ದರಿಂದ, ಇಂದಿನ ಉನ್ನತ ಶಿಕ್ಷಣ ಪದ್ಧತಿಯು ಕೇವಲ ಪುಸ್ತಕ ಜ್ಞಾನವನ್ನು ನೀಡದೆ, ವಿದ್ಯಾರ್ಥಿಗಳಲ್ಲಿ ವಿಮರ್ಶಾತ್ಮಕ ಮನೋಭಾವವನ್ನು ಬೆಳೆಸುವಂತಹ ಗುಣಗಳಾದ ಧೈರ್ಯ, ಸೃಜನಶೀಲತೆ, ಆತ್ಮವಿಶ್ವಾಸ, ಕಾರ್ಯಬದ್ಧತೆ, ಸಚ್ಚಾರಿತ್ರ್ಯ ಮೊದಲಾದ ಗುಣಗಳಿಂದ ಸಮ್ಮಿಳಿತವಾಗಬೇಕು. ಹಾಗಾದಾಗ ಮಾತ್ರ ಜಾಗತೀಕರಣದ ಪ್ರವಾಹದಲ್ಲಿ ಜ್ಞಾನಶಕ್ತಿಯ ನೆರವಿನಿಂದ ಈಜಿ ದಡ ಸೇರಲು ಸಾಧ್ಯವಾಗಬಹುದು.

ಶಿವಣ್ಣ, ಎಚ್. ಎಸ್. (ಶಿಂಶಾ)
ಸಂಶೋಧನಾ ವಿದ್ಯಾರ್ಥಿ, ಸಮಾಜಶಾಸ್ತ್ರ ಅಧ್ಯಯನ ವಿಭಾಗ
ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನ ಸಹ್ಯಾದ್ರಿ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ



# ಘಾಟಿ ಕಣಿವೆಯಲ್ಲಿ ಜಲ ಮತ್ತು ಮರಗಳು

**ಘಾ**ಟಿ ಕಣಿವೆಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲೂಕಿನ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಇದು ದಕ್ಷಿಣ ಕರ್ನಾಟಕದ ಪ್ರಸಿದ್ಧ ನಾಗಾರಾಧನೆಯ ಸ್ಥಳ. ವಾಡಿಕೆಯಲ್ಲಿ ಸುಬ್ರಹ್ಮಣ್ಯ ಕ್ಷೇತ್ರವೆಂದೇ ಕರೆಯುತ್ತಾರೆ. ಇದರ ಸಮೀಪದ ಕಣಿವೆಯು ಘಟ್ಟ ಪ್ರದೇಶಗಳ ನಡುವೆ ತಗ್ಗಿನಲ್ಲಿರುವುದರಿಂದ ಇದನ್ನು ಘಾಟಿ ಸುಬ್ರಹ್ಮಣ್ಯ ಕ್ಷೇತ್ರವೆಂದು ಕರೆಯುತ್ತಾರೆ. ಬೆಂಗಳೂರಿನಿಂದ ಸುಮಾರು ೫೦ ಕಿ.ಮೀ.ಗಳ ಅಂತರದಲ್ಲಿ ಈ ಸ್ಥಳವಿದೆ. ಘಾಟಿ ಕಣಿವೆಯ ಪೂರ್ವ, ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಬೆಟ್ಟಗಳಿಂದ ಆವೃತವಾದ ಒಂದು ಆಳವಾದ ಕಣಿವೆಯಾಗಿದ್ದು, ಈ ಕಣಿವೆಯು ಸುಬ್ರಹ್ಮಣ್ಯ ದೇವಾಲಯದ ಬಳಿಯಿಂದ ತಿಪ್ಪಗಾನಹಳ್ಳಿ ಕೆರೆಗೆ ಸುಮಾರು ೪೦೦ ಅಡಿ ಎತ್ತರ ಕಡಿಮೆಯಿದೆ. ಈ ಕಣಿವೆ ಪ್ರದೇಶವು ಉತ್ತರ ಪಿನಾಕಿನಿ ನದಿಯ ಜಲಾನಯನ ಪ್ರದೇಶಕ್ಕೆ ಸೇರುತ್ತದೆ.

ಘಾಟಿ ಕಣಿವೆಯಲ್ಲಿ ಜಲಸಂಚಯನಕ್ಕೆ ಮಂಗಳಪಾತ್ರ ೧೯೭೦ರ ದಶಕದವರೆಗೆ ಇಲ್ಲಿನ ಹೊಳೆ/ತೊರೆಗಳಲ್ಲಿ ವರ್ಷದಲ್ಲಿ ೯-೧೦ ತಿಂಗಳವರೆಗೆ ನಿರಂತರವಾಗಿ ನೀರು ಹರಿಯತ್ತಿತ್ತು. ಗೌರಿಬಿದನೂರು ತಾಲೂಕಿನ ರೈತರು ಮತ್ತು ನಾಗರಿಕರು ವ್ಯವಸಾಯದ ಉದ್ದೇಶಕ್ಕಾಗಿ ಹಾಗೂ ಕುಡಿಯುವ ನೀರಿಗಾಗಿ ಬಹುತೇಕ ಇದನ್ನೇ ಆಶ್ರಯಿಸಿದ್ದರು. ಇಲ್ಲಿ ನೀರು ನಿರಂತರವಾಗಿ ಹರಿಯುತ್ತಿದ್ದುದರಿಂದ ಇಲ್ಲಿನ ನಿವಾಸಿಗಳಿಗೆ ಬಹುಶಃ ಕೆರೆಗಳ ಅವಶ್ಯಕತೆ ಕಂಡುಬರಲಿಲ್ಲವೆಂದು ಕಾಣುತ್ತದೆ. ಕಣಿವೆ ಪ್ರದೇಶದಲ್ಲಿ ಹೆಸರಿಸಬಹುದಾದ ಕೆರೆಗಳೆಂದರೆ ಕೇವಲ ಎರಡೇ. (೧) ತಿಪ್ಪಗಾನಹಳ್ಳಿ ಕೆರೆ, (೨) ಪಾರ್ ಪಾಲ್ ದಿನ್ನೆ ಕೆರೆ.

೧೯೭೫-೭೬ರ ನಂತರ ಇಲ್ಲಿ ಕೊಳವೆ ಬಾವಿಗಳ ಸಂಖ್ಯೆ ಹಾಗೂ ಫಿಲ್ಟರ್ ಬಾವಿಗಳ ಸಂಖ್ಯೆ ಹೆಚ್ಚಾಗಿ ಅಂತರ್ಜಲದ ಮಿತಿಮೀರಿದ ಬಳಕೆಯಿಂದಾಗಿ ಈಗ ಈ ಕೆರೆಗಳೂ ಸಹ ಫೆಬ್ರವರಿ-ಮಾರ್ಚ್ ವೇಳೆಗೆ ಒಣಗಿಹೋಗುತ್ತವೆ. ಇತ್ತೀಚೆಗೆ ಕೊಳವೆ ಬಾವಿಗಳೂ ಸಹ ಬತ್ತುತ್ತಿವೆ. ಇಲ್ಲಿ ಹಿಂದೆ ನೀರಿನಮಟ್ಟ ಬಹು ಮೇಲೆ ಇತ್ತು. ಈಗ ೮೦೦ ಅಡಿ ಕೊರೆದರೂ ನೀರು ದೊರೆಯುವುದಿಲ್ಲ.

ಹಿಂದೆ ಈ ಕಣಿವೆಯಲ್ಲಿ ಹೆಚ್ಚಿನ ಮಟ್ಟಿಗೆ ಕಂಡುಬರುವುದು ಬೋಳು ಗುಡ್ಡಗಳೇ. ಅಲ್ಲಲ್ಲಿ ಅಲ್ಪ ಪ್ರಮಾಣದಲ್ಲಿ ಭೂಮಿಯನ್ನು ಸಾಗುವಳಿಗಾಗಿ ಬಳಸಿದರೂ ಅಲ್ಲಿನ ಭೂಮೇಲ್ಮೈ ವ್ಯವಸಾಯಕ್ಕೆ ಪೂರಕವಾಗಿಲ್ಲ. ಅಲ್ಲಿಯ ಸ್ಥಳೀಯರು ಹೇಳುವ ಪ್ರಕಾರ, ಹಿಂದೆ ಅಲ್ಲಿನ ಬೆಟ್ಟಗಳು ದಟ್ಟವಾದ ಗಿಡಮರಗಳಿಂದ ಕೂಡಿದ್ದು ಹೊಂಗೆ, ಬೇವು, ಆಲ, ಅರಳಿ ಹಸಿರಾಗಿರುತ್ತಿದ್ದವು. ಕಾಲಾನಂತರ ಉರುವಲು ಹಾಗೂ ಇತರ ವಾಣಿಜ್ಯ ಉದ್ದೇಶಗಳಿಗಾಗಿ ಮರಗಳನ್ನು ಕಡಿಯಲಾಗಿದೆ. ಈಗ ಅಲ್ಲಿ ಕೇವಲ ಕುರುಚಲ ಗಿಡಗಳ ಪ್ರಭೇದಕ್ಕೆ ಸೇರಿದ ಸಸ್ಯಗಳು ಕಂಡುಬರುತ್ತವೆ.

ಈ ಕಣಿವೆ ಪ್ರದೇಶದಲ್ಲಿ ಪ್ರಧಾನವಾಗಿ ಒಂದು ತೊರೆ ಹರಿಯುತ್ತದೆ. ಹಿಂದೆ ಇದು ಬಹುತೇಕ ವರ್ಷಪೂರ್ತಿ ಹರಿಯುತ್ತಿತ್ತೆಂದು ಅಲ್ಲಿನ ನಿವಾಸಿಗಳು ಹೇಳುತ್ತಾರೆ. ಮಳೆ ಬಂದಾಗ ಮಾತ್ರ ಕೆಲವು ಸಮಯ ಅದರಲ್ಲೂ ನಿರ್ದಿಷ್ಟವಾಗಿ ಜುಲೈ ತಿಂಗಳಿನಿಂದ ಅಕ್ಟೋಬರ್‌ವರೆಗೆ ಮಾತ್ರ ಹರಿಯುತ್ತದೆ. ಇದಕ್ಕೆ ಕಾರಣವೇನೆಂದು ಅವಲೋಕಿಸಿದಾಗ ನನ್ನ ಗಮನಕ್ಕೆ ಬಂದ ಅಂಶವೆಂದರೆ, ಇಲ್ಲಿ ಮರಗಳನ್ನು ನಾಶ ಗೊಳಿಸಿರುವುದು. ಇಂದಿಗೂ ಸಹ ಈ ತೊರೆಯನ್ನು ಜೀವಂತವಾಗಿಡಲು ಸ್ಥಳೀಯ ನಾಗರಿಕರಾಗಲೀ ಅರಣ್ಯ ಇಲಾಖೆ ಕಂದಾಯ ಇಲಾಖೆ ಮುಂತಾದ ಸರ್ಕಾರಿ ಇಲಾಖೆಗಳೂ ಸೇರಿದಂತೆ ಯಾರೂ ಗಮನಹರಿಸಿಲ್ಲ.

ಈ ಕಣಿವೆಯ ಜಲಾನಯನ ಪ್ರದೇಶದಲ್ಲಿ ಸಂಗ್ರಹವಾಗುವ ನೀರು ಈ ವ್ಯಾಪ್ತಿಯಲ್ಲಿರುವ ತಿಪ್ಪಗಾನಹಳ್ಳಿ ಕೆರೆ ಹಾಗೂ ಪಾರ್ ಪಾಲ್ ದಿನ್ನ ಕೆರೆ ಸೇರಿ ನಂತರ ಅಲ್ಲಿಂದ ಮರಳೂರು, ಭೀಮಹನಹಳ್ಳಿ, ಇಡಗೂರು, ಕುಡುಮಲು ಕುಂಡಿ, ಚಂದನದೂರು ಹೀಗೆ ಸರಪಣಿ ಕ್ರಮದಲ್ಲಿ ತುಂಬಿ ನಂತರ ಆಂಧ್ರಪ್ರದೇಶದ ಕಡೆಗೆ ಹರಿಯುತ್ತದೆ.

ಆದರೆ ಮನುಷ್ಯರ ಅಂವ್ರುಗೇಡಿತನದಿಂದಾಗಿ ಇಂದು ಜಲಾನಯನ ಪ್ರದೇಶದಲ್ಲಿರುವ ೩ ಕೆರೆಗಳೂ ತುಂಬದೆ ಎಷ್ಟೋ ವರ್ಷಗಳಾಗಿವೆ. ಅಲ್ಲದೆ, ಮಣ್ಣಿನ ಸವೆತದಿಂದಾಗಿ ಕೆರೆಗಳಲ್ಲಿ ಅಪಾರ ಪ್ರಮಾಣದ ಹೂಳು ಸಂಗ್ರಹವಾಗಿದೆ. ಆಳ ಕಡಿಮೆಯಾಗಿ ಕೆರೆಗಳು ನೀರನ್ನು ಹಿಡಿದಿಡುವ ಸಾಮರ್ಥ್ಯವನ್ನೇ ಕಳೆದುಕೊಂಡಿವೆ. ಸ್ಥಳೀಯರು ಕೆರೆಯ ಪ್ರದೇಶವನ್ನು ಒತ್ತುವರಿ ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದರೆ, ಇನ್ನು ಕೆಲವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕೆರೆಯಂಗಳದಲ್ಲೇ ಮನೆಗಳನ್ನು ಸಹ ನಿರ್ಮಿಸಹೊರಟಿದ್ದಾರೆ.

ಈ ಕಣಿವೆ ಪ್ರದೇಶದಲ್ಲಿ ಮಳೆ ನೀರು ಸರಾಗವಾಗಿ ಹರಿದು ಹೋಗುವುದರಿಂದ ನೆಲದಲ್ಲಿ ನೀರು ಇಂಗುವ ಸಾಧ್ಯತೆಗಳು ಕಡಿಮೆಯಾಗುತ್ತವೆ. ಶೇ. ೯೦ರಷ್ಟು ಮಳೆನೀರು ಹರಿದುಹೋಗಿ ಉಳಿದ ಶೇ. ೧೦ರಷ್ಟು ಪ್ರಮಾಣದ ಮಳೆನೀರು ಮಾತ್ರ ಇಂಗಲು ಸಾಧ್ಯವಾಗುತ್ತದೆ. ಅಲ್ಲದೆ, ನೀರು ಹಾಗೇ ರಭಸವಾಗಿ ಹರಿಯುವುದರಿಂದ ಮಣ್ಣಿನ ಸವೆತವೂ ಉಂಟಾಗುತ್ತದೆ. ನೀರಿನೊಂದಿಗೆ ಮಣ್ಣೂ ಹರಿದು ತೊರೆ ಅಥವಾ ಕೆರೆಗಳಲ್ಲಿ ಸೇರಿಕೊಂಡು ಅವುಗಳ ನೀರು ಹಿಡಿದಿಡುವ ಸಾಮರ್ಥ್ಯ ಸಹ ಕಡಿಮೆಯಾಗುತ್ತದೆ.

ಆದ್ದರಿಂದ ಈ ಕೆರೆಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಈಗ ಸರ್ಕಾರ ಹಲವಾರು ರಚನಾತ್ಮಕ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ಈ ಪ್ರದೇಶದಲ್ಲಿ ಎರಡು ವರ್ಷಗಳಿಂದೀಚೆಗೆ ಸುಮಾರು ೧೫ ಚೆಕ್ ಡ್ಯಾಂಗಳನ್ನು ನಿರ್ಮಿಸುವುದು ಹೆಚ್ಚು ವೆಚ್ಚದಾಯಕ. ರಭಸದ ಮಳೆ ಬಂದಾಗ ಒಡ್ಡುಗಳು ಕೊಚ್ಚಿಹೋಗುವ ಸಾಧ್ಯತೆ ಜಾಸ್ತಿ. ಹೀಗಾಗಿ ಇದಕ್ಕೆ ಪರ್ಯಾಯವಾಗಿ ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸುವ ಮೂಲಕ ಒಂದೇ ಪ್ರಯತ್ನದಲ್ಲಿ ಹಲವಾರು ಉದ್ದೇಶಗಳನ್ನು ಸಾಧಿಸಬಹುದು. ಅಂದರೆ, ಇಲ್ಲಿನ ಸಹಜ ಪರಿಸರದಲ್ಲಿ ಬೆಳೆಯುವ ಮತ್ತು ಕಡಿಮೆ ನೀರು ಬಯಸುವ ಹಾಗೂ ಅಗಲವಾಗಿ ಬೇರುಗಳನ್ನು ಹರಡುವಂಥ ಹೊಂಗೆ, ಆಲ, ಅರಳಿ, ಹುಣಿಸೆ ಮುಂತಾದ ಮರಗಳನ್ನು ಚೆಕ್‌ಡ್ಯಾಮ್‌ಗಳ ಬದಲಿಗೆ ಬೆಳೆಸಬಹುದು. ಈ ಮರಗಳನ್ನು ನೀರು ಹರಿಯುವ ಕಣಿವೆ ಪ್ರದೇಶದಲ್ಲಿ ೨೦ ಅಡಿಗೆ ಒಂದರಂತೆ ಬೆಳೆಸಬಹುದು. ಈ ಮರಗಳ ಬೇರುಗಳು ನೀರು ಹರಿಯುವ ಪ್ರದೇಶದಲ್ಲಿ ಅಗಲವಾಗಿ ಹರಡುವುದರಿಂದ ಕೆಲವೇ ವರ್ಷಗಳಲ್ಲಿ ಇವು ಚೆಕ್‌ಡ್ಯಾಮ್‌ಗಳಂತೆ ಕೆಲಸ ಮಾಡುತ್ತವೆ. ಅಲ್ಲದೆ ಪ್ರಧಾನವಾಗಿ ಮಣ್ಣಿನ ಸವೆತವನ್ನು ಸಹ ಕಡಿಮೆ ಮಾಡುತ್ತವೆ. ಜೊತೆಗೆ ಇವು ಎಲೆಯುದುರುವ ಸಸ್ಯಗಳ ಪ್ರಭೇದಕ್ಕೆ ಸೇರಿರುವುದರಿಂದ ಅವುಗಳಿಂದ ಉದುರಿದ ಎಲೆಗಳು ಮಣ್ಣಿನೊಂದಿಗೆ ಸೇರಿ ಮಣ್ಣಿನ ಪದರವೂ ಸಹ ದಪ್ಪವಾಗುತ್ತದಲ್ಲದೆ, ಮಣ್ಣಿನ ತೇವಾಂಶವೂ ಹೆಚ್ಚಾಗುತ್ತದೆ.

ಜೊತೆಗೆ, ಬೆಟ್ಟದ ಇಳಿಜಾರು ಪ್ರದೇಶದಲ್ಲಿಯೂ ಈ ಮರಗಳನ್ನು ಬೆಳೆಸುವುದರಿಂದ ಈ ಬೆಟ್ಟಗಳು ಗಾಳಿ, ಮಳೆ, ಬಿಸಿಲುಗಳಿಗೆ ನೇರವಾಗಿ ಸಿಲುಕಿ ಶಿಥಿಲವಾಗುವುದನ್ನು ತಡೆಯಬಹುದು ಮತ್ತು ತೇವಾಂಶವನ್ನು ಸಹ ಹೆಚ್ಚಿಸಬಹುದು.

ಡಿ. ಸಿ. ಸ್ಮಿತಾ
ಸಹಾಯಕ ಭಾಷಾಂತರಕಾರರು, ಭಾಷಾಂತರ ನಿರ್ದೇಶನಾಲಯ, ಕಂದಾಯ ಭವನ
ಬೆಂಗಳೂರು - ೫೬೦ ೦೦೯



## ಸಂಚಯ

(ತ್ರೈಮಾಸಿಕ)

೭೫, ಕಾವ್ಯ ಸಂಭ್ರಮ

ಪುಟ : ೧೫೨ ವಾರ್ಷಿಕ ಚಂದಾ : ರೂ. ೧೫೦

ನಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್

೩ನೇ ಹಂತ, ೩ನೇ ಘಟ್ಟ, ಬನಶಂಕರಿ, ಬೆಂಗಳೂರು - ೮೫

'ಸಂಚಯ' ಸಾಹಿತ್ಯ, ಸಾಂಸ್ಕೃತಿಕ ತ್ರೈಮಾಸಿಕ ಪತ್ರಿಕೆ. ಈ ಸಂಚಿಕೆಯು ಎಪ್ಪತ್ತೈದು ಕವಿತೆಗಳನ್ನು ಒಳಗೊಂಡಿದೆ. ತೊಂಭತ್ತರ ದಶಕದಿಂದ ಈಚೆಗೆ ಬರೆಯುತ್ತಿರುವ ಹೊಸ ತಲೆಮಾರಿನ ಹೊಸ ಧ್ವನಿಗಳು ಈ ಸಂಕಲನದಲ್ಲಿ ಕೇಳಬರುತ್ತಿವೆ. ವಸ್ತುವಿನಲ್ಲಿ ಹೊಸತನ, ಹೇಳುವ ಕ್ರಮದಲ್ಲಿನ ಲವಲವಿಕೆ, ಹೊಸ ರೀತಿಯ ಮಂಡನೆ ಹಾಗೂ ಇವತ್ತಿನ ವಿದ್ಯಮಾನಗಳ ಕುರಿತು ಸ್ಪಂದನೆಯುಳ್ಳ ಕವಿತೆಗಳನ್ನು ಆರಿಸಿ ಸಂಪಾದಕರು ಇಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಇಲ್ಲಿನ ಕವಿತೆಗಳು ಬದುಕಿನ ಎಲ್ಲ ಆಯಾಮಗಳನ್ನು ಸೂಕ್ಷ್ಮವಾಗಿ ಹಿಡಿಯುವ ಪ್ರಯತ್ನ ಮಾಡಿವೆ. ಹಾಗೆ ಹಿಡಿಯುವುದು ಹೊಸ ಕವಿಗಳ ಹೊಸ ಗ್ರಹಿಕೆ ಹಾಗೂ ಹೊಸ ಅಭಿವ್ಯಕ್ತಿ ವಿಧಾನದ ಮೂಲಕವೇ ಆಗಿದೆ. ಇಲ್ಲಿನ ಬಹುಪಾಲು ಕವಿತೆಗಳು ವ್ಯಕ್ತಿಗತವೆನಿಸುವಂತಿದ್ದರೂ ಏಕಕಾಲದಲ್ಲಿ ಸಮಾಜಮುಖಿಯೂ ಆಗಿವೆ.

## ಸ್ಥಳನಾಮಗಳ ಅಧ್ಯಯನ ಮತ್ತಿತರ ಪ್ರಬಂಧಗಳು

ಡಾ|| ಕೆ. ಜಿ. ಗುರುಮೂರ್ತಿ

**ಪುಟ : viii + ೧೨೬** **ಬೆಲೆ : ರೂ. ೪೫**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ

ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಈ ಸಂಕಲನದಲ್ಲಿ ೧೮೭೭ರಿಂದ ೨೦೦೭ರವರೆಗೆ ಬರೆದ ಸ್ಥಳನಾಮ, ಗಾದೆಗಳು, ಪವಾಡಗಳು, ದೇವದಾಸಿ ಪದ್ಧತಿ, ಬಯಲಾಟ, ಆಕಾಶ ಜಾನಪದ, ಬೇಟೆ, ಹಿಂಸೆ ಮತ್ತು ವಸತಿಗೆ ಸಂಬಂಧಿಸಿದ ಒಂಬತ್ತು ಲೇಖನಗಳಿವೆ. ಇವು ಜಾನಪದ ಮತ್ತು ಗ್ರಾಮೀಣ ಸಮಾಜ-ಸಂಸ್ಕೃತಿಯ ಮೇಲೆ ಮಾನವ ಶಾಸ್ತ್ರೀಯ ದೃಷ್ಟಿಯಿಂದ ಬರೆದ ಲೇಖನಗಳೆಂದು ಲೇಖಕರೇ ಹೇಳಿದ್ದಾರೆ. ಇವು ಸಂಶೋಧನಾ ಲೇಖನಗಳಾಗಿದ್ದು ವಿಷಯವನ್ನು ವಸ್ತುನಿಷ್ಠವಾಗಿ ಪರಿಶೀಲಿಸುತ್ತವೆ. ಸುತ್ತ ಚಾಲ್ತಿಯಲ್ಲಿರುವ ಸ್ಥಳನಾಮಗಳ ಮೂಲ, ಕನ್ನಡ ಗಾದೆಗಳ, ಕನ್ನಡ ಸಂಸ್ಕೃತಿಯ ಕೊಡುಗೆ, ದೇವದಾಸಿ ಪದ್ಧತಿಯ ಆರಂಭ, ಸ್ವರೂಪ, ಕಾಲ ಸಂದಂತೆ ಪಡೆದ ತಿರುವು, ಹಿಂದೆ ಬದುಕಿಗೆ ಆಧಾರವಾಗಿದ್ದ 'ಬೇಟೆ', ನಾಗರಿಕತೆಯ ಪರಿಣಾಮದಿಂದ ಕಾಡೇ ನಾಶವಾದ ವಿಚಾರ, 'ಹಿಂಸೆ'ಯ ನಾನಾ ಮುಖಗಳನ್ನು ಪರಿಚಯಿಸುವ, ವಿಶ್ಲೇಷಿಸುವ ಲೇಖನಗಳಿವೆ.



## ಅರ್ಥರೇಖೆ

ಕೃಷ್ಣಪರಮೇಶ್ವರ ಭಟ್ಟ

**ಪುಟ : xii + ೧೮೦** **ಬೆಲೆ : ರೂ. ೧೪೦**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜು, ಹೊಸೂರು ರಸ್ತೆ

ಬೆಂಗಳೂರು - ೫೬೦ ೦೨೯

ಈ ಕೃತಿಯಲ್ಲಿನ ಲೇಖನಗಳು ಭಾಷಾಶಾಸ್ತ್ರಕ್ಕೆ ನೇರವಾಗಿಯೋ ಪರೋಕ್ಷವಾಗಿಯೋ ಸಂಬಂಧಿಸಿವೆ. ಸಾಹಿತ್ಯಕೃತಿಗಳನ್ನು ಭಾಷಾ ಶಾಸ್ತ್ರದ ಹಿನ್ನೆಲೆಯಲ್ಲಿ ಲೇಖಕರು ವಿಶ್ಲೇಷಿಸಿದ್ದಾರೆ. 'ನವೋದಯ ಕಾವ್ಯದ ಭಾಷೆ ಮತು ಆಲೋಚನೆ' 'ರೂಪಕಗಳ ಬಳಕೆ' ಹಾಗೂ 'ಜಿ. ಎಸ್. ಎಸ್. ಕಾವ್ಯ ಭಾಷೆ' – ಎಂಬ ಲೇಖನಗಳಲ್ಲಿ ಮುಖ್ಯವಾಗಿ ಶಬ್ದಗಳ ಬಳಕೆಯನ್ನು ಆಧರಿಸಿದ ವಿಶ್ಲೇಷಣೆಯಿದೆ. 'ಹರಿವ ನೀರಿದು: ಒಂದು ಭಾಷಿಕ ವಿಶ್ಲೇಷಣೆ' ಎಂಬುದು ವಾಕ್ಯರಚನೆಯನ್ನಾಧರಿಸಿದೆ. 'ಪಾಂಡುವಿನ ಮರಣ ಪ್ರಸಂಗ' ಹಾಗೂ 'ಮಾಸ್ತಿಯವರ ಕತೆಗಳ ಭಾಷೆ'ಗಳಲ್ಲಿ ವಾಕ್ಯಗಳ ಒಳರಚನೆ ಹಾಗೂ ಭಾಷೇತರ ಮಾಹಿತಿಗಳ ಹಿನ್ನೆಲೆಯಲ್ಲಿ ವಸ್ತುವನ್ನು ನೋಡುವ ಪ್ರಯತ್ನವಿದೆ. 'ಶಂ. ಬಾ. ಅವರ ದೃಷ್ಟಿಯಲ್ಲಿ ಭಾಷೆ ಮತ್ತು ಸಂಸ್ಕೃತಿ' 'ಕನ್ನಡ ನುಡಿಯ ಜೀವಾಳ' – ಲೇಖನಗಳಲ್ಲಿ 'ಭಾಷೆ'ಯ ಹಿನ್ನೆಲೆಯಲ್ಲಿ ಅವುಗಳ ರಚನೆಯನ್ನು ಗಮನಿಸಲಾಗಿದೆ. 'ಭಾಷೆ ಮತ್ತು ಸ್ವಾತಂತ್ರ್ಯ' 'ಭಾಷೆಯ ಮನೋವೈಜ್ಞಾನಿಕ ನೆಲೆ' 'ಅಶಾಬ್ದಿಕವಾದ ಆಲೋಚನೆಗಳು' – ಈ ಮೂರು ಲೇಖನಗಳು ಭಾಷಾಂತರವಾಗಿದ್ದು ಆಧುನಿಕ ಭಾಷಾ ಚಿಂತನೆಗಳ ಸ್ವರೂಪವನ್ನು ಪರಿಚಯಿಸುತ್ತವೆ. ಬರವಣಿಗೆ ಓದುಗರನ್ನು ಮುಖಾಮುಖಿಯಾಗುವ ಶಕ್ತಿಯನ್ನು ಹೊಂದಿದೆ.



## ಉತ್ತರೆಯ ಅಳಲು

ಕೆ. ಶಾರದಾ ಭಟ್

**ಪುಟ : ೧೫೨** **ಬೆಲೆ : ರೂ. ೭೫**

**ಸುಮಂತ ಪ್ರಕಾಶನ**, ಉಪ್ಪಿನಕೋಟೆ

ಬ್ರಹ್ಮಾವರ - ೫೭೬ ೨೧೩, ಉಡುಪಿ ಜಿಲ್ಲೆ

ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಕುರಿತ ಲೇಖನಗಳ ಸಂಗ್ರಹ ಇದು. ಇವು ನಮ್ಮ ಸಮಾಜದಲ್ಲಿ ನಡೆಯುತ್ತಲೇ ಇರುವ ಘಟನೆಗಳನ್ನು ಆಧರಿಸಿ, ಸ್ತ್ರೀಗೆ ಆಗುತ್ತಿರುವ ಅನ್ಯಾಯ, ಅನಿಷ್ಟಗಳನ್ನು ವಿಮರ್ಶಿಸುತ್ತವೆ, ಮತ್ತು ಆ ಮೂಲಕ ತಿಳಿವನ್ನುಂಟುಮಾಡುತ್ತವೆ. ಸ್ತ್ರೀಯರ ಕುರಿತು ಈ ಸಮಾಜ ಕಟ್ಟಿಕೊಂಡ ಅರಿವಿನ ಎಲ್ಲ ಆಯಾಮಗಳನ್ನು, ಅವುಗಳ ಹಿಂದಿನ ನಿಜಸ್ಥಿತಿಯನ್ನು ಪ್ರಸ್ತುತ ಸಂಕಲನದ ಲೇಖನಗಳು ವಿಶ್ಲೇಷಿಸುತ್ತವೆ. 'ಈ ವಿಶ್ಲೇಷಣೆಯನ್ನು 'ಸ್ತ್ರೀವಾದ' ಎನ್ನುವುದಕ್ಕಿಂತ 'ಸ್ತ್ರೀಪ್ರಜ್ಞೆ' ಎಂದು ಕರೆಯುವುದೇ ಸೂಕ್ತ' – ಎಂದು ಮುನ್ನುಡಿಯಲ್ಲಿ ಜಿ. ರಾಜಶೇಖರ್ ಹೇಳಿರುವುದು ವಸ್ತುನಿಷ್ಠ ಸಂಗತಿಯೇ ಆಗಿದೆ. ಅಲ್ಲದೆ, ವಾದಗಳನ್ನು ಮೀರಿದ ಮಾನವೀಯ ಅಂತಃಕರಣದ ತುಡಿತ, ನ್ಯಾಯದ ಪರ ನಿಲುವು – ಇವೇ ಲೇಖಕಿಯ ಪ್ರತಿಯೊಂದು ಮಾತಿನಲ್ಲೂ ಎದ್ದುಕಾಣುತ್ತವೆ.



## ಕಾರ್ಮುಗಿಲು ಕೋಲ್ಮಿಂಚು

ಮಲಯಾಳಂ ಮೂಲ : ಮಲಯಾಟ್ಟೂರ್ ಮತ್ತು ಸಕ್ಕರಿಯ

ಕನ್ನಡಾನುವಾದ : ಪಾರ್ವತಿ ಜಿ. ಐತಾಳ್

**ಪುಟ : iv + ೧೮೦ = ೧೮೪** **ಬೆಲೆ : ರೂ. ೭೦**

**ಧೃತಿ ಪ್ರಕಾಶನ**, ಜಿ-೩, ಹಯಗ್ರೀವ ಅಪಾರ್ಟ್‌ಮೆಂಟ್

ನಂ. ೧, ೨, ದತ್ತಾತ್ರೇಯ ದೇವಸ್ಥಾನದ ರಸ್ತೆ, ೧ನೇ ಕ್ರಾಸ್

೫ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ

ಬೆಂಗಳೂರು - ೫೬೦ ೦೧೯

ಮಲಯಾಳದ ಲೇಖಕರುಗಳಾದ ದಿ|| ಮಲಯಾಟ್ಟೂರು ರಾಮಕೃಷ್ಣನ್ ಮತ್ತು ಸಕ್ಕರಿಯ ಇವರುಗಳ ನಾಲ್ಕು ಕಿರು ಕಾದಂಬರಿಗಳನ್ನು ಪಾರ್ವತಿ ಜಿ. ಐತಾಳ್‌ರವರು ಕನ್ನಡಿಗರಿಗೆ ಪರಿಚಯಿಸಿದ್ದಾರೆ. ಈಗಾಗಲೇ ಮಲಯಾಳದ ಅನೇಕ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಕಾರ್ಮುಗಿಲು ಕೋಲ್ಮಿಂಚು', 'ಜಸ್ಟಿಸ್ ಜಯಪಾಲ್' 'ಭಾಸ್ಕರ ಪಟೇಲರು ಮತ್ತು ನನ್ನ ಬದುಕು' 'ಪ್ರೇಯಿಸ್ ದಿ ಲಾರ್ಡ್' – ಈ ನಾಲ್ಕು ಕಿರು ಕಾದಂಬರಿಗಳು ಈ ಸಂಕಲನದಲ್ಲಿವೆ. ಅನುವಾದವು ಸರಳವೂ ನೇರವೂ ಆಗಿದ್ದು, ಮಲೆಯಾಳಿ ಕತೆಯನ್ನು ಕನ್ನಡದಲ್ಲಿ ಹೇಳಲು ಲೇಖಕಿ ಪ್ರಯತ್ನಿಸಿದ್ದಾರೆ. ಕತೆಗಳು ಮನಮುಟ್ಟುವಂತಿದ್ದು ಸುಲಭವಾಗಿ ಓದಿಸಿಕೊಂಡು ಹೋಗುತ್ತವೆ.

## ನಕ್ಷತ್ರಕೆ ಪಾತಿ



ಆರ್. ಪವಿತ್ರ ಪ್ರಿಯಭಾಷಿಣಿ

**ಪುಟ : xiv + ೫೪ = ೬೮** **ಬೆಲೆ : ರೂ. ೫೦**

**ಚಿನ್ಮೂಲಾದ್ರಿ ಪ್ರಕಾಶನ**, ಆತ್ಮೀಯ, ಫಿಲ್ಟರ್ ಹೌಸ್ ರಸ್ತೆ

ಚಿತ್ರದುರ್ಗ - ೫೭೭ ೫೦೧

ಲೇಖಕಿ ತಮ್ಮ ಕವಿತೆಗಳ ಮೂಲಕ ನಕ್ಷತ್ರಕೆ ಪಾತಿ ಕಟ್ಟುವ ಕುಶಲತೆಯನ್ನು ತೋರಿದ್ದಾರೆ. ಮೃದುವಾದ, ಸೂಕ್ಷ್ಮವಾದ ಲಯ ಗಾರಿಕೆಯ ಮೂಲಕ ಪ್ರಾಮಾಣಿಕ ಭಾವ ತುಮುಲಗಳು ಇಲ್ಲಿವೆ. 'ಆಕಾಶದ' ಆಶಯ ಹೊತ್ತ ಕವಿತೆಗಳು ಭುವಿಗೆ ಅಂಟಿಕೊಂಡೇ ಮಾತು ಮೌನವಾಗಿ, ಮೌನ ಕಾವ್ಯವಾಗುವ ರೂಪಾಂತರವನ್ನು ಕಟ್ಟಿಕೊಡುತ್ತವೆ. ಅರ್ಥಪೂರ್ಣವಾದ, ವಿಮರ್ಶಾತ್ಮಕವಾದ ಎಚ್. ಎಸ್. ವೆಂಕಟೇಶ್‌ಮೂರ್ತಿಯವರ ಮುನ್ನುಡಿ ಕವನ ಸಂಕಲನಕ್ಕೆ ಮೆರುಗು ತಂದಿದೆ. ''ಮುತ್ತಾಗ ಬಯಸುವ ನೀರಹನಿ'' ಯಂಥಾ ಮೃದು ಮನಸ್ಸಿನ ಮಹತ್ವಾಕಾಂಕ್ಷೆಯ ಕವಯಿತ್ರಿ ಪವಿತ್ರ ಪ್ರಿಯಭಾಷಿಣಿ, ಅನುಭವವು ಅಂತರಾಳದಲ್ಲಿ ಘನೀಕೃತ ಹರಳುಗಟ್ಟಿ ಚಿಪ್ಪೊಡೆಯುವ ಕಾಲಕ್ಕಾಗಿ ಸಹನೆ, ಸಂಯಮದಿಂದ ಕಾಯುತ್ತಾ ಕೂರುವ ಮುಗ್ಧ ಶಬರಿ ಮನಸ್ಸು – ಈ ಸಂಕಲನದ ಹಿಂದಿದೆ ಎಂಬ ಲೋಕೇಶ ಅಗಸನಕಟ್ಟೆಯವರ ಮಾತುಗಳು ಈ ಕವಿತೆಗಳ ಸತ್ವವನ್ನು ಎತ್ತಿಹಿಡಿಯುತ್ತವೆ.

– ಸುಜಾತ ಲಕ್ಷ್ಮೀಪುರ

ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯

ನಿತ್ಯವೂ ನಾವು ಅನೇಕ ವಿಚಾರಗಳಲ್ಲಿ ಮುಳಗಿರುತ್ತೇವೆ. ಮನೆಯ ಖರ್ಚು ವೆಚ್ಚಗಳ ಬಾಯಿಗೂಡಿಸುವಿಕೆ - ತೊಡುವ ಬಟ್ಟೆ ಬರೆಗಳ ಬಗ್ಗೆ - ಖರೀದಿಸುವ ದವಸ ಧಾನ್ಯ ತರಕಾರಿಗಳ ಬಗ್ಗೆ - ಕಚೇರಿಯ ಕೆಲಸಗಳ ಬಗ್ಗೆ – ಒಂದೇ ಎರಡೇ, ಬೆಳಿಗ್ಗೆಯಿಂದ ರಾತ್ರಿ ಮಲಗುವವರೆಗೂ ಒಂದಿಲ್ಲೊಂದು ವಿಚಾರ ನಮ್ಮನ್ನು ಕಾಡುತ್ತಿರುತ್ತದೆ. ಆದರೆ ಒಂದು ಮಹತ್ವದ ವಿಚಾರವನ್ನೇ ಈ ಜಂಜಡದಲ್ಲಿ ಮರೆತಿರುತ್ತೇವೆ. ಅದು 'ನಾವೆಷ್ಟು ಆರೋಗ್ಯಶಾಲಿಗಳು' ಎಂಬುದನ್ನು ತಿಳಿದುಕೊಳ್ಳುವ ಯತ್ನ. 'ಆರೋಗ್ಯಂ ಖಲು ಧರ್ಮಸಾಧನಂ' ಎನ್ನುತ್ತಾರೆ. ನಮ್ಮ ಆರೋಗ್ಯ ಸುಸ್ಥಿತಿಯಲ್ಲಿ ಇದೆಯೇ ಎಂಬುದರ ಅರಿವು ನಮಗಿರುವುದಿಲ್ಲ. ನಮ್ಮ ಬದಲಾದ ಜೀವನ ಕ್ರಮದಲ್ಲಿ ನಾವು ಆರೋಗ್ಯ ರಕ್ಷಣೆಯ ಬಗ್ಗೆ ಕಾಳಜಿ ವಹಿಸುವುದೇ ಕಡಿಮೆಯಾಗಿದೆ. ನಮ್ಮ ಜೀವನವನ್ನು ಸಂರಕ್ಷಿಸುವ ದೇಹವನ್ನು ನಿರ್ಲಕ್ಷಿಸಿದರೆ ಅದಕ್ಕೆ ನಾವು ಭಾರಿ ಬೆಲೆ ತೆರಬೇಕಾಗುತ್ತದೆಯಲ್ಲವೆ ? ಆರೋಗ್ಯ ರಕ್ಷಣೆಗೆ ನಮ್ಮ ದೈನಂದಿನ ಜೀವನದಲ್ಲಿ ಆದ್ಯತೆ ನೀಡಿದರೆ ಎಷ್ಟೋ ರೋಗ ರುಜಿನಗಳನ್ನು ಸಲೀಸಾಗಿ ತಡೆಗಟ್ಟಬಹುದು. ಆದರೆ ಉದಾಸೀನಗೈದು ರೋಗ ಉಲ್ಬಣಗೊಂಡಾಗ ರೋಗಕ್ಕೆ ಯಕ್ಷಿಣಿ ಪರಿಹಾರ ಬಯಸುವುದು ಸೂಕ್ತವಲ್ಲ.

೧. ಆರೋಗ್ಯ ಪ್ರಜ್ಞೆ

ಪ್ರತಿಯೊಬ್ಬರಿಗೂ ಪ್ರಾಥಮಿಕ ಆರೋಗ್ಯ ಕುರಿತ ಜ್ಞಾನವಿರಲೇಬೇಕು. ಈಗ ಕನ್ನಡದಲ್ಲಿ ಸಾಕಷ್ಟು ವೈದ್ಯ ಸಾಹಿತ್ಯ ಪ್ರಕಟಗೊಂಡಿದೆ. ಎಲ್ಲ ರೀತಿಯ ಪ್ರಾಥಮಿಕ ಜ್ಞಾನ ನೀಡುವುದರ ಜೊತೆಗೆ ಸುಲಭ ಪರಿಹಾರೋಪಾಯಗಳನ್ನು ಸೂಚಿಸುತ್ತವೆ. ಮೂಳೆಗೆ ಫ್ರಾಕ್ಚರ್ ಆದಾಗ ಏನೇನೋ ಉಪಾಯಗಳನ್ನು ಮಾಡುತ್ತೇವೆ. ಎಷ್ಟೋ ಜನ ಅಕ್ಷರಸ್ಥ ಮಹಿಳೆಯರಿಗೆ 'ಋತುಚಕ್ರ'ದ ಬಗ್ಗೆ ಸೂಕ್ತ ಜ್ಞಾನವಿಲ್ಲದಿರುವುದನ್ನು ಕಂಡಿದ್ದೇವೆ. ಏನೇನೋ ಮೂಢ ನಂಬಿಕೆಗಳಿಗೆ ಶರಣಾಗಿ ಮಹಿಳೆಯರು ಅನೇಕ ಸಮಸ್ಯೆಗಳಿಗೆ ಬಲಿಯಾಗುತ್ತಾರೆ. 'ಸ್ಯಾನಿಟರಿ ನ್ಯಾಪ್ಕಿನ್' ಗಳನ್ನು ಹೇಗೆ ಉಪಯೋಗಿಸಬೇಕೆಂಬ ವಿಚಾರ ಗೊತ್ತಿರುವುದಿಲ್ಲ. ಇದಲ್ಲದೆ, ಮಾನಸಿಕ ಒತ್ತಡದ ಅವಾಂತರಗಳು ಅನೇಕ. ಇದಕ್ಕೆಲ್ಲ ಪ್ರಾಥಮಿಕ ಆರೋಗ್ಯದ ಬಗ್ಗೆ ತಿಳುವಳಿಕೆ ಇರಬೇಕಾದ್ದು ಅವಶ್ಯ. ದೇಹದ ರಚನೆ ಹಾಗೂ ಅವುಗಳ ಕ್ರಿಯೆಗಳ ಬಗ್ಗೆ ಅರಿವು ಇರಬೇಕು. ಇದರಿಂದ ಆರೋಗ್ಯ ಸಮಸ್ಯೆಯ ಮೂಲ ಗೊತ್ತಾಗುವುದು ಹಾಗೂ ಪರಿಹಾರ ಕಂಡುಕೊಳ್ಳಲು ಸುಲಭವಾಗುವುದು.

೨. ರಕ್ತ

ನಮ್ಮ ದೇಹದಲ್ಲಿ ಅತ್ಯಂತ ಹೊಣೆಗಾರಿಕೆಯಿಂದ ಕೆಲಸ ಮಾಡುವ ರಕ್ತದ ಬಗ್ಗೆ ಪರಿಚಯವಿದೆಯೆ ?

ರಕ್ತದ ಎರಡು ಪ್ರಮುಖ ಘಟಕಗಳು (ರಕ್ತದ್ರವ),

# ನಾವೆಷ್ಟು ಆರೋಗ್ಯಶಾಲಿಗಳು ?

## - ನಾವು ಅರಿಯದ ಕೆಲ ಸಮಸ್ಯೆಗಳು

ಡಾ|| ವಸಂತ ಅ. ಕುಲಕರ್ಣಿ

**ಇತ್ತೀಚಿಗೆ ಕಾಣುವುದೆಂದರೆ ಗೀಳುತನ – 'ಮೇನಿಯಾ'. ಕೆಲವರು ರೋಗಗಳ ಬಗ್ಗೆ ತುಂಬ ನಿರ್ಲಕ್ಷಿಸಿದರೆ ಇನ್ನೂ ಕೆಲವರು ರೋಗಗಳ ಬಗ್ಗೆ ಇಲ್ಲದ ಭಯವನ್ನು ಕಲ್ಪಿಸಿಕೊಂಡು, ಅವಾಸ್ತವ ಹೆದರಿಕೆಯಿಂದ ನರಳುವರು. ಹೃದಯ ಬೇನೆ ಭಯ, ಕ್ಯಾನ್ಸರ್ ರೋಗದ ಭಯ – ಹೀಗೆ ಸುಳ್ಳು ಕಲ್ಪನೆಗಳನ್ನು ಹೊಂದಿರುತ್ತಾರೆ. ಇಂಥವರು ವೈದ್ಯರೊಡನೆ ನೇರವಾಗಿ ಚರ್ಚಿಸುವುದಿಲ್ಲ ಹಾಗೂ ಡಾಕ್ಟರನ್ನು ಕಾಣಲೂ ಭಯಪಡುತ್ತಾರೆ. ಇಲ್ಲದ ರೋಗಗಳ ಕಲ್ಪನೆಯು ಇವರನ್ನು ಭಯದ ಕೂಪಕ್ಕೆ ನೂಕುತ್ತದೆ. ಇವರಿಗೆ ಆತ್ಮಸ್ಥೈರ್ಯ ಇರುವುದಿಲ್ಲ, ಪ್ರತಿನಿತ್ಯ ಸಲ್ಲದ ವಿಚಾರಗಳು ಚಿಂತೆಗೀಡುಮಾಡುತ್ತವೆ. ಅತಿಯಾಗಿ ಕೈ ತೊಳೆಯುವುದು, ಸಂಶಯ ದೃಷ್ಟಿಯಿಂದ ನೋಡುವುದು, ಅತಿಯಾದ ಜಾಗರೂಕತೆ – ಇವು ಗೀಳುತನದ ಲಕ್ಷಣಗಳು. ಇವರು ಮಕ್ಕಳನ್ನು ಅತಿಯಾಗಿ ಮುದ್ದಿಸಿ ಬಂಧನದಲ್ಲಿರಿಸುವರು. ಇದು ಮಕ್ಕಳಿಗೆ ಅಪಾಯ. ಹೀಗೆ ನಾವೆಷ್ಟು ಆರೋಗ್ಯಶಾಲಿಗಳು ಎಂಬ ಪ್ರಶ್ನೆಗೆ ನಮ್ಮ ಮನದಲ್ಲಿಯೇ ಉತ್ತರ ಹುಡುಕಾಡಬೇಕಾಗಿದೆ. ನಮ್ಮ ಆರೋಗ್ಯಭಾಗ್ಯವನ್ನು ನಾವೇ ಸೃಷ್ಟಿಸಿಕೊಳ್ಳಬೇಕಾದ್ದು ಅವಶ್ಯ. ಅಂಗೈಯಲ್ಲಿ ನಮ್ಮ ಆರೋಗ್ಯ ಸಮಸ್ಯೆಗಳಿಗೆ ಸುಲಭ ಸೂತ್ರಗಳಿರುವಾಗ ಯಾಕಿಷ್ಟು ಪರಿಶ್ರಮ, ಯಾಕಿಷ್ಟು ಚಿಂತೆ ?**

**ನೀವೆ ಹೇಳಿ.**



ಒಂದು ಪ್ಲಾಸ್ಮಾ(೫೫%) ; ಇನ್ನೊಂದು ರಕ್ತಕಣಗಳ ಘಟಕ (೪೫%). ರಕ್ತಕಣಗಳಲ್ಲಿ (೧)ಕೆಂಪು ರಕ್ತ ಗೋಲಕಗಳು (೨) ಶ್ವೇತರಕ್ತ ಕಣಗಳು (೩) ತಟ್ಟೆ (ಪ್ಲೇಟ್‌ಲೆಟ್‌ಗಳು) ಕೆಂಪು ರಕ್ತ ಗೋಲಕದಲ್ಲಿ ವರ್ಣಯುಕ್ತ ಸಂಯುಕ್ತವಿರುತ್ತದೆ – ಅದುವೇ 'ಹಿಮೊಗ್ಲೋಬಿನ್'. ಇದುವೇ ರಕ್ತಕ್ಕೆ ಕೆಂಪು ವರ್ಣವನ್ನು ತಂದಿದೆ. ಪ್ರೋಟೀನ್ ಮತ್ತು ಕಬ್ಬಿಣಾಂಶಗಳಿಂದಾದ ಸಂಯುಕ್ತವು ಹಿಮೊಗ್ಲೋಬಿನ್, ಪ್ರಾಣವಾಯುವನ್ನು ಪುಪ್ಪುಸಗಳಿಂದ ಹೊತ್ತೊಯ್ದು ದೇಹದ ಎಲ್ಲ ಅಂಗಾಂಶಗಳಿಗೆ ಪರಿಚಲನೆಯ ಮೂಲಕ ಸರಬರಾಜು ಮಾಡುತ್ತದೆ. ಹಿಮೊಗ್ಲೋಬಿನ್ ಕಡಿಮೆಗೊಂಡರೆ 'ರಕ್ತಹೀನತೆ' ಅಥವಾ 'ಅನೀಮಿಯಾ' ಉಂಟಾಗುತ್ತದೆ. 'ಅನೀಮಿಯಾ' ರೋಗವಾಗಿರದೆ ಅದು ರೋಗದ ಚಿಹ್ನೆಯಾಗಿ ಪ್ರಕಟಗೊಳ್ಳುತ್ತದೆ. ಕಾರಣ, ಹಿಮೊಗ್ಲೋಬಿನ್ ಯುವಕರಲ್ಲಿ ಶೇಕಡ ೧೪.೮ ಗ್ರಾಂ ಹಾಗೂ ಮಹಿಳೆಯರಲ್ಲಿ ಶೇಕಡ ೧೨-೧೫.೫ ಗ್ರಾಂ ಇರಬೇಕು. ರಕ್ತಗೋಲಕಗಳು ೪ ಮಿಲಿಯನ್‌ಗಿಂತ ಕಡಿಮೆ ಇದ್ದರೆ ರಕ್ತಹೀನತೆ ಇದೆ ಎನ್ನಬಹುದು. ಅನೀಮಿಯಾದಲ್ಲಿ ಕಣ್ಣಿನ ರೆಪ್ಪೆಯ ಒಳಭಾಗ, ನಾಲಿಗೆ, ಉಗುರುಗಳು ನಿಸ್ತೇಜಗೊಳ್ಳುವವು. ಆಗ ಶರೀರ ಅತಿಯಾದ ಆಯಾಸ, ನಿರುತ್ಸಾಹ ಹಾಗೂ ಅನೇಕ ರೋಗಗಳ ತವರುಮನೆಯಾಗುತ್ತದೆ. ಪೌಷ್ಟಿಕಾಂಶಗಳ ಆಹಾರ ಹಾಗೂ ಕಬ್ಬಿಣಾಂಶಗಳನ್ನು (ಬೆಲ್ಲ + ಸೊಪ್ಪು) ಸೇವಿಸುವುದರಿಂದ 'ಅನೀಮಿಯಾ'ವನ್ನು ಹೋಗಲಾಡಿಸಬಹುದು.

**೩. ಸುಖ ನಿದ್ರೆ**

ಸುಖ ನಿದ್ರೆ ಆರೋಗ್ಯದ ಅಡಿಪಾಯ – ಅದು ದೇಹದ ಚೈತನ್ಯ ಮರಳಿ ನೀಡುವ ಒಂದು ಮಾಧ್ಯಮ. ಒಬ್ಬ ಯುವಕನಿಗೆ ಸುಮಾರು ಎಂಟು ತಾಸು ನಿದ್ರೆ ಅವಶ್ಯಕ. ಇಳಿವಯಸ್ಸಿನವರಿಗೆ ನಿದ್ರೆ ಕಡಿಮೆ. ಶಿಶುವಿಗೆ ಕನಿಷ್ಠ ೧೨ ತಾಸು ನಿದ್ರೆ ಬೇಕೇ ಬೇಕು. ಸಾಮಾನ್ಯವಾಗಿ ಭಾರತೀಯರು ಬೇಗ ಮಲಗಿ ಬೇಗ ಏಳುವ ರೂಢಿಯಿಟ್ಟುಕೊಂಡಿರುತ್ತಾರೆ. ಆದರೆ ಇಂದಿನ ನಿದ್ರಾಹೀನತೆಯ ಆರೋಗ್ಯ ಸಮಸ್ಯೆಗಳು ನೂರಾರು. ಚಿಂತೆ - ದುಗುಡ - ಮನೋಖಿನ್ನತೆ - ಮನೋಚಂಚಲ - ದೈಹಿಕ ಬಳಲುವಿಕೆ - ಮನೋನಿಗ್ರಹಕ್ಕೆ ಸಂಚಕಾರ – ಹೀಗೆ ನಿದ್ರೆಯ ಕೊರತೆ ನೂರೆಂಟು ಜಾಡ್ಯಗಳನ್ನು ತಂದೊಡ್ಡುತ್ತದೆ. ನಿದ್ರಾಹೀನತೆ ತರುವ ಅವಾಂತರಗಳಿಗೆ ನಮ್ಮಲ್ಲೆ ಉಪಾಯಗಳಿವೆ. ಸುಖ ನಿದ್ರೆಗಾಗಿ ಎಲ್ಲ ತರಹದ ಅನುಕೂಲತೆಗಳನ್ನು ಒದಗಿಸಿಕೊಳ್ಳಬೇಕು. ಇತ್ತೀಚಿನ ದಿನಗಳಲ್ಲಿ ಮನೋಲ್ಲಾಸ ಮಾಯವಾಗಿರುವುದು ಕಂಡುಬಂದಿದೆ. ಜಂಜಡಮಯ ಜೀವನ ಹಾಗೂ ಆಧುನಿಕ ಜೀವನಶೈಲಿಯಿಂದ ನಾವು ಜರಿಯುತ್ತೇವೆ. ಪರಿಸರ ಮಾಲಿನ್ಯ, ಜಲಮಾಲಿನ್ಯಗಳ ಬಗ್ಗೆ ಗೊತ್ತಿದ್ದರೂ ಸಾಂಸ್ಕೃತಿಕ ಮಾಲಿನ್ಯದ ಬಗ್ಗೆ ನಮಗೆ ಏನೂ ತಿಳಿಯದು. ಇದು ವಿಷಾದನೀಯ. ಟಿ. ವಿ. ಮಾಧ್ಯಮಗಳಿಂದ ಮಕ್ಕಳಲ್ಲಿ ಇನ್ಸುಲಿನ್ ಉತ್ಪಾದನೆ ಕಡಿಮೆಯಾಗುತ್ತಿದೆ. ಮಕ್ಕಳು ದೃಷ್ಟಿ ತೊಂದರೆಗಳಿಂದ ಬಳಲುತ್ತಾರೆ. ಅಲ್ಲದೆ ಮನೋವಿಕಾರಗಳಿಗೆ ಗುರಿಯಾಗುತ್ತಿದ್ದಾರೆ ಎಂದು ಸಂಶೋಧನೆಗಳು, ಪ್ರಬಂಧಗಳು ಹೇಳುತ್ತವೆ. ಕ್ರೌರ್ಯ, ಹಿಂಸೆ, ನಕಾರಾತ್ಮಕ ದೃಶ್ಯಗಳು ಅಸ್ಥೈರ್ಯ ಉಂಟುಮಾಡುವವು. (ಅಲ್ಲದೆ ಸಾಂಸ್ಕೃತಿಕ ಮೌಲ್ಯಗಳಾದ ಗುರುಭಕ್ತಿ, ಶ್ರದ್ಧೆ, ನಿಷ್ಠತೆ ಇವುಗಳಲ್ಲದೆ ಆಚರಣೆಗಳಾದ ಪೂಜೆ ಪುನಸ್ಕಾರ, ಯೋಗ-ಧ್ಯಾನಗಳು ಕೂಡ ಮಾಯವಾಗಿರುವ ಕುರುಡ ಕಾಂಚಾಣದ ಬೆನ್ನು ಹತ್ತಿದಾಗ ಅಪಮಾರ್ಗಗಳು ಮನಃಕ್ಷೋಭೆ ಉಂಟುಮಾಡುವುವು.) ಒಂದು ವೃತ್ತಿಗೆ ಪ್ರವೃತ್ತಿ ಹಿಂದಿನ ಕಾಲದಲ್ಲಿತ್ತು. ಸಂಗೀತ - ಗಾಯನ- ಹರಿಕಥೆ - ಚಿತ್ರಕಲೆ - ರಂಗೋಲಿ – ಈ ಪ್ರವೃತ್ತಿಗಳು ಮಾನಸಿಕ ನೆಮ್ಮದಿ ತರುವದರ ಜೊತೆಗೆ – ಅಪಾರವಾದ ಸೃಜನಶೀಲತೆ ನೀಡುತ್ತವೆ. ಹಾಗೂ ವೃತ್ತಿಗೂ ಪುಷ್ಟಿಕೊಡುತ್ತವೆ. ಸಾಹಿತ್ಯ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಅನುಷ್ಠಾನ ಸದೃಢ ಆರೋಗ್ಯದ ಬುನಾದಿ. ಅಂದ ಮೇಲೆ ಅಡಿಪಾಯ ಇಲ್ಲದಿದ್ದರೆ ಆರೋಗ್ಯವೆಂಬ ಕಟ್ಟಡ ನಿಂತೀತೆ ?

**೪. ಔಷಧ ಕ್ರಮಗಳು**

ಇನ್ನೊಂದು ಸಮಸ್ಯೆಯೆಂದರೆ ನಾವು ಸೇವಿಸುವ ಔಷಧ ಕ್ರಮಗಳ ಬಗ್ಗೆ ಹಾಗೂ ಡಾಕ್ಟರರಿಂದ ಮುಚ್ಚಿಡುವ ಆರೋಗ್ಯ ಸಮಸ್ಯೆಗಳು. ಡಾಕ್ಟರ್ ನಿಮ್ಮನ್ನು ತಪಾಸಿಸಿ ಔಷಧಿ ವಿಧಿಸುತ್ತಾರೆ. ಐದು ದಿನಗಳ ಔಷಧಿ ಅವರು ನೀಡಿದರು ಎಂದಿಟ್ಟುಕೊಳ್ಳಿ. ಒಂದೆರಡು ದಿನಗಳಲ್ಲಿ ನಿಮಗೆ ಸ್ವಾಸ್ಥ್ಯ ಮರಳುತ್ತದೆ. ಆಗ ನೀವು ಔಷಧಿ ಸೇವಿಸುವ ಕುರಿತು ನಿರ್ಲಕ್ಷಿಸುತ್ತೀರಿ. ಇದು ತಪ್ಪು. ಇದಕ್ಕೆ ದುಬಾರಿ ಬೆಲೆ ತೆರಬೇಕಾಗುತ್ತದೆ. ಕಾರಣ ನಿಮ್ಮ ಜಾಡ್ಯ ನಿಮ್ಮ ತಪ್ಪಿನಿಂದಲೇ ಮರುಕಳಿಸುತ್ತದೆ. ಡಾಕ್ಟರರು ವಿಧಿಸಿದ ಎಲ್ಲ ನಿಯಮಗಳನ್ನು ಪಾಲಿಸಬೇಕು. ಇನ್ನೊಂದು, ಜನಸಾಮಾನ್ಯರ 'ಸ್ವಯಂ ವೈದ್ಯಕೀಯ'. ಡ್ರಗ್ ಶಾಪಿಗೆ ಹೋಗಿ ಕೌಂಟರ ಮೇಲೆ ಔಷಧಿ ಪಡೆಯುವುದು ಕೂಡ ಅಪಾಯಕಾರಿ. ಯಾರದೋ ಸಲಹೆ ಅಥವಾ ಮನೆಯಲ್ಲಿ ಬೇರೆಯವರ ಹತ್ತಿರವಿದ್ದ ಮಾತ್ರೆಗಳನ್ನು ಸೇವಿಸುವುದರಿಂದಾಗಿ ಕೆಲ ಅವಾಂತರಗಳು ಸೃಷ್ಟಿಯಾಗುವುವು. ಆ ಮೂಲಕ ಅಡ್ಡಪರಿಣಾಮಗಳಿಂದ ಸಾವನ್ನಪ್ಪಿದ ಉದಾಹರಣೆಗಳಿವೆ. ಆಲೋಪಥಿ ಹಾಗೂ ಹೋಮಿಯೋಪಥಿ ಔಷಧಿಗಳನ್ನು ಕೂಡಿಯೇ ಸೇವಿಸುವುದು ತರವಲ್ಲ. ಅದು ದೇಹದಲ್ಲಿ ಅಂತರಕ್ರಿಯೆ ಉಂಟುಮಾಡಿ ಪರಿಣಾಮ ಮಾತ್ರ ಶೂನ್ಯವಾಗುವುದು. ಕಾರಣ, ಒಬ್ಬ ಡಾಕ್ಟರರಿಂದ ಪಡೆದ ಔಷಧಿಗಳ ಬಗ್ಗೆ ಇನ್ನೊಬ್ಬರ ಬಳಿ ಹೋದಾಗ ಮುಚ್ಚುಮರೆಯಿಲ್ಲದೆ ಹೇಳಬೇಕು. ಔಷಧಿ ಚಟ ಕೆಲವರಲ್ಲಿ ಮನೆಮಾಡಿರುತ್ತೆ. ಔಷಧವು ವರ ಸರಿ. ಆದರೆ, ಅದು ಶಾಪವೂ ಹೌದು ಎಂಬುದನ್ನು ನೆನಪಿನಲ್ಲಿಡಿ. ಬೇಕಾಬಿಟ್ಟಿಯಾಗಿ ಪ್ರತಿಜೈವಿಕಗಳನ್ನು (ಆಂಟಿಬಯಾಟಿಕ್) ಸೇವಿಸುವುದರಿಂದ ದೇಹದಲ್ಲಿ 'ನಿರೋಧಕತೆ' (ರೆಸಿಸ್ಟೆನ್ಸ್) ಕ್ಷೀಣಿಸಿ ಯಾವ ಜಾಡ್ಯವೂ ಮುಂದೆ ಔಷಧಕ್ಕೆ ಹಣಿಯುವುದಿಲ್ಲ. ಕೆಲ ಮೂಢ ನಂಬಿಕೆಗಳು ಸೇವನೆಗೆ ಕೆಲಬಾರಿ ಅಡ್ಡ ಬರುವುವು.

**೫. ನೀರು**

ನಾವು ಸೇವಿಸುವ 'ನೀರು' ಹೇಗಿರಬೇಕು ? ಈ ಕುರಿತು ಕೆಲವರು ತಮ್ಮದೇ ಆದ ನಿಲುವನ್ನು ಪಡೆದಿರುತ್ತಾರೆ. ಅದು ಕೊಳವೆ ಬಾವಿ ಅಥವಾ ನಲ್ಲಿ ನೀರು (ನಗರ ಸಭೆಯ ನೀರು) ಅಂತಹವರು ಅದರ ಬಗ್ಗೆ ಕಿಂಚಿತ್ ತಲೆಕೆಡಿಸಿಕೊಳ್ಳುವುದಿಲ್ಲ. ಅದು ರೋಗಾಣುಗಳಿಂದ ಮುಕ್ತವಾಗಿದ್ದು ಶುಚಿಯಾಗಿದೆಯೆ ? ಮನೆಯಲ್ಲಿ ಶುದ್ಧೀಕರಿಸಿ ರಕ್ಷಿಸುವ ಯಂತ್ರದಿಂದ ಸೋಸಿದರೂ ಅದನ್ನು ಪರೀಕ್ಷೆಗೆ ಒಳಪಡಿಸಿದರೂ ಗೊತ್ತಾಗುವುದಿಲ್ಲ. ಒಮ್ಮೆ ಹೆಪಟೈಟಿಸ್ (ಕಾಮಣಿ) ರೋಗ ಇಡೀ ಊರಿಗೆ ಪಸರಿಸಿತು. ಕಾರಣ, ಪೂರೈಕೆಯ ನೀರಿನಲ್ಲಿ ಕೊಳಚೆ ನೀರು ಮಿಶ್ರಿತವಾಗಿತ್ತು. ಅತಿಭೇದಿ, ಕಾಲರಾದಂಥ ಪ್ರಸಂಗಗಳು ಎದುರಾಗುವವು. ಸಂದೇಹ ಬಂದಲ್ಲಿ ತ್ಯಜಿಸಿ. ಇಲ್ಲವೆ ವಾಸನೆಯಿಂದ ಕೂಡಿದ್ದರೂ ತ್ಯಜಿಸಿ. ನೀರನ್ನು ಕಾಯಿಸಿ ಆರಿಸಿ ಕುಡಿಯುವುದೊಳಿತು. ಇತ್ತೀಚೆಗಂತೂ ಮಿನರಲ್ ವಾಟರ್ ಬಳಕೆ ಜಾಸ್ತಿಯಾಗಿದೆ. ಯಾರೂ ಬಾಟಲಿಯ ಎಕ್ಸ್‌ಪೈರಿ (ಮುಗಿದ ದಿನಾಂಕ) ನೋಡುವುದಿಲ್ಲ. ಸೀಲು ಖಾತ್ರಿ ಮಾಡಿಕೊಳ್ಳಿ. ಆದರೆ, ನಿರಂತರವಾಗಿ ಮಿನರಲ್ ವಾಟರ್ ಬಳಕೆ ಕೆಲ ಪಚನ ಸಮಸ್ಯೆಗಳನ್ನು, ಗ್ಯಾಸ್ ಟ್ರಬಲ್ ಉಂಟುಮಾಡಿದ ಉದಾಹರಣೆಗಳಿವೆ. ಮಿನರಲ್ ವಾಟರ್ ಉಪಯೋಗಿಸುವ ಮುನ್ನ ಖಚಿತತೆಯ ಬಗ್ಗೆ ಅಧಿಕೃತ ಮಾಹಿತಿ ಇರಬೇಕಾದ್ದು ಅವಶ್ಯ.

**೬. ನೋವು**

ಬೆನ್ನುನೋವು ಹಾಗೂ ಕುತ್ತಿಗೆಯ ನೋವು ಸರ್ವೇ ಸಾಮಾನ್ಯವಾಗಿ ದ್ವಿಚಕ್ರ ವಾಹನ ಅಥವಾ ಕಾರು ಓಡಿಸುವ ಜನರಲ್ಲಿ ಕಾಣುತ್ತದೆ. ಕಾರಣ ರಸ್ತೆ ಅಡೆತಡೆಗಳು (ಹಂಪ್ಸ್) ಹಾಗೂ 'ಟ್ರಾಫಿಕ್' ಜಾಮ್‌ನಲ್ಲಿ ಅರ್ಜೆಂಟ್ ಬ್ರೇಕಿನಿಂದ ಉಂಟಾಗುವ 'ಜರ್ಕ್ಸ್'ಗಳಿಂದ ಬೆನ್ನು ಮೂಳೆಗಳು ಘಾಸಿಗೊಳ್ಳುವುವು. ರೋಡ್ ಹಂಪ್‌ಗಳು ವೈಜ್ಞಾನಿಕ ದೃಷ್ಟಿಯಲ್ಲಿ ರಚಿತವಾಗಿಲ್ಲ. ಎತ್ತರದ ಗುಡ್ಡೆ ಮಾಡಿರುತ್ತಾರೆ. ಹೀಗಾಗಿ ದ್ವಿಚಕ್ರ ವಾಹನ ಚಾಲಕರಿಗೆ ಬೆನ್ನುಮೂಳೆಗೆ ಇಲ್ಲವೇ ಕುತ್ತಿಗೆ ಮೂಳೆಗೆ ಧಕ್ಕೆಯಾಗುವ ಸಾಧ್ಯತೆಯುಂಟು. ಆದ್ದರಿಂದ ಧಕ್ಕೆಯಾಗದ ಹಾಗೆ ವಾಹನ ನಡೆಸುವುದನ್ನು ಕಲಿಯಬೇಕು. ಬೆನ್ನುಮೂಳೆಗೆ ಆಗುವ ಅಪಾಯವನ್ನು ನಿರ್ಲಕ್ಷಿಸುವಂತಿಲ್ಲ, ಇವು ಕಾಯಂ ಆಗಿ ತೊಂದರೆಯುಂಟುಮಾಡಿ ವಿಕಲತೆ ಉಂಟಾಗುತ್ತದೆ. ನೋವು ಕುರಿತು ಅನೇಕ ಭ್ರಾಮಕ ಕಲ್ಪನೆಗಳುಂಟು. ತಲೆನೋವಿಗೆ ಹಲವಾರು ಕಾರಣಗಳನ್ನು ಹೇಳಬಹುದು. ದೃಷ್ಟಿದೋಷವನ್ನು ಕನ್ನಡಕದಿಂದ ಸರಿಪಡಿಸಿದರೆ ತಲೆನೋವು ಬಾರದು. ದೃಷ್ಟಿದೋಷದ ತಲೆನೋವು ಸಾಮಾನ್ಯವಾಗಿ ಸಾಯಂಕಾಲ ಬರುವುದು. ಮೂಗಿನ ಸೈನಸ್‌ದಿಂದ ಬರುವ ನೋವು ಬೆಳಗ್ಗೆ ಆರಂಭವಾಗುವುದು. ಕೆಲವರು ನೋವು ಶಮನಕಾರಕ

**ಹೊಸ್ತಿಲು**

ಭೂಮಿ, ಆಕಾಶಗಳ
ಹಗಲು, ರಾತ್ರಿಗಳ
ಹೊಸ್ತಿಲಾಯಿತೆ
ಬದುಕು ?

ಸಿ.ಪಿ.ಕೆ.
ಮೈಸೂರು

ಗಳನ್ನು ಸೇವಿಸುವ ರೂಢಿಮಾಡಿಕೊಂಡಿರುತ್ತಾರೆ. ನೋವು ತಾತ್ಕಾಲಿಕವಾಗಿ ಶಮನಗೊಂಡರೂ ಅದು ಪರಿಹಾರವಲ್ಲ. ಕಾರಣದ ಬೇರನ್ನು ಶೋಧಿಸಬೇಕು. ಇನ್ನು ಕೆಲವರಿಗೆ 'ನೋವು' ಉದ್ಭವಿಸುವ ಸ್ಥಾನ ಒಂದೆಡೆಯಾದರೆ ಅದು ಪ್ರಕಟಗೊಳ್ಳುವುದು ಇನ್ನೊಂದೆಡೆಗೆ. ಇದು ಸ್ಥಾನಪಲ್ಲಟ ನೋವು. ಹೃದಯ ತೊಂದರೆ ಅಥವಾ ಆಘಾತದಿಂದಾದ ನೋವು ಎಡಬದಿಯ ತೋಳಿನಲ್ಲಾಗಲಿ ಒಸಡಿನಲ್ಲಾಗಲಿ ಬರಬಹುದು. ಅಪೆಂಡಿಕ್ಸ್‌ನಿಂದಾದ ನೋವು ಹೊಕ್ಕುಳ ಸುತ್ತಲೂ ಬರುವುದು. 'ಕಿಡ್ನಿಯ' ನೋವು ಬೆನ್ನಿನ ಕೆಳ ಭಾಗಕ್ಕೆ ಬರುವುದು. ಇವು ನಿಷ್ಣಾತ ವೈದ್ಯರನ್ನೇ ದಿಕ್ಕು ತಪ್ಪಿಸುತ್ತವೆ. ನೋವಿಗೆ ಆರಂಭದಲ್ಲಿಯೇ ಚಿಕಿತ್ಸೆ ಪಡೆಯುವುದು ಸೂಕ್ತ. ಬೆನ್ನುನೋವು ಇದೆಯೆಂದು ನೋವಿಗೆ ತುಳಿಸುವುದನ್ನಾಗಲಿ ತಿಕ್ಕುವುದನ್ನಾಗಲಿ ಮಾಡಕೂಡದು. ಯಾವುದಕ್ಕೂ ವೈದ್ಯರ ಪರೀಕ್ಷೆ ಮುಖ್ಯವಾದುದು.

### ೭. ಅಲರ್ಜಿ

ಇನ್ನೊಂದು ಸರ್ವೇಸಾಮಾನ್ಯ ಉಪಟಳವೆಂದರೆ 'ಅಲರ್ಜಿ'. ಕೆಲ ವಸ್ತುಗಳು ದೇಹಕ್ಕೆ ಒಗ್ಗದಿರುವಾಗಲೂ ಒಳಸೇರಿದಾಗ ಉಂಟಾಗುವ ಅವಾಂಛಿತ ಪರಿಣಾಮವೇ 'ಅಲರ್ಜಿ'. ನನ್ನ ಸ್ನೇಹಿತ ಹಾಸ್ಯ ಮಾಡಿ ಹೇಳುತ್ತಿದ್ದ, ''ಡಾಕ್ಟರಿಗೆ ಏನೂ ತಿಳಿಯದಿದ್ದರೆ ಅದಕ್ಕೆ ಅಲರ್ಜಿ ಎಂದು ಪಟ್ಟಿಕಟ್ಟುತ್ತಾರೆ.'' ಇದು ಸ್ವಲ್ಪ ಮಟ್ಟಿಗೆ ನಿಜ. ವಿಜ್ಞಾನಿ ಬಾಯಡ್ ಹೇಳುತ್ತಾನೆ – ನಾವು ಅಲರ್ಜಿ ಉಂಟುಮಾಡುವ ವಸ್ತುಗಳ (ಅಲರ್ಜನ್ಸ್) ಮಧ್ಯೆ ತೇಲಾಡುತ್ತಿದ್ದೇವೆ. ಅಂದ ಮೇಲೆ ಅಲರ್ಜಿ ಎಲ್ಲ ಚರಾಚರ ವಸ್ತುಗಳಿಂದ ಬರಬಹುದು. ಸೂರ್ಯ ಕಿರಣ, ಮನೆಯ ಧೂಳು, ತಿನ್ನುವ ಕಾಯಿಪಲ್ಯೆ, ಸೇವಿಸುವ ಹಾಲು, ಯಾವುದರಿಂದಲೂ ಅಲರ್ಜಿ ಬರಬಹುದು. ತುರಿಕೆ, ಗಾಬರಿ, ಕಣ್ಣುಗಳು ಕೆಂಪಗಾಗುವುದು, ತುಟಿ ದಪ್ಪಗಾಗುವುದು, ಇವೇ ಮುಂತಾದ ಲಕ್ಷಣಗಳು ಎಲ್ಲರಿಗೂ ಗೊತ್ತು. ಮೊಡವೆ ಸಲುವಾಗಿ ಯುವತಿಯೋರ್ವಳು 'ಕ್ರೀಮ್' ಲೇಪಿಸಿದಾಗ ಅಲರ್ಜಿಯಿಂದ ಮುಖವೆಲ್ಲವೂ ಊದಿಕೊಂಡಿತು. ಪೆನ್ಸಿಲಿನ್ ಇಂಜೆಕ್ಷನ್‌ನಿಂದ ಒಬ್ಬ ಮರಣದಂಚಿಗೆ ಹೋಗಿ ಬದುಕಿದ. ಯಾವುದಕ್ಕೆ ನಾವು 'ಅಲರ್ಜಿ' (ಒಗ್ಗದಿರುವಿಕೆ) ಇದೆ ಎಂಬುದನ್ನು 'ಡೈರಿ' ಇಡುವ ಮೂಲಕ ಪತ್ತೆ ಮಾಡಬಹುದು. 'ಅಲರ್ಜಿ' ಲಕ್ಷಣಗಳು ಪ್ರಕಟವಾಗುವ ವೇಳೆ, ನಿತ್ಯದ ಆಹಾರ ಕ್ರಮ, ಬಳಸುವ ಸೋಪ್, ಉಡುವ ಬಟ್ಟೆ – ಹೀಗೆ ಎಲ್ಲದಕ್ಕೊಂದು ಡೈರಿ ಇಟ್ಟಾಗ ಅಲರ್ಜಿ ಉಂಟಾಗುವ ಕಾರಣಕ್ಕೂ ವೇಳೆಗೂ ಸಂಬಂಧ ಕಲ್ಪಿಸಬಹುದು. 'ಅಲರ್ಜಿ' ಪರೀಕ್ಷೆಗಳು ಇವೆ. ಕೆಲ ಕುಟುಂಬಗಳಲ್ಲಿ ಅಲರ್ಜಿ ಆನುವಂಶಿಕವಾಗಿ ಬರುವ ಸಾಧ್ಯತೆಯಿದೆ. ('ಆಸ್ತಮಾ') ಕುದುರೆ ಧೂಳು, ಪಾರ್ಥೇನಿಯಂ, ಇತ್ಯಾದಿಗಳು ಅಲರ್ಜಿ ತರುವ ಸರ್ವೇಸಾಮಾನ್ಯ ವಸ್ತುಗಳು.

### ೮. ಬೊಜ್ಜು/ಅತಿಕಾಯ

ನಾವು ನಿರ್ಲಕ್ಷಿಸುವ ಇನ್ನೊಂದು ಆರೋಗ್ಯ ಸಮಸ್ಯೆ ದೇಹದ ತೂಕ. ಈಗಂತೂ ಅತಿಕಾಯ ಅಥವಾ ಬೊಜ್ಜಿನ ಸಮಸ್ಯೆಗಳು ನೂರಾರು. ಇದು ಮಹಿಳೆಯರನ್ನು ಪೀಡಿಸುವ ಸಮಸ್ಯೆ. ಬೊಜ್ಜು ಅನೇಕ ಆರೋಗ್ಯ ಸಮಸ್ಯೆಗಳ ತವರೂರು. ಪ್ರತಿ ಮೂರು ತಿಂಗಳಿಗೆ ಒಮ್ಮೆ ನಿಮ್ಮ ದೇಹದ ತೂಕ ನೋಡಿಕೊಳ್ಳಿ.

$$\text{ದೇಹರಾಶಿಯ ಸೂಚಿ} = \frac{\text{ದೇಹದ ತೂಕ}}{(\text{ದೇಹದ ಎತ್ತರ})^2 \text{ ಮೀಟರ್}}$$

ದೇಹರಾಶಿಯ ಸೂಚಿ: ಇದು ದೇಹ ರಾಶಿಯ ಸೂಚ್ಯಂಕವನ್ನು ತಿಳಿಸುತ್ತದೆ. ಇದು ಅತ್ಯಂತ ಸುಲಭ ಹಾಗೂ ಸರಳವಾಗಿ ತಿಳಿಸುವ ಸೂತ್ರ. ಈ ಸೂಚ್ಯಂಕವು ನಿಮ್ಮ 'ಕುಂಡಲಿ' ಇದ್ದ ಹಾಗೆ. ಇದರ ಆಧಾರದ ಮೇಲಿಂದಲೇ ದೇಹದಲ್ಲಿಯ ಕೊಬ್ಬಿನ ಅಂಶವನ್ನು ಅಳೆಯಬಹುದು. ಸಾಮಾನ್ಯವಾಗಿ ಈ ಸೂಚ್ಯಂಕವು ೧೮.೫ರಿಂದ ೨೪.೯ ಕೆಜಿ ಪ್ರತಿ ಮೀಟರ್ ಇರಬೇಕು. ತೂಕವು ಒಮ್ಮೆಲೇ ಕಡಿಮೆಗೊಂಡರೂ ಅಪಾಯವೇ. ಅತಿಯಾಗಿ ಅಂದರೆ ಸೂಚ್ಯಂಕ ೩೦ರಿಂದ ೩೪.೯ ಮಧ್ಯಮದ್ದು. ೩೫ರಿಂದ ೩೯.೯ ಅತಿಯಾದ ಬೊಜ್ಜು. ೪೦ಕ್ಕೂ ಮೇಲ್ಪಟ್ಟದ್ದು ಅತಿಕಾಯವು. ಇದು ರಕ್ತದ ಏರೊತ್ತಡ, ಮಧುಮೇಹ, ಹೃದಯತೊಂದರೆ, ಆಯಾಸವಾಗುವಿಕೆ, ಮುಂತಾದ ಸಮಸ್ಯೆಗಳನ್ನು ತಂದೊಡ್ಡುತ್ತದೆ. ಅತಿಕಾಯದವರು ಎಚ್ಚರದಿಂದ ಇರಬೇಕು. ಬೊಜ್ಜನ್ನು ಇಳಿಸುವ ಕೆಲವು ಕ್ರಮಗಳಿವೆ. ನಿಯಮಿತ ಆಹಾರ ಹಾಗೂ ಕೊಬ್ಬನ್ನು ವರ್ಜಿಸುವುದು, ವ್ಯಾಯಾಮ, ಚಟುವಟಿಕೆ ಮುಂತಾದವುಗಳಿಂದ ದೇಹದ ತೂಕವನ್ನು ಕಡಿಮೆಗೊಳಿಸಬಹುದು. ಪ್ರಸಿದ್ಧ ಗಾಯಕ ಅಡ್ನಾನ್‌ಸಾಮಿ ತನ್ನ ೨೨೦ ಕೆ.ಜಿ. ದೇಹದ ತೂಕವನ್ನು ೧೧೦ಕ್ಕೂ ಇಳಿಸಿದ್ದಾನೆ. ೯೦ ಇಳಿಸುವ ಗುರಿ ಇಟ್ಟುಕೊಂಡಿದ್ದಾನೆ.

### ೯. ದುಶ್ಚಟಗಳು

ದುಶ್ಚಟಗಳಂತೂ ಎಂತಹವರನ್ನೂ ಅನಾರೋಗ್ಯಕ್ಕೆ ಗುರಿಯಾಗಿಸುತ್ತವೆ. ತಂಬಾಕು ಸೇವನೆ, ಧೂಮಪಾನ, ಮದ್ಯಸೇವನೆ ಯಾವುದೇ ಚಟಗಳು ನಮ್ಮ ನಿತ್ಯ ವೈಯಕ್ತಿಕ ಹಾಗೂ ಸಾಮಾಜಿಕ ಆರೋಗ್ಯಕ್ಕೆ ಕಂಟಕಪ್ರಾಯವಾದುವು. ನಾವು ಅದರ ದುಷ್ಪರಿಣಾಮಗಳನ್ನು ಅರಿತಿದ್ದರೂ ಅವುಗಳ ಗುಲಾಮರಾಗುತ್ತೇವೆ. ಚಟದಿಂದ ಮುಕ್ತಗೊಳಿಸಲು ಈಗ 'ಕ್ಲಿನಿಕ್'ಗಳು ಆರಂಭಗೊಂಡಿವೆ. ದುರ್ಬಲ ಮನಸ್ಸು, ಖಿನ್ನತೆ, ಆತಂಕ, ದುಗುಡ, ಕೌಟುಂಬಿಕ ಅಶಾಂತಿ ಹೀಗೆ ಒಂದಲ್ಲೊಂದು ಕಾರಣಗಳು ದುಶ್ಚಟಗಳಿಗೆ ಕಾರಣಗಳಾಗುತ್ತವೆ. ಇತ್ತೀಚೆಗೆ ಮದ್ಯಪಾನ ಹಾಗೂ ಸಿಗರೇಟ್ ಸೇವನೆ ಪ್ರತಿಷ್ಠೆಯ ಸಂಕೇತವಾಗಿವೆ. ಇವು ವಿಷಚಕ್ರದಲ್ಲಿ ನೂಕಿ ಮನುಷ್ಯನ ದುರವಸ್ಥೆ ಕಂಡು ಅಣಕಿಸುವಂತಹವು. ಈಗ ನಮ್ಮ ಸಾಮಾಜಿಕ ಸ್ವಾಸ್ಥ್ಯ ಅಂದಗೆಡಿಸುವ 'ಚಟ'ಗಳ ಸಂಸ್ಕೃತಿ ನಿರ್ಮಾಣವಾಗ ಹತ್ತಿದೆ. ಜೀವನಶೈಲಿ ಮನೋಒತ್ತಡಕ್ಕೆ ಕಾರಣವಾಗಿದೆ. ಹಲವಾರು ಉಪಚಾರದ ಪರ್ಯಾಯ ಮಾರ್ಗಗಳಿವೆ.

### ೧೦. ಮನೋದೈಹಿಕ

ಮುಖ್ಯವಾಗಿ, ಇತ್ತೀಚೆಗೆ ಕಾಣುವುದೆಂದರೆ ಗೀಳುತನ – 'ಮೇನಿಯಾ'. ಕೆಲವರು ರೋಗಗಳ ಬಗ್ಗೆ ತುಂಬ ನಿರ್ಲಕ್ಷಿಸಿದರೆ ಇನ್ನೂ ಕೆಲವರು ರೋಗಗಳ ಬಗ್ಗೆ ಇಲ್ಲದ ಭಯವನ್ನು ಕಲ್ಪಿಸಿಕೊಂಡು, ಅವಾಸ್ತವ ಹೆದರಿಕೆಯಿಂದ

## ಕೆಂಪು ಹಾಡು

ನಡೆವ ಹಾದಿಯಲಿ ತುಳಿವ ಹೆಜ್ಜೆಯಲಿ
ಬೆಳಕು ಮೂಡುತಿರಲಿ
ಕೆಂಪು ಪಯಣ ಬಿರುಬಿಸಿಲಿನಲ್ಲೂ
ದಣಿವನ್ನು ಕಾಣದಿರಲಿ

ಹೆಜ್ಜೆ ಹೆಜ್ಜೆ ಹತ್ತೆಜ್ಜೆ ಕೂಡಲಿ
ಧ್ವನಿ ಒಂದೆ ಇರಲಿ
ದಾರಿ ನೂರು ಎಡಬಲದಿ ಸೆಳೆದರೂ
ದಿಕ್ಕು ತಪ್ಪದಿರಲಿ



ಭೂತದರಿವಿದೆ ಚರಿತೆ ಕಟ್ಟುವ
ವರ್ತಮಾನವಿದೆ ಕೈಯಲಿ
ಕೈಯ ಬಾವುಟವು ಮುಗಿಲಿಗೇರುವ
ನಾಳೆ ನಮ್ಮದಿದೆ ನಿಜದಲಿ

ಬನ್ನಿ ಬನ್ನಿ ಓ ಬೆವರ ಬಂಧುಗಳೆ
ಕೆಂಪು ಗೀತೆ ಹಾಡಿ
ಉಕ್ಕಿ ಸಮುದ್ರ ಬುವಿಗೆ ರಾಚಲಿ
ಕಳಚಲೆಲ್ಲ ಬೇಡಿ

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ನರಳುವರು. ಹೃದಯ ಬೇನೆ ಭಯ, ಕ್ಯಾನ್ಸರ್ ರೋಗದ ಭಯ – ಹೀಗೆ ಸುಳ್ಳು ಕಲ್ಪನೆಗಳನ್ನು ಹೊಂದಿರುತ್ತಾರೆ. ಇಂಥವರು ವೈದ್ಯರೊಡನೆ ನೇರವಾಗಿ ಚರ್ಚಿಸುವುದಿಲ್ಲ ಹಾಗೂ ಡಾಕ್ಟರನ್ನು ಕಾಣಲೂ ಭಯಪಡುತ್ತಾರೆ. ಇಲ್ಲದ ರೋಗಗಳ ಕಲ್ಪನೆಯು ಇವರನ್ನು ಭಯದ ಕೂಪಕ್ಕೆ ನೂಕುತ್ತದೆ. ಇವರಿಗೆ ಆತ್ಮಸ್ಥೈರ್ಯ ಇರುವುದಿಲ್ಲ. ಪ್ರತಿನಿತ್ಯ ಸಲ್ಲದ ವಿಚಾರಗಳು ಚಿಂತೆಗೀಡುಮಾಡುತ್ತವೆ. ಅತಿಯಾಗಿ ಕೈ ತೊಳೆಯುವುದು, ಸಂಶಯ ದೃಷ್ಟಿಯಿಂದ ನೋಡುವುದು, ಅತಿಯಾದ ಜಾಗರೂಕತೆ – ಇವು ಗೀಳುತನದ ಲಕ್ಷಣಗಳು. ಇವರು ಮಕ್ಕಳನ್ನು ಅತಿಯಾಗಿ ಮುದ್ದಿಸಿ ಬಂಧನದಲ್ಲಿರಿಸುವರು. ಇದು ಮಕ್ಕಳಿಗೆ ಅಪಾಯ. ಹೀಗೆ ನಾವೆಷ್ಟು ಆರೋಗ್ಯಶಾಲಿಗಳು ಎಂಬ ಪ್ರಶ್ನೆಗೆ ನಮ್ಮ ಮನದಲ್ಲಿಯೇ ಉತ್ತರ ಹುಡುಕಾಡ ಬೇಕಾಗಿದೆ. ನಮ್ಮ ಆರೋಗ್ಯಭಾಗ್ಯವನ್ನು ನಾವೇ ಸೃಷ್ಟಿಸಿಕೊಳ್ಳಬೇಕಾದ್ದು ಅವಶ್ಯ. ಅಂಗೈಯಲ್ಲಿ ನಮ್ಮ ಆರೋಗ್ಯ ಸಮಸ್ಯೆಗಳಿಗೆ ಸುಲಭ ಸೂತ್ರ ಗಳಿರುವಾಗ ಯಾಕಿಷ್ಟು ಪರಿಶ್ರಮ, ಯಾಕಿಷ್ಟು ಚಿಂತೆ ? ನೀವೇ ಹೇಳಿ.

**ನಾವೆಷ್ಟು ಆರೋಗ್ಯಶಾಲಿಗಳು ?**

**ಸಾಧಾರಣವಾಗಿ ನಾವು ಅಂದಾಜಿಸಬಹುದಾದ ಮಾನದಂಡಗಳು (ಸ್ಥೂಲವಾಗಿ) (ಟಿಕ್ ಮಾಡಿ)**

| | ಮಾನದಂಡ | ಆರೋಗ್ಯವಂತ ೧೦ ಗುಣ | ಮಧ್ಯಮ ೫ ಗುಣ | ಕಡಿಮೆ ೨ ಗುಣ |
|---|---|---|---|---|
| 1. | ಹಿಮೊಗ್ಲೋಬಿನ್ ☐ | ಗಂ. 14.8 ಗ್ರಾಂ%<br>ಹೆಂ. 12-13 ಗ್ರಾಂ% ☐ | 10-11ಗ್ರಾಂ%<br>8-9 ಗ್ರಾಂ % ☐ | 5-6 ಗ್ರಾಂ<br>4-5 ಗ್ರಾಂ ☐ |
| 2. | ಆಗಾಗ ಆರೋಗ್ಯ ಕಿರಿಕಿರಿ<br>ಔಷಧ ಸೇವನೆ ಕ್ರಮ ☐ | ಆರೋಗ್ಯ ಸರಿ<br>ನ್ಯಾಯಯುತವಾಗಿ ಔಷಧಿ ಸೇವನೆ ☐ | ಆಗಾಗ ಕಿರಿಕಿರಿ<br>ಸ್ವಯಂ ವೈದ್ಯಕೀಯ ☐ | ನಿತ್ಯ ಆರೋಗ್ಯ ತೊಂದರೆ<br>ನಿತ್ಯ ಔಷಧ ಸೇವನೆ ☐ |
| 3. | ನಿದ್ರೆ ☐ | 7-8 ತಾಸುಗಳ ಸುಖ<br>ನಿದ್ರೆ-ತೊಂದರೆಯಿಲ್ಲ ☐ | ಅರ್ಧಮರ್ಧನಿದ್ರೆ ☐ | ನಿದ್ರೆಯಲ್ಲಿ ತೊಂದರೆ<br>ಎಚ್ಚರ ☐ |
| 4. | ಹಸಿವು ☐ | ವೇಳೆಗೆ ಸರಿಯಾಗಿ<br>ನಿಯಮಿತ ಹಸಿವು ☐ | ತಡೆದು ಬಾರದ ಹಸಿವು<br>ಒಮ್ಮೊಮ್ಮೆ ಹಸಿವು ಬಾರದು ☐ | ಹಸಿವು ಇಲ್ಲದಿರುವಿಕೆ ☐ |
| 5. | ಆಹಾರಕ್ರಮ ☐ | ಸಮತೋಲನ ಆಹಾರ ಸೇವನೆ<br>ಆಹಾರ ಕ್ರಮದಂತೆ ☐ | ಅನಿಯಮಿತ<br>ಹಸಿವಾದಾಗ ಮಾತ್ರ ☐ | ಆಹಾರ ಕ್ರಮ<br>ಅನುಸರಿಸುವುದು ಅಸಾಧ್ಯತೆ ☐ |
| 6. | ಚಟಗಳು ☐ | ಯಾವುದೂ ಇಲ್ಲ ☐ | ಆಗಾಗ ತಂಬಾಕು<br>ಅಡಕೆ ಸೇವನೆ ☐ | ಧೂಮಪಾನ / ಗುಟಕಾ<br>ಮದ್ಯ ಸೇವನೆ ☐ |
| 7. | ಮನೋಒತ್ತಡ / ಆತಂಕ ☐ | ಮನೆ/ ಕಚೇರಿ/ಸಮಾಜ<br>ಮೂರು ವಲಯಗಳು – ಒತ್ತಡ ಇಲ್ಲ ☐ | ಮನೆ/ಕಚೇರಿಯಲ್ಲಿ ☐ | ಮೂರು ವಲಯಗಳಲ್ಲಿ<br>ಮನೋಒತ್ತಡ ☐ |
| 8. | ಆರ್ಥಿಕ ಸ್ಥಿತಿ ☐ | ಸರಿದೂಗಿದೆ ☐ | ಅಷ್ಟಕ್ಕಷ್ಟೆ ☐ | ತೀವ್ರ ಆರ್ಥಿಕ ತೊಂದರೆ ☐ |
| 9. | ವ್ಯಾಯಾಮ ☐ | ವಾಯುವಿಹಾರ / ಯೋಗ<br>ನಿತ್ಯ ವ್ಯಾಯಾಮ ☐ | ಅನಿಯಮಿತ ☐ | ಇಲ್ಲ ☐ |
| 10. | ಬೊಜ್ಜು<br>ದೇಹ ರಾಶಿಯ ಸೂಚ್ಯಂಕ ☐ | ಸರಿಯಾಗಿದೆ<br>18-24 ☐ | ಅಷ್ಟಕ್ಕಷ್ಟೆ ಬೊಜ್ಜು<br>24-30 ☐ | ತೀವ್ರ ಬೊಜ್ಜು<br>30-40 ☐ |

ಪಡೆದ ಗುಣಗಳು : 80-100 = ಆರೋಗ್ಯ – ಸರಿ
60-80 = ಉತ್ತಮ (ಪರವಾಗಿಲ್ಲ)
50-60 = ಸಾಧಾರಣ
50ಕ್ಕೂ ಕಡಿಮೆ = ಅನಾರೋಗ್ಯ

ಮಧುಮೇಹ, ರಕ್ತದೊತ್ತಡ ಹಾಗೂ ಅಸ್ತಮಾ ತೊಂದರೆ ಇರುವವರಿಗೆ ಈ ಮಾನದಂಡಗಳು ಅನ್ವಯವಾಗುವುದಿಲ್ಲ.

**ಡಾ|| ವಸಂತ ಅ. ಕುಲಕರ್ಣಿ**
ನಂ. ೧೬೮೯, 'ಶ್ರೀಹರಿಕೃಪ', ೮ನೇ ಮೇನ್
ಗಾಂಧಿನಗರ, ಕೆಂಗೇರಿ ಉಪನಗರ, ಬೆಂಗಳೂರು - ೫೬೦೦೬೦

ನವಕರ್ನಾಟಕ ಇತ್ತೀಚೆಗೆ ಬಿಡುಗಡೆ ಮಾಡಿದ ಪುಸ್ತಕಗಳು ಒಂದಕ್ಕಿಂತ ಒಂದು ವಿಭಿನ್ನ, ವಿಶೇಷ, ಜೊತೆಗೆ ಒಂದಕ್ಕೊಂದು ಪೂರಕವೂ ಕೂಡ. ಹೇಗೆ ಎನ್ನುವಿರಾ ? ಒಂದು ಪುಸ್ತಕ, ಭಾಷೆಯ ಬದುಕನ್ನು ತೋರಿದರೆ, ಮತ್ತೊಂದು ಸಸ್ಯಲೋಕದ ಬೆರಗನ್ನು ತೆರೆದಿಡುತ್ತದೆ. ಬಸ್ತರ ಪ್ರದೇಶದ ಆದಿವಾಸಿ ಜನಾಂಗದ ಕಥನ ಒಂದಾದರೆ, ಜೇನು ಆಕಾಶದ ಅರಮನೆ ಎನ್ನುವ ಉಸಿರು ಹಿಡಿದು ಓದುವಂತೆ ಮಾಡುವ, ಜೊತೆಗೇ ಆದಿವಾಸಿ ಬದುಕನ್ನು ತೆರೆದಿಡುವ ಕಾದಂಬರಿ ಇನ್ನೊಂದು. ಬುದ್ಧ-ಬಸವ-ಅಂಬೇಡ್ಕರರ ತತ್ತ್ವ ಸಾರುವ ಒಂದು ಕೊಡ ಹಾಲಿನ ಸಮರ, ಅಸಮಾನತೆಯ ವಿವಿಧ ಸ್ತರಗಳನ್ನು ವರ್ಣಿಸಿದರೆ, ತತ್ತ್ವಪದಗಳೇ ಗೌಣವಾದ ಕಥೆ ಮತ್ತೊಂದು. ಧರ್ಮ ದ್ವೇಷವೇ ? ದೇವರು ಸುಳ್ಳೇ ? ಅಂತ ವಿವರಿಸುವ ಪುಸ್ತಕ ಒಂದಾದರೆ, ಭೌತವಾದೀಯ ಚಿಂತನೆಗಳನ್ನು ಇದರೊಂದಿಗೆ ಬೆಸೆದು, ಚಿಂತನೆ ಗಟ್ಟಿಗೊಳಿಸುವ ಪುಸ್ತಕ ಇನ್ನೊಂದು. ಎಲ್ಲ ಪುಸ್ತಕಗಳನ್ನೂ ಓದಿ, ಜೀರ್ಣಿಸಿಕೊಳ್ಳುವುದು ''ಓದುಗ ಧರ್ಮದ'' ''ಧರ್ಮ ಪರೀಕ್ಷೆ''ಯೇ ಹೌದು. ಪುಸ್ತಕಗಳ ಪುಟ್ಟ ಪರಿಚಯ ಇಲ್ಲಿದೆ.

# ಪುಸ್ತಕಗಳು



# ಮತ್ತು ಓದು

## Keeping Faith with the Mother Tongue

*ಲೇಖಕರು : ಸುಗತ ಶ್ರೀನಿವಾಸರಾಜು*

**ಪುಟ : ೨೮೮** **ಬೆಲೆ : ರೂ. ೨೦೦**




ಜೆರೆಮಿ ಸೀಬ್ರೂಕ್ ಅವರ ಮುನ್ನುಡಿ ಇರುವ ಈ ಪುಸ್ತಕ ಸುಗತ ಅವರ ಸ್ವಗತ. ಸುಗತ ಶ್ರೀನಿವಾಸರಾಜು ಅವರು, ಮಾತೃಭಾಷೆಗಳ ಒಟ್ಟಾರೆ ಸಂಸ್ಕೃತಿಯನ್ನು ತಿಳಿಸುತ್ತಲೇ, ಉದಾಹರಣೆಯಾಗಿ ಕನ್ನಡವನ್ನು ತೆಗೆದುಕೊಂಡು, ಇತರ ಭಾಷೆಗಳ ಜೊತೆಗೆ ತುಲನಾತ್ಮಕವಾಗಿ ಹೋಲಿಸುತ್ತಾರೆ.

ಯಾವ ಯಾವ ಸಂಸ್ಕೃತಿಗಳು ಅಳಿಯುವ ಭೀತಿಯಲ್ಲಿ ಇವೆಯೋ, ಅಂತಹ ಎಲ್ಲ ಸಂಸ್ಕೃತಿ ಭಾಷೆಗೂ, ಇದು ಸಲ್ಲುತ್ತದೆ ಎನ್ನುತ್ತಾರೆ ಸೀಬ್ರೂಕ್.

ನಾವು ತ್ರಿಭಾಷಿಗಳು. ಕಲಿಯುವ ಭಾಷೆ ಇಂಗ್ಲಿಷ್, ಪ್ರಾದೇಶಿಕ ಭಾಷೆಯ ವ್ಯವಹಾರ, ಮನೆಯಲ್ಲಿ ಮಾತೃಭಾಷೆ.

ಹೀಗೆ ಬೆಳೆದಾಗ, ಮನದಲ್ಲಿ ಉಂಟಾಗುವ ಸಹಜ ದ್ವಂದ್ವಗಳು, ಹುಡುಕಾಟ ಇದರ ವಸ್ತು. ಪ್ರತಿಭಾಷೆಯೂ, ಪ್ರತಿ ಸಂಸ್ಕೃತಿಯೂ ಸುಂದರವೇ. ಪ್ರಕೃತಿಯಲ್ಲಿ ಇಂತಹ 'ಹೂವು' ಮಾತ್ರ ಸುಂದರ ಎನ್ನಲಾಗದು. ಹೀಗಿರುವಾಗ, ಬೇರುಗಳನ್ನು ಬಲವಾಗಿ ಹಿಡಿದುಕೊಂಡೇ, ವಿಶ್ವಮಾನವತೆಯೆಂಬ ಸುವಾಸನೆ ಬೀರುವುದು ಸಾಧ್ಯವೇ ? ಎಂದು ವಿಶ್ಲೇಷಿಸುತ್ತ ಸಾಗುತ್ತದೆ, ಈ ಪುಸ್ತಕ. ಸುಗತ ಅವರ ೧೨ ವರ್ಷಗಳ ಚಿಂತನೆಗಳು ಇವು.

ಭಾಷೆಗಳು ಯಾಕೆ ಬೇಕು ? ಹೇಗೆ ಬೇಕು ? ಅವಶ್ಯಕತೆ ಏನು ? ಭಾಷೆ ಎದುರಿಸುವ ಆತಂಕಗಳು, ಇವುಗಳನ್ನು ಬಿಡಿಸಿ ಹೇಳುತ್ತಾರೆ, ಸುಗತ.

ಭಾಷೆಯು, ''ಗುರುತಿಸಿಕೊಳ್ಳುವಿಕೆ''ಯ ಸಾಧನ ಹೇಗಾಗಬಲ್ಲದು ಎಂದು ಸೊಗಸಾಗಿ ವಿವರಿಸಿದ್ದಾರೆ. ಲೇಖಕರು ಉಪಯೋಗಿಸುವ 'ಕರ್ನಾಟಕತ್ವ' ಪದ ಅರ್ಥಗರ್ಭಿತ.

ಮಾತೃಭಾಷೆ ಬೇರೆಯಾಗಿದ್ದರೂ, ಜಾಗತಿಕ ಸ್ಥಾನ ಪಡೆದ ಜ್ಞಾನವಂತನಾಗಲು ಸಾಧ್ಯವಿದೆ. ಜ್ಞಾನ, ಅಜ್ಞಾನ, ಮೇಲು, ಕೀಳು ನಿರ್ಧರಿಸುವ ಸಾಧನ ಭಾಷೆಯಲ್ಲ. ಈ ತಾಂತ್ರಿಕ ಯುಗದಲ್ಲಿ, ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುತ್ತ, ಭಾವನಾತ್ಮಕ, ಬೌದ್ಧಿಕ, ಆಂತರಂಗಿಕ ನೆಲೆಗಟ್ಟುಗಳನ್ನು ವಿಸ್ತಾರಗೊಳಿಸಿಕೊಳ್ಳುತ್ತ ಬೆಳವಣಿಗೆಯತ್ತ ಸಾಗಿದರೆ, ಭಾಷೆಗಳು, ಸಂಸ್ಕೃತಿಗಳು ಉಳಿಯುತ್ತವೆ.

ಸಾಂಸ್ಕೃತಿಕ ಚೌಕಟ್ಟಿನಲ್ಲಿ ಭಾಷಾ ಸೊಗಡು ಅರಳಬೇಕು; ತಾಂತ್ರಿಕತೆ ಮೈಗೂಡಿಸಬೇಕು: ವಿನಂತೀರಿ ಎಂದು ಕೇಳುತ್ತಾರೆ, ಸುಗತ ಶ್ರೀನಿವಾಸರಾಜು.

## ಸಸ್ಯ ಪರಿಸರ (೨ನೇ ಮುದ್ರಣ)

*ಲೇಖಕರು : ಡಾ|| ಕೃಷ್ಣಾನಂದ ಕಾಮತ್*

**ಪುಟ : ೧೦೦** **ಬೆಲೆ : ರೂ. ೬೫**




ಭಾಷೆಯ ಹಂಗಿಲ್ಲದ ಸಸ್ಯಗಳು, ನಮ್ಮೊಂದಿಗೆ ಸಂವಹನ ಮಾಡುವ ಬಗೆ ಇಲ್ಲಿದೆ. ತಾಂತ್ರಿಕ ಕ್ಷೇತ್ರಗಳಲ್ಲಿ ನಾವು ಪ್ರಗತಿ ಸಾಧಿಸುತ್ತಿದ್ದೇವೆ. ಆದರೆ ಪ್ರಕೃತಿಯೊಂದಿಗೆ ಒಂದಾಗಿ, ಮಾತಾಡುವುದನ್ನು, ಮರೆತುಹೋಗುತ್ತಿದ್ದೇವೆ.

ವೃಕ್ಷನೋಂಪಿ, ವೃಕ್ಷ ಪೂಜೆ, ವೃಕ್ಷಾಯುರ್ವೇದ ಆಚರಿಸುತ್ತ, ಪ್ರಕೃತಿಯನ್ನು ಆರಾಧಿಸುತ್ತಿದ್ದ, ರಾಜಮಹಾರಾಜರು ಎಲ್ಲಿ? ರಸ್ತೆ ಅಗಲ ಮಾಡಲು ವೃಕ್ಷ ಕಡಿಯುವ ಇಂದಿನ ನಾಗರಿಕನೆಲ್ಲಿ ?

ಸಸ್ಯ ಪರಿಸರ ನಮಗೇಕೆ ಮುಖ್ಯ ? ಸಸ್ಯವಿಕಾಸ ಹೇಗೆ ? ವರ್ಣ ವೈವಿಧ್ಯಗಳು, ಪರಾಗ ವಿತರಣೆ, ವಿಶೇಷ ಸಸ್ಯಗಳು, ವಿಸ್ಮಯಗಳು ಇವುಗಳ ಬಗ್ಗೆ ಅಪರೂಪದ ಮಾಹಿತಿ ನೀಡುವ ಪುಸ್ತಕ ಇದು. ನಿರೂಪಿಸಿರುವ ರೀತಿಯೂ ಸೊಗಸು. ಪಳೆಯುಳಿಕೆಗಳು, ಆಕಸ್ಮಿಕಗಳು ವಿಕಾಸದ ಹಾದಿ, ಮತ್ತು ಭವಿಷ್ಯದ ನೋಟವನ್ನು ಕೊಡುವ ಈ ಪುಸ್ತಕ ನಿಜಕ್ಕೂ ಸಂಗ್ರಹಯೋಗ್ಯ.

## ಬಸ್ತರ ಪ್ರವಾಸ (೨ನೇ ಮುದ್ರಣ)

*ಲೇಖಕರು : ಡಾ|| ಕೃಷ್ಣಾನಂದ ಕಾಮತ್*

**ಪುಟ : ೧೨೪** **ಬೆಲೆ : ರೂ. ೬೫**




ಕೃತಿಯ ಸೊಬಗನ್ನು ಸವಿದು ಈಗೇನಾದರೂ ಬಸ್ತರಕ್ಕೆ ಹೊರಟೀರಿ... ಜೋಕೆ. ಈಗ ಆ ಸಹಜ ಸೌಂದರ್ಯ ಮಾಯವಾಗಿದೆ ಎಂದು ಪ್ರಾರಂಭದಲ್ಲೇ ಎಚ್ಚರಿಸಿಬಿಡುತ್ತಾರೆ, ಶ್ರೀಮತಿ ಜ್ಯೋತ್ಸ್ನಾ ಕಾಮತ್. ಬಸ್ತರ್, ಮಧ್ಯಪ್ರದೇಶದ ಅತಿ ಹಿಂದುಳಿದ ಜಿಲ್ಲೆ. ಅಲ್ಲಿ ಸಂಚರಿಸಿದ ಲೇಖಕರು, ಅನೇಕ ಮಹತ್ವದ ಅಧ್ಯಯನಕ್ಕೆ ಅನುಕೂಲವಾಗುವ ಸಾಮಗ್ರಿ ನೀಡಿದ್ದಾರೆ. ಜೊತೆಗೆ ಸದಾ ಲ್ಯಾಪ್‌ಟಾಪ್ ಗುಂಗಿನಲ್ಲಿ ಇರುವ 'ಸಿಟಿ' ಜನಗಳಿಗೆ ಬದುಕು ಎಂದರೆ ಏನು, ಎಂಬ ಅರಿವು ಮೂಡಿಸುತ್ತಾರೆ.

'ಪ್ರವಾಸ' ಎಂದರೆ ಹೋಟೇಲ್ ಕೊಠಡಿಯ ಕಿಟಕಿಯಲ್ಲಿ ಕುಳಿತು ಸಮುದ್ರ ನೋಡುವುದಲ್ಲ ಎಂದು ಸೂಕ್ಷ್ಮವಾಗಿ ತಿಳಿಸುತ್ತಾರೆ. ಭೋಟೆ ಡೊಂಗರದ ಹಳಗನ್ನಡ, ತೆಲುಗು ಶಾಸನಗಳು, ಜಗದಲಪುರದ ಅರಮನೆ ಇವುಗಳ ಬಗ್ಗೆ ಓದಿದಾಗ, ಅಯ್ಯೋ ! ನಮ್ಮ ದಿವ್ಯ ನಿರ್ಲಕ್ಷ್ಯವೇ ಎನಿಸುತ್ತದೆ.

''ಹಾಲು, ಕರುವಿಗಾಗಿ ಮಾತ್ರ'' ನಮಗಲ್ಲ ಎನ್ನುವ ಹಟ್ಟಿ ಜನಾಂಗ, ಹಾಲಿಲ್ಲದ ಚಹ ಕುಡಿಯುತ್ತಾರಂತೆ. ಕ್ಯಾಮೆರಾ ಫ್ಲ್ಯಾಶ್ ಕಂಡು, ''ಗುಡುಗಿಲ್ಲದೆ, ಈ ಮಿಂಚು ಹೇಗೆ ಬರುತ್ತದೆ'' ಎಂದು ಕೇಳುತ್ತಾರಂತೆ. ಈ ಮುಗ್ಧತೆ ನಮ್ಮನ್ನು ಪರವಶರನ್ನಾಗಿಸುತ್ತದೆ. ಘೋಟುಲದ 'ಮುಕ್ತ ಪ್ರೇಮ', ನಮ್ಮ ನಾಗರಿಕರ 'ಶಿಷ್ಟ ಕಾಮಗಳ' ಬಗ್ಗೆ ತೂಗಿ ನೋಡಿದರೆ, ಮನ ಮುದುಡುತ್ತದೆ. ಕಣ್ಣಾಚಕ್ಷುವನ್ನು ಸದಾ ಜಾಗೃತಾವಸ್ಥೆಯಲ್ಲಿ ಇಟ್ಟುಕೊಂಡರೆ, ಕಲ್ಪನೆಯನ್ನು ಮೀರಿದ ಸನ್ನಿವೇಶ ಛಾಯಾಗ್ರಾಹಕನಿಗೆ ಲಭಿಸುತ್ತದೆ ಎನ್ನುವ ಲೇಖಕರು, ಛಾಯಾಗ್ರಹಣಗಳನ್ನೂ, ಪ್ರಕಟಿಸಬಹುದಿತ್ತು.

''ಉತ್ತಮವಾದ ಸಂಪ್ರದಾಯಗಳನ್ನು ಹಾಳುಗೆಡಹುವುದೇ ಭಾರತೀಯರ ವೈಶಿಷ್ಟ್ಯವೆಂದು ತೋರುತ್ತದೆ'' – ಇದು ಪುಸ್ತಕದ ಕೊನೆಯ ಸಾಲು. ಇದು ಪೂರ್ತಿ ಅರ್ಥವಾಗಬೇಕಾದರೆ ಪುಸ್ತಕವನ್ನು ಓದಲೇಬೇಕು.



## ಜೇನು ಆಕಾಶದ ಅರಮನೆಯೊ...

*ಲೇಖಕರು : ಕ್ಷೀರಸಾಗರ*

**ಪುಟ : ೧೫೨** **ಬೆಲೆ : ರೂ. ೯೦**

ಬಸ್ತರ ಪ್ರವಾಸ ಲೇಖನಗಳ ಸಂಗ್ರಹವಾದರೆ, ಇದು ಕಾದಂಬರಿ. ಶೀರ್ಷಿಕೆಯೇ ಸೊಗಸು. ಆದರೆ, ಇಲ್ಲಿರುವುದು ವಾಸ್ತವ. ಪೆಟ್ರೋಲಿನ ವಾಸನೆ, ಟ್ರಾಫಿಕ್ ಸದ್ದು, ಕಾಂಕ್ರೀಟು - ಲಿಫ್ಟ್ - ಬಹುಮಹಡಿಗಳ ನಾದ, ಮಾಡೆಲುಗಳ ವೈಭವ, ಪತ್ರಿಕೆ ಹೇಳುವ 'ಸತ್ಯ', ಇವುಗಳನ್ನೆಲ್ಲ ಮರೆತು, ಪಾತರಗಿತ್ತಿಗಳ ಬಣ್ಣದ ಲೋಕ, ನೀರಿನ ಶಬ್ದ, ಮಣ್ಣಿನ ವಾಸನೆ, ಶುದ್ಧ ಹಸಿರು, ಜೇನಿನ ನಾದ, ಆಕಾಶದ ಆ ನಾದದಲ್ಲಿ ವಿಹರಿಸಲು, ಮನಸ್ಸನ್ನು ಹದ ಮಾಡಿಕೊಂಡರೆ, ಈ ಪುಸ್ತಕದ ಮಹತ್ವ ಅರ್ಥವಾಗುತ್ತದೆ. ಒಂದೊಂದು ಅಧ್ಯಾಯ ಮುಗೀತಿದ್ದ ಹಾಗೇ, ಕಥೆ ಮತ್ತು ವಾಸ್ತವಗಳಲ್ಲಿ ನಾವು ಬಂಧಿಗಳಾಗುತ್ತೇವೆ.

ಚಿಟ್ಟೆಗಳು ಮಧು ಹೀರೋದನ್ನು ಕಣ್ಣಾರೆ ಕಾಣೋದಕ್ಕೆ ಅವುಗಳನ್ನು ಹಿಂಬಾಲಿಸುತ್ತಿದ್ದರಂತೆ ಹುಡುಗರು, ಆ ಬಾಲ್ಯ ಈಗೆಲ್ಲಿ ?

ನಾಗಯ್ಯನ ಬಳಿ ಇರುವ ಆನೆಯನ್ನು ಮಣಿಸುವ ಚರ್ಮದ ತುಂಡು, ಮಾರ ಹುಡುಕುವ ಇತ್ತೀಕಡ್ಡಿ ಇವೆಲ್ಲ ನಮ್ಮ ಇಂದಿನ ಆತಂಕಗಳನ್ನು ಮರೆಸಿ, ಕಲ್ಪನಾಲೋಕಕ್ಕೆ ಸೆಳೆದೊಯ್ಯುತ್ತವೆ.

ಮನಸ್ಸಿನಲ್ಲಿ 'ತಾರಕ' ನದಿ ಹರಿಯುತ್ತದೆ.

## ಒಂದು ಕೊಡ ಹಾಲಿನ ಸಮರ

*ಲೇಖಕರು : ಡಾ|| ಮೂಡ್ನಾಕೂಡು ಚಿನ್ನಸ್ವಾಮಿ*

**ಪುಟ : ೬೪** **ಬೆಲೆ : ರೂ. ೪೦**

ಶಂಕರ ಮ. ಪಾಟೀಲರ ಉಪೋದ್ಘಾತ, ಜಿ. ವಿ. ವೀರಭದ್ರಪ್ಪ ಅವರ ಮುನ್ನುಡಿ, ಲೇಖಕರ ಟೀಕಿಕೆ... ಇವುಗಳೊಂದಿಗೆ ಪುಟ ತೆರೆದಂತೆ, ಒಂದಷ್ಟು ಪ್ರಶ್ನೆಗಳು, ಉತ್ತರಗಳು, ಸೃಷ್ಟಿಗಳು, ಸಮಾಧಾನಗಳು ಏಳುತ್ತವೆ.

ಮೂರು ಸಾಮಾಜಿಕ ಘಟ್ಟಗಳನ್ನು ವಿವರಿಸಿದೆ ಪುಸ್ತಕ. ಬುದ್ಧ-ಬಸವ-ಅಂಬೇಡ್ಕರರ ಚಿಂತನೆಗಳನ್ನು ಆಧುನಿಕ ವಿಶ್ಲೇಷಣೆಗೆ ಒಳಪಡಿಸಿದಂತೆ "ಆಗಾಗ ಆರ್ಯ ದಾಸನಾಗುತ್ತಾನೆ. ದಾಸ ಆರ್ಯನಾಗುತ್ತಾನೆ" ಎಂಬ ಬುದ್ಧ ಹೇಳಿದ ಮಾತುಗಳು ಮತ್ತೆ ಮನದಲ್ಲಿ ರಿಂಗಣಿಸುತ್ತವೆ. ಬಸವೇಶ್ವರರ "ಇವನಾರವ, ಇವನಾರವ" ಎಂಬ ವಚನ ದಲಿತಪ್ರಜ್ಞೆಯನ್ನು ವಿಸ್ತರಿಸುತ್ತದೆ ಎನ್ನುತ್ತಾರೆ ಲೇಖಕರು.

ಬಾಬಾಸಾಹೇಬ ಅಂಬೇಡ್ಕರ್ ಅವರ ಜೀವನದ ಅನೇಕ ಘಟನೆಗಳು ನಮಗೆ ಗೊತ್ತು. ಆದರೆ ಬುದ್ಧ, ಬಸವ ತತ್ವಗಳ ಜೊತೆಗೆ ಅವರ ಸಿದ್ಧಾಂತಗಳನ್ನು ಸಮೀಕರಿಸಿರುವುದು ಇಲ್ಲಿನ ವೈಶಿಷ್ಟ್ಯ.

ಪ್ರತಿಹಂತದಲ್ಲೂ, 'ಅಸಮಾನತೆ' ಇದೆ. ಇದು ಧರ್ಮಪ್ರೇರಿತವಲ್ಲ. ಜಾತಿಯಲ್ಲ, ಇದು ಬದುಕಿನ ಭೀತಿ. ಯಾವ ಧರ್ಮದಲ್ಲಿದ್ದರೂ, ಮಾನವ 'ಅಸಮಾನತೆ' ಅನುಭವಿಸುತ್ತಾನೆ ಎನ್ನುವುದು ಚಿಂತಿಸಬೇಕಾದ, ಯೋಚಿಸಬೇಕಾದ ಮಾತುಗಳು.



## ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ

*ಲೇಖಕರು : ಪ್ರೊ|| ಡಿ. ರಘುನಾಥರಾವ್*

**ಪುಟ : ೮೮** **ಬೆಲೆ : ರೂ. ೫೦**

ರಹಮತ್ ತರೀಕೆರೆಯವರ ಮುನ್ನುಡಿ. ಹೆಸರೇ ಸೂಚಿಸುವ ಹಾಗೆ ಇದು ಅಧ್ಯಯನ. ದಾಸ ಸಾಹಿತ್ಯ, ವಚನಗಳು, ಜನಪದ ಸಂಗೀತ ಇವುಗಳಿಗೆ ಸಿಕ್ಕಷ್ಟು ಪ್ರಚಾರ, ತತ್ವಪದಗಳಿಗೆ ಸಿಗಲಿಲ್ಲ. ತತ್ವಪದಗಳು ಚಾರಿತ್ರಿಕ, ಸಾಂಸ್ಕೃತಿಕ ಹಿನ್ನೆಲೆಗಳನ್ನು ಹೊಂದಿದ್ದವು ಎಂಬುದನ್ನು ಲೇಖಕರು ವಿವರಿಸುತ್ತಾರೆ. ಕೆಲವು ಅನುಭಾವಿಗಳ ವಿಚಿತ್ರ ನಡಾವಳಿಗಳು, ವಸಾಹತುಶಾಹಿಯ ಕೇಂದ್ರೀಕರಣ ಪ್ರಕ್ರಿಯೆ, ತತ್ವಪದಕಾರರ ಪ್ರೇರಣೆ, ಎಲ್ಲವನ್ನೂ ಹಿನ್ನೆಲೆಗಳೊಂದಿಗೆ ನೀಡಿದ್ದಾರೆ. ಉತ್ತಮ ಆಕರ ಪುಸ್ತಕ.



## ದೇವರೆಂಬ ಸುಳ್ಳು; ಧರ್ಮವೆಂಬ ದ್ವೇಷ

*ಲೇಖಕರು : ಶಾಂತಾರಾಮ ಸೋಮಯಾಜಿ*

**ಪುಟ : ೧೨೦** **ಬೆಲೆ : ರೂ. ೬೫**

ದೇವರು ಧರ್ಮಗಳ ಬಗೆಗಿನ ಚರ್ಚೆಗಳು ಹೊಸದಲ್ಲ. ಆದರೆ ಒಂದೊಂದು ಚಿಂತನೆಯೂ ನಮ್ಮನ್ನು ನಡೆಸುವ ರೀತಿ ಹೊಸದೇ. ವಿಶ್ವಮಾನವತೆ, ಸಮಷ್ಟಿಯ ಆನಂದವೇ ದೇವರು, ಬಾಳು ಕೊಡುವ ನಾಡೇ ದೇವರು, ಎನ್ನುತ್ತ ವಿವಿಧ ಆಲೋಚನೆಗಳಿಗೆ ನಮ್ಮನ್ನು ಒಡ್ಡುತ್ತಾರೆ, ಲೇಖಕರು.

ದೇವರ ಕಲ್ಪನೆ, ಸೃಷ್ಟಿ, ಮನುಷ್ಯನ ಮನಸ್ಸು, ಭಯ, ನಂಬಿಕೆ ಇವೆಲ್ಲ ನಿತ್ಯಜೀವನದಲ್ಲಿ ಸುಳಿದು ಹೋಗುತ್ತವೆ. ಆದರೆ, ಅವುಗಳು ರೂಪ ಪಡೆಯುವುದು ಇಂತಹ ಪುಸ್ತಕ ಓದಿದಾಗ. ಬಿ. ಪ್ರೇಮಾನಂದ್, ಅನಂತರಾಮು, ಅವರ ಲೇಖನಗಳ ಭಾಗಗಳನ್ನು ಎತ್ತಿಕೊಡುತ್ತಾರೆ ಲೇಖಕರು.



ಅಲ್ಲಲ್ಲಿ ಉದಾಹರಣೆಯಾಗಿ ಬರುವ ಕಥೆಗಳು ನೀತಿ ಹೇಳುತ್ತವೆ. ಆಸಕ್ತಿ ಕೆರಳಿಸುತ್ತವೆ. ಪುಸ್ತಕವನ್ನು ಓದಿಸಿಕೊಂಡು ಹೋಗುವಂತೆ ಮಾಡುತ್ತವೆ.





## ಭೌತವಾದೀಯ ಚಿಂತನೆಗಳು

*ಲೇಖಕರು : ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ*

**ಪುಟ : ೧೯೨** **ಬೆಲೆ : ರೂ. ೧೧೦**



೧೫ ಅಧ್ಯಾಯಗಳಿವೆ. ಪ್ರಾಚೀನ ಭಾರತದ ಭೌತವಾದಿ ನೆಲೆಗಳನ್ನು ಕುರಿತು ಒಂದಷ್ಟು ಉಲ್ಲೇಖಗಳೊಡನೆ ಪ್ರಾರಂಭವಾಗುವ ಈ ಪುಸ್ತಕ, ಭ್ರಮೆ-ವಾಸ್ತವ, ನಂಬಿಕೆ, ಒಳಿತು-ಕೆಡುಕು, ಮತಧರ್ಮ, ಪುರಾಣ, ಭಗವಂತ, ಭಗವದ್ಗೀತೆಗಳ ಬಗ್ಗೆ ವೈಚಾರಿಕ ದೃಷ್ಟಿಕೋನ ನೀಡುತ್ತದೆ.

ಪ್ರತಿ ಹೆಜ್ಜೆಗೂ "ಆದ್ದರಿಂದ ಈ ನಿಲುವು" ಅಂತ ಪ್ರತಿ ಮಾತಿಗೂ ಪುರಾವೆ ನೀಡಲಾಗಿದೆ. ವಾದ ಮಾಡುವವರಿಗೆ ಒಳ್ಳೆ ಗ್ರಾಸ. ಇಲ್ಲಿ ನೀಡಿರುವ ಮಾಹಿತಿಗಳನ್ನು ಅಲ್ಲಗಳೆಯಲು ಬೇರೆ ಪುಸ್ತಕ ಓದಲೇಬೇಕು.



'ಪ್ರಜ್ಞೆಗೆ ಏನೋ ನಿಲುಕುತ್ತಿದೆ' ಎನ್ನುವಷ್ಟರಲ್ಲಿ ಲೇಖಕರೇ ಮತ್ತಷ್ಟು ಸಂದರ್ಭಗಳನ್ನು ಮುಂದಿಟ್ಟು ಚಿಂತಿಸಿ ಎನ್ನುತ್ತಾರೆ. ಯಾವುದು ಜೀವನದೃಷ್ಟಿ ? ಪ್ರಕೃತಿಯ ಒತ್ತಾಯಕ್ಕೆ ಮಣಿದು ಉಳಿವಿಗಾಗಿ ಯುದ್ಧ ಮಾಡುವುದೇ ? ಅಥವಾ ವರ್ಜಿಸುವುದೇ ? ಪುಸ್ತಕ ಓದುತ್ತ ಯೋಚಿಸಿ.



## ಧರ್ಮ ಪರೀಕ್ಷೆ

*ಲೇಖಕರು : ಡಾ|| ರಹಮತ್ ತರೀಕೆರೆ*

**ಪುಟ : ೨೫೬** **ಬೆಲೆ : ರೂ. ೧೪೦**

ಈ ಲೇಖನಗಳು ಮತ ಧರ್ಮಗಳ ಹೆಸರಿನಲ್ಲಿ ಭಾರತದ ರಾಜಕಾರಣ ಮತ್ತು ಸಮಾಜಗಳು ಸೃಷ್ಟಿಸಿರುವ ಹಲವು ರೂಪಗಳ ವಿಶ್ಲೇಷಣೆ ಎಂದು ಹೇಳಿಕೊಂಡಿದ್ದಾರೆ ಲೇಖಕರು. ಇದಕ್ಕಿಂತ ಒಳ್ಳೆ ಪರಿಚಯ ಬೇಕೇ ?

ಡಾ|| ರಾಜ್‌ಕುಮಾರ್ ಸತ್ತಾಗ ಗಲಭೆಗಳಲ್ಲಿ ದಾರುಣವಾಗಿ ಜೀವ ಕಳೆದುಕೊಂಡ ಅಮಾಯಕರ ಬಗ್ಗೆ, ನಮ್ಮ ನಾಯಕಾರಾಧನೆ ಬಗ್ಗೆ ಮಾತನಾಡುವ ಲೇಖಕರು, ಅನೇಕ ತಾತ್ವಿಕ, ಸಾಂಕೇತಿಕ ಪ್ರಶ್ನೆಗಳನ್ನು ಎತ್ತುತ್ತಾರೆ. ಶಿವಸಂಸ್ಕೃತಿ, ರಾಮಪುರಾಣ, ಹಂಪಿ, ಬುದ್ಧನ ಬಗ್ಗೆ ಹೇಳಿದ್ದಾರೆ. ರೈತನ ಆತ್ಮಹತ್ಯೆಯಿಂದ ಭೈರಪ್ಪನವರ 'ಆವರಣ'ದವರೆಗೂ, ಧರ್ಮ ಹೇಗೆ ವಿವಿಧ ರೂಪಗಳಲ್ಲಿ ವ್ಯಕ್ತವಾಗುತ್ತದೆ ಎನ್ನುವುದನ್ನು ತಿಳಿಸಿದ್ದಾರೆ. ಈ ಪುಸ್ತಕ ನಿಜವಾಗಿಯೂ ನಮ್ಮ ಯೋಚನಾಲಹರಿಗೆ, ಮನಸ್ಸಿನ ಹಸಿವೆಗೆ ಆಹಾರವಾಗಬಲ್ಲದು.



ಎಲ್ಲ ಪುಸ್ತಕಗಳೂ ಕೈಗೆಟುಕುವ ಬೆಲೆಯಲ್ಲಿವೆ. ಆಕರ್ಷಣೀಯ ಮುಖಪುಟಗಳು, ಉತ್ತಮ ಮುದ್ರಣಗಳ ಜೊತೆ ಜ್ಞಾನದಾಹವನ್ನು ಹೆಚ್ಚಿಸುತ್ತವೆ.



**ಬಿ. ಕೆ. ಸುಮತಿ**
೪೪, ೫ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಗಿರಿನಗರ ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂ. - ೮೫

ಡಾ|| ಎನ್. ಎಸ್. ಲೀಲಾ

# ಸೌರಮಂಡಲದ ಉಷ್ಣಮಾಪಕ

ಜಾಗತಿಕ ತಾಪ ಏರಿಕೆ ಇಂದಿನ ಮನೆಮಾತು. ಇದನ್ನು ಕುರಿತಾದ ಕಾರ್ಯ-ಚಟುವಟಿಕೆಯ ಹಿನ್ನೆಲೆ ಗುರುತಿಸಿ ೨೦೦೭ರ ಶಾಂತಿ ನೊಬೆಲ್ ಪುರಸ್ಕಾರವು ವಾಯುಗುಣ ಬದಲಾವಣೆ ಕುರಿತ ಅಧ್ಯಯನಕ್ಕಾಗಿ ರಚಿಸಿರುವ ಅಂತರ ಸರ್ಕಾರೀ ಸಂಸ್ಥೆ ಹಾಗೂ ಮಾಜಿ ಉಪರಾಷ್ಟ್ರಪತಿ ಆಲ್‌ಗೋರೆಗೆ ಲಭಿಸಿತ್ತು. ಹವಾಮಾನ ಕುರಿತ ಅಧ್ಯಯನವನ್ನು ಪವನ ವಿಜ್ಞಾನ ಎನ್ನುತ್ತೇವೆ. ಈ ವಿಜ್ಞಾನ ಶಾಖೆ ಹವಾಮಾನ ಮತ್ತು ವಾಯುಗುಣ ಎರಡನ್ನೂ ವಿವರಿಸುತ್ತದೆ. ಈ ಎರಡಕ್ಕೂ ಇರುವ ವ್ಯತ್ಯಾಸವೇನು ?

ಹವಾಮಾನ ಒಂದು ಸ್ಥಳದ ನಿರ್ದಿಷ್ಟ ಕಾಲಾವಧಿಯಲ್ಲಿ ಕಂಡುಬರುವ ವಾತಾವರಣದ ಸ್ಥಿತಿ-ಗತಿಗಳು. ರೇಡಿಯೋ, ಟಿ.ವಿ., ಪತ್ರಿಕಾ ಮಾಧ್ಯಮಗಳಲ್ಲಿ ಮುಂದಿನ ೨೪ ಗಂಟೆಗಳಲ್ಲಿ ನಡೆಯುವ ವಾತಾವರಣದ ವಿದ್ಯಮಾನಗಳನ್ನು ಬಿಂಬಿಸುವ ಪ್ರಕ್ರಿಯೆ.

ಶಿವರಾತ್ರಿಗೆ ''ಶಿವಶಿವಾ'' ಎಂದು ಚಳಿ ಓಡಿಹೋಗಿ ಬೇಸಿಗೆ ಆಗಮಿಸುತ್ತದೆ ಎನ್ನುವ ಉದ್ಗಾರ ನೀವು ಕೇಳಿರಬಹುದು. ಆದರೆ ಈ ಹೇಳಿಕೆ ಇಂದು ಎಷ್ಟು ಪ್ರಸ್ತುತ? ಅಂತೆಯೇ ಕಾಲ ಕೆಟ್ಟೋಯ್ತು. ಅಕಾಲದಲ್ಲಿ ಏನೆಲ್ಲಾ ಜರುಗುತ್ತಿದೆ ಎಂಬ ಅಳಲೂ ಜನಸಾಮಾನ್ಯರದ್ದು. ಅಂದರೆ, ವಾತಾವರಣದಲ್ಲಾಗುತ್ತಿರುವ ಬದಲಾವಣೆಗಳಿಗೆ ಮಾನವನ ಕೃತ್ಯಗಳು ಮೂಲ ಕಾರಣ ಎಂಬ ವೈಜ್ಞಾನಿಕ ಸತ್ಯ ವಿಜ್ಞಾನಿಗಳನ್ನು ಚಿಂತೆಗೆ ಗುರಿಮಾಡಿದೆ. ಒಟ್ಟಿನಲ್ಲಿ ಒಂದು ನಿರ್ದಿಷ್ಟ ಕಾಲಕ್ಕೆ ಬದಲಾಗುವ ವಾಯುಮಂಡಲದ ಏರಿಳಿತಗಳೇ ವಾಯುಗುಣ.

ಹವಾಮಾನ ಮತ್ತು ವಾಯುಗುಣಗಳನ್ನು ನಿಯಂತ್ರಿಸುವ ಶಕ್ತಿಯಾದರೂ ಯಾವುದು ? ಆ ಶಕ್ತಿಯೇ ಸೌರಮಂಡಲದ ಕೇಂದ್ರಬಿಂದುವಾದ ಸೂರ್ಯ. ಸೂರ್ಯನೇ ವಿಶ್ವದ ಕೇಂದ್ರಬಿಂದು ಎಂದು ಪ್ರತಿಪಾದಿಸಿದ್ದು ನಿಕೊಲಾಸ್ ಕೋಪರ್ನಿಕಸ್ (೧೪೭೩-೧೫೪೩). ಈ ವಾದವನ್ನು ಸಮರ್ಥಿಸಿದ ಗೆಲಿಲೀ ಗೆಲಿಲಿಯೋ (೧೫೬೪-೧೬೪೨) ಪಟ್ಟ ಪಾಡು ಇತಿಹಾಸ. ನಂತರ ಜರ್ಮನಿಯ ಜೋಹಾನ್ ಕೆಪ್ಲರ್




**ಸೌರಮಂಡಲದ ಉಷ್ಣಮಾಪಕ**

ಸೂರ್ಯನಿಂದ ಗ್ರಹಗಳಿಗೆ ಇರುವ ದೂರ, ಅವುಗಳ ಪರಿಭ್ರಮಣದ ವೇಗ, ನೀರಿನ ಅಭಾವ, ಭೌತಿಕ ಲಕ್ಷಣಗಳಾದ ಪರ್ವತ/ಗುಡ್ಡಗಳು, ಗ್ರಹಗಳಿಂದ ಸುತ್ತುವರಿದಿರುವ ರಕ್ಷಾಕವಚಗಳು ಮುಂತಾದ ವೈವಿಧ್ಯತೆಗನುಗುಣವಾಗಿ ವಿವಿಧ ಗ್ರಹಗಳಲ್ಲಿ ಹವಾಮಾನ ಬದಲಾಗುತ್ತದೆ.

(೧೫೭೧-೧೬೩೦) ಗ್ರಹಗಳ ಪರಿಭ್ರಮಣಗಳ ಬಗೆಗೆ ಬೆಳಕು ಚೆಲ್ಲಿದ. ಈ ವಿವರಣೆಗಳು ನ್ಯೂಟನ್‌ನ ತತ್ವಕ್ಕೆ ಪುಷ್ಟಿ ನೀಡಿರುವುದನ್ನು ಕಾಣಬಹುದು.

ಹವಾಮಾನವು ಗ್ರಹಗಳಲ್ಲಿ ಮತ್ತು ಗ್ರಹಗಳ ನಡುವೆ ಹಾಗೂ ಗ್ರಹಗಳ ಕಾಲ ಮತ್ತು ಸ್ಥಿತಿಗಳಿಗನುಗುಣವಾಗಿ ಬದಲಾಗುವುದನ್ನು ಕಾಣಬಹುದು. ಒಂದು ಗ್ರಹವು ಕೇಂದ್ರಬಿಂದುವಾದ ಸೂರ್ಯನಿಗೆ ಎಷ್ಟು ನಿಕಟ ಅಥವಾ ದೂರದಲ್ಲಿದೆ, ಅವುಗಳ ಪರಿಭ್ರಮಣೆಯ ವೇಗವೆಷ್ಟು? ನೀರು ಅಥವಾ ನೀರಾವಿ ಆ ಗ್ರಹದಲ್ಲಿದೆಯೇ ? ಅಲ್ಲಿನ ಭೌತಿಕ ಲಕ್ಷಣಗಳು ಎಂದರೆ ಪರ್ವತ, ಬೆಟ್ಟ, ಗುಡ್ಡಗಳಿವೆಯೇ ? ಗ್ರಹಕ್ಕೆ ಸುತ್ತುವರೆದಂತೆ ರಕ್ಷಣಾ ಕವಚಗಳಿವೆಯೇ, ಉಪಗ್ರಹಗಳೊಂದಿಗೆ ಯಾವ ಮತ್ತು ಎಂತಹ ಸಂಬಂಧಗಳಿವೆ - ಇವೇ ಮುಂತಾದ ಅನೇಕ ವ್ಯವಸ್ಥೆಗಳಿಗನುಗುಣವಾಗಿ ಹವಾಗುಣ ಬದಲಾಗುವುದನ್ನು ಕಾಣಬಹುದು. ಪ್ರಸ್ತುತ, ಗ್ರಹಗಳಲ್ಲಿ ಉಷ್ಣತೆಯಲ್ಲಿನ ಬದಲಾವಣೆಗಳನ್ನು ಮಾತ್ರ ಪರಿಗಣಿಸೋಣ.

ಸೂರ್ಯ ಒಂದು ಬೆಂಕಿಯ ಚೆಂಡು. ಇಲ್ಲಿ ನಿಬಿಡವಾದ ಅನಿಲಗಳ ಆಕರವಿದೆ. ಇದು ಶೇಕಡ ೭೦ ಭಾಗ ಹೈಡ್ರೋಜನ್ ($H_2$) ಮತ್ತು ಶೇಕಡ ೩೦ ಭಾಗ ಹೀಲಿಯಂ ಅನಿಲಗಳಿಂದಾಗಿದೆ. ಅತ್ಯಂತ ಕಡಿಮೆ ಪ್ರಮಾಣದ ಉಳಿದ ಧಾತುಗಳಿರಬಹುದು. ಅನಿಲಗಳ ನಿಬಿಡತೆಯಿಂದ ಅವುಗಳ ಪರಮಾಣುಗಳಲ್ಲಿನ ನ್ಯೂಕ್ಲಿಯಸ್‌ಗಳು ಪರಸ್ಪರ ಒತ್ತಡದ ಕ್ರಿಯೆಗೆ ಒಳಗಾಗುತ್ತವೆ. ಇಲ್ಲಿನ ಉಷ್ಣಾಂಶದ ತೀವ್ರತೆಯಲ್ಲಿ ಥಕ ಥೈ ಎಂದು ಕುಣಿಯುತ್ತಿರುವ ಪರಮಾಣುಗಳು ಒಂದಕ್ಕೊಂದು ಪರಸ್ಪರ ಡಿಕ್ಕಿಹೊಡೆದು ಬೈಜಿಕ ಸಂಲಯನ (ನ್ಯೂಕ್ಲಿಯರ್ ಫ್ಯೂಷನ್)ಕ್ಕೊಳಗಾಗುತ್ತವೆ. ಅಂದರೆ, ಸೂರ್ಯ ಬೈಜಿಕ ಕ್ರಿಯಾಕಾರಿಯಂತೆ ಕಾರ್ಯ ನಿರ್ವಹಿಸಿ ಸತತವಾಗಿ ಶಾಖ ಮತ್ತು ಬೆಳಕಿನ ಶಕ್ತಿಯನ್ನು ಹೊರಸೂಸುತ್ತದೆ. ಇಲ್ಲಿ ಆಲ್ಬರ್ಟ್ ಐನ್‌ಸ್ಟೀನ್‌ನ ಸೂತ್ರ $E = mc^2$ ಅನ್ವಯ ಶಕ್ತಿಯ ಬಿಡುಗಡೆಯಾಗುವುದರಿಂದ ಅತ್ಯಂತ ಹೆಚ್ಚು ಉಷ್ಣಾಂಶ ಬಿಡುಗಡೆಯಾಗುತ್ತದೆ. ಅಂದರೆ ಸೂರ್ಯನ ಹೊರ ಅಂಚಿನಲ್ಲಿ ಅದು ಕೇವಲ ೬೦೦೦°Cಗಳಷ್ಟಿದ್ದರೆ, ಸೂರ್ಯಗರ್ಭದಲ್ಲಿ ಅದು ೨೦ ಲಕ್ಷ ಸೆಂಟಿಗ್ರೇಡ್‌ಗಳಷ್ಟಿರಬಹುದು. ಸೂರ್ಯ ಭೂಮಿಗೆ ಸುಮಾರು ೯೩೦ ಲಕ್ಷ ಮೈಲಿಗಳಷ್ಟು ದೂರವಿರುವುದರಿಂದ ಜೀವಿಗಳು ಜೀವಿಸಲು ಯೋಗ್ಯವಾದ ಉಷ್ಣಾಂಶ ಮಾತ್ರ ಭೂಮಿಯನ್ನು ತಲುಪುತ್ತಿದೆ.

ಸೂರ್ಯನಿಂದ ಬರುವ ಶಾಖ ಮತ್ತು ಬೆಳಕಿನ ಶಕ್ತಿ ಬೇರೆ ಬೇರೆ ಗ್ರಹಗಳಿಗೆ ತಲುಪುವ ಹಾಗೂ ಅಲ್ಲಿ ಬದಲಾಗುವ ಉಷ್ಣಾಂಶಗಳನ್ನು ಚಿತ್ರದಲ್ಲಿ ಗಮನಿಸಿ.

ಸೌರಮಂಡಲದ ಗ್ರಹಗಳಲ್ಲಿ ಬುಧ, ಶುಕ್ರ, ಮಂಗಳ, ಭೂಮಿ ಮತ್ತು ಪ್ಲೂಟೋಗಳು ಭೌಮಗ್ರಹಗಳು. ಅಂದರೆ ಅವು ಬಂಡೆಗಳಿಂದಾಗಿವೆ. ಉಳಿದವು ಪ್ರವಾಹಿ ಗ್ರಹಗಳು. ಅಂದರೆ ಅನಿಲಗಳ ಮುದ್ದೆ.




*ಸೂರ್ಯನ ಶಾಖ ಮತ್ತು ಬೆಳಕಿನ ಪ್ರಭಾವ ಗ್ರಹಗಳ ಮತ್ತು ಗ್ರಹಗಳ ನಡುವೆ ಹೇಗೇ ಇರಲಿ ಇಂದಿನ ವಿವರಣೆಯಂತೆ ಜೀವಿಗಳು ಭೂಗ್ರಹಕ್ಕಷ್ಟೇ ಸೀಮಿತ.*



*ಸೂರ್ಯ ಕೇವಲ ತನ್ನೊಂದೆರಡು ಕಿರಣಗಳಿಂದ ಇಂತಹ ವೈವಿಧ್ಯ ಮೂಡಿಸಬಹುದಾದಲ್ಲಿ ಆತನ ಚೆಲ್ಲಾಟ ಇಡೀ ಮಂಡಲದಲ್ಲೆಂತಿರಬಲ್ಲದು !!*

ಬುಧ ಗ್ರಹದಲ್ಲಿ ಉಷ್ಣತೆಯ ವೈಪರೀತ್ಯ ಅತಿ ಹೆಚ್ಚಾಗಿರುವುದು. ಇಲ್ಲಿ ರಾತ್ರಿಯ ವೇಳೆ -೧೭೦°C ಇದ್ದರೆ, ಹಗಲು ೪೨೫°Cಗೆ ಏರುತ್ತದೆ.

ಶುಕ್ರಗ್ರಹದಲ್ಲಿ ನಿರಂತರವಾಗಿ ೪೮೦°C ಉಷ್ಣತೆ ಇರುತ್ತದೆ. ಇದಕ್ಕೆ ಮುಖ್ಯಕಾರಣ ಇಲ್ಲಿನ ಹಸಿರು ಮನೆ ಅನಿಲಗಳ ಪ್ರಭಾವ.

ಮಂಗಳ ಗ್ರಹದಲ್ಲಿ ಉಷ್ಣಾಂಶ -೧೨೦°Cನಿಂದ ೫೨°Cವರೆಗೆ ಇರಬಹುದು. ಹಾಗಾಗಿ ಇದು ಸರಿಸುಮಾರು ಭೂಮಿಗೆ ಹತ್ತಿರದ ಅಂಕಿ-ಸಂಖ್ಯೆ. ಇಲ್ಲಿ ಜೀವೋತ್ಪತ್ತಿಯಾಗಿರುವುದೆಂಬ ಊಹೆಗಳಿದ್ದರೂ ಸಂಪೂರ್ಣ ಮಾಹಿತಿಯ ಕೊರತೆ ಇರುವುದರಿಂದ ನಿಖರವಾಗಿ ಜೀವಿಗಳಿರುವ ಬಗ್ಗೆ ಇನ್ನೂ ತಿಳಿದುಬಂದಿಲ್ಲ.

ಗುರು ಗ್ರಹದಲ್ಲಿ -೧೭೦°Cಗಳಿರಬಹುದೆಂಬ ಅಂದಾಜು. ಕೆಲವೆಡೆ ಇದು -೧೨೦°Cಗಳಿಗೂ ಏರಬಹುದು.

ಶನಿ ಗ್ರಹದಲ್ಲಿ -೧೯೦°Cಗಳಿದ್ದು ಅದರ ಕೇಂದ್ರಭಾಗದಲ್ಲಿ ೧೦೦೦°Cಗಳ ಉಷ್ಣಾಂಶ ಹೊಂದಿರುವುದು. ಹಾಗೆಯೇ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋಗಳಲ್ಲಿ ಕ್ರಮವಾಗಿ -೧೬೦°C, -೨೧೮°C ಮತ್ತು -೨೨೫°Cಗಳಿದ್ದರೆ ಅವುಗಳ ತಿರುಳಿನಲ್ಲಿ ೧೦೦೦°Cನ ಏರಿಕೆ ಇರುವುದು.

ಸೌರಮಂಡಲದ ಎಲ್ಲಾ ಗ್ರಹಗಳಿಗೆ ಹೋಲಿಸಿದರೆ ಭೂಮಿಯೊಂದೇ ಜೀವಿವಲಯವಾಗಿ ಜೀವಿಗಳ ಉತ್ಪತ್ತಿ ಮತ್ತು ವಿಕಾಸಕ್ಕೆ ಹಾದಿಮಾಡಿಕೊಟ್ಟಿದೆ. ಸೂರ್ಯನಿಂದ ಹೊರಬೀಳುವ ನೇರಳಾತೀತ ಕಿರಣಗಳು ಭೂಮಿಯ ಮೇಲ್ಮೈಗೆ ತಲುಪದಂತೆ ರಕ್ಷಣಾ ಕವಚಗಳನ್ನೂ ಹೊಂದಿದೆ. ಭೂಮಿಯ ೧೧ರಿಂದ ೫೦ ಕಿಲೋಮೀಟರ್ ಎತ್ತರಕ್ಕಿರುವ ಸ್ಟ್ರಾಟೋಸ್ಫಿಯರ್ ಸ್ತರದಲ್ಲಿ ಓಜ಼ೋನ್ ಪದರವಿದ್ದು ಭೂಮಿಗೆ ರಕ್ಷಣಾ ಪದರವಾಗಿದೆ.

ಭೂಮಿಯ ವಾಯುಗೋಳದಲ್ಲಿರುವ ಅನಿಲಗಳ ಪ್ರಮಾಣವು ಜೀವಿಗಳ ಚಟುವಟಿಕೆಗಳಿಗೆ ಸಹಾಯಕವಾಗುವಂತೆ ಹರಿದು ಹಂಚಿದೆ. ಅದಕ್ಕನುಗುಣವಾಗಿ ವೈವಿಧ್ಯಮಯ ಜೀವಿವಲಯಗಳನ್ನು ಸೃಷ್ಟಿಸಿ ವಿಧಾ-ವಿಚಿತ್ರ ಜೀವನಶೈಲಿಗೆ ಅನುವು ಮಾಡಿಕೊಟ್ಟಿದೆ.

ವಿಶ್ವದಲ್ಲೇ ಅನನ್ಯವೆನಿಸಿರುವ ಭೂಗ್ರಹದಲ್ಲಿ ಮಾನವನ ಉದಯ ಮತ್ತು ಸಾರ್ವಭೌಮತ್ವವೇ ಗ್ರಹದ ಅಸ್ತಿತ್ವಕ್ಕೆ ಪೆಟ್ಟಾಗಿರುವುದರಿಂದ ಅದನ್ನು ಉಳಿಸುವ ಕೈಂಕರ್ಯ ಪ್ರತಿಯೊಬ್ಬರ ಆದ್ಯ ಕರ್ತವ್ಯವಾಗಿದೆ. ಜಾಗತಿಕ ಮಟ್ಟದಲ್ಲಿ ಆಚರಿಸಲಾಗುತ್ತಿರುವ ಭೂಗ್ರಹ ತ್ರಿವಾರ್ಷಿಕ (ಜನವರಿ ೨೦೦೭ರಿಂದ ಡಿಸೆಂಬರ್ ೨೦೦೯ರವರೆಗೆ)ದಲ್ಲಿ ನಾವೂ ಬದುಕಿ ಭೂಮಿಯನ್ನೂ ಬದುಕಲು ಬಿಡುವಂತಹ ಸಂಕಲ್ಪ ಮಾಡೋಣವೆ ?

**ಡಾ॥ ಎಸ್. ಎಸ್. ಲೀಲಾ**
೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್ಸ್, ೧೪-ಎ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಪರ್ಯಾಯ ವ್ಯವಸ್ಥೆಗೆ ಹುಡುಕಾಟ ಅನಿವಾರ್ಯ




**ಜಾ**ಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆ ಇವುಗಳ ದುಷ್ಪರಿಣಾಮಗಳು ಈಗ ಸ್ಪಷ್ಟವಾಗಿ ಪ್ರಕಟಗೊಂಡಿವೆ. ಪ್ರಪಂಚದ ಎಲ್ಲೆಡೆಗಳಲ್ಲೂ ಕಾಣಿಸಿಕೊಂಡಿರುವ ಏರುತ್ತಿರುವ ಹಣದುಬ್ಬರದ ಪ್ರಮಾಣ, ಅಗತ್ಯ ವಸ್ತುಗಳ ಬೆಲೆ ಏರಿಕೆ, ಪೆಟ್ರೋಲಿಯಮ್ ಉತ್ಪನ್ನಗಳ ದರ ಹೆಚ್ಚಳ ಇವೆಲ್ಲ ಶ್ರೀಮಂತ ರಾಷ್ಟ್ರಗಳು ಬಲವಂತವಾಗಿ ಹೇರಿರುವ ಆರ್ಥಿಕ ನೀತಿಗಳ ಪರಿಣಾಮಗಳು ಎನ್ನುವುದರಲ್ಲಿ ಸಂದೇಹವಿಲ್ಲ. ಇದರ ಪರಿಣಾಮವಾಗಿ ಪರಿತಪಿಸುತ್ತಿರುವವರು ಜನಸಾಮಾನ್ಯರು. ಇದಕ್ಕೆ ಪರಿಹಾರವೇನು ಎನ್ನುವುದೇ ಪ್ರಶ್ನೆ. ಶ್ರೀಮಂತ ರಾಷ್ಟ್ರಗಳ ಉಪಟಳಕ್ಕೆ ಎದುರಾಗಿ ಪರ್ಯಾಯ ಹುಡುಕಾಟ ಪ್ರಾರಂಭವಾಗಿದೆ. ಏಕಶಕ್ತಿಕೇಂದ್ರಿತ ಇಂದಿನ ಜಾಗತಿಕ ವ್ಯವಸ್ಥೆಯಲ್ಲಿ ಅಮೆರಿಕದ ಅಧಿನಾಯಕತ್ವದ ಹಂಚಿಕೆಗಳನ್ನು ಹಿಮ್ಮೆಟ್ಟಿಸಲು, ಹೆಚ್ಚು ಪ್ರಜಾಸತ್ತಾತ್ಮಕವಾದ, ಸಾಮಾಜಿಕ ನ್ಯಾಯದ ಹಾಗೂ ಸುಸ್ಥಿರವಾದ ಜಗತ್ತಿನ ಸ್ಥಾಪನೆಗೆ ಹುಡುಕಾಟ ಅನಿವಾರ್ಯವಾಗಿದೆ. ಈ ಪ್ರಯತ್ನದಲ್ಲಿ ಪ್ರಾದೇಶಿಕ ಗುಂಪುಗಳ ಪಾತ್ರ ಮಹತ್ವಪೂರ್ಣವಾಗಿರುತ್ತದೆ. ಈ ಗುಂಪಿನ ದೇಶಗಳ ನಡುವೆ ಸಮಾನತೆಯ ಆಧಾರದ ಮೇಲೆ ಪರಸ್ಪರ ಸಹಕಾರ ಹಾಗೂ ಸಂಯುಕ್ತ ಕಾರ್ಯಾಚರಣೆ ಅನುಕೂಲಕರ. ಅಷ್ಟೇ ಅಲ್ಲ, ಶ್ರೀಮಂತ ದೇಶಗಳ ಗುಂಪಿನೊಂದಿಗೆ, ವಿಶ್ವ ಬ್ಯಾಂಕ್, ಅಂತಾರಾಷ್ಟ್ರೀಯ ವಿತ್ತ ಸಂಸ್ಥೆ, ವಿಶ್ವ ವಾಣಿಜ್ಯ ಸಂಸ್ಥೆಗಳೊಂದಿಗೆ ವ್ಯವಹಾರವನ್ನು ಕುದುರಿಸಲು ಮಾತುಕತೆಗಳಲ್ಲೂ ಉಪಯುಕ್ತ. ಮುಂಬರುವ ವರ್ಷಗಳಲ್ಲಿ ಈ ಪ್ರಾದೇಶಿಕ ಗುಂಪುಗಳ ಬೆಳವಣಿಗೆಯು ಗಮನಾರ್ಹ ಪಾತ್ರ ವಹಿಸುವ ಸೂಚನೆಯಿದೆ.

ಭಾರತ, ರಷ್ಯಾ, ಚೀಣಾಗಳು ಒಟ್ಟುಗೂಡಿದರೆ ಅಮೆರಿಕಾ ಮತ್ತು ಪಾಶ್ಚಾತ್ಯ ದೇಶಗಳಿಗೆ ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಸರಿಸಮನಾಗಿ ನಿಲ್ಲಬಲ್ಲವು ಎನ್ನುವ ಪರಿಕಲ್ಪನೆ ಹಿಂದಿನಿಂದ ಬಂದದ್ದು. ಹತ್ತು ವರ್ಷಗಳ ಹಿಂದೆ ರಷ್ಯಾದ ಪ್ರಧಾನಿ ಯವ್‌ಗೆನಿ ಪ್ರಿಮಕೋವ್ ಇದರ ಪ್ರಸ್ತಾಪ ಮಾಡಿದ್ದರು. ಅಧ್ಯಕ್ಷ ಪುಟಿನ್ ಅದನ್ನು ಸಾಕಾರಗೊಳಿಸಲು ಮೊದಲ ಹೆಜ್ಜೆ ಇರಿಸಿ ೨೦೦೨ರಲ್ಲಿ ವಿಶ್ವಸಂಸ್ಥೆಯ ಮಹಾಸಭೆಯ ಸಂದರ್ಭದಲ್ಲಿ ಈ ಮೂರು ರಾಷ್ಟ್ರಗಳ ವಿದೇಶಾಂಗ ಸಚಿವರ ಸಭೆಗೆ ಚಾಲನೆ ನೀಡಿದರು. ಮತ್ತೆ ೨೦೦೫ರಲ್ಲಿ ಔಪಚಾರಿಕವಾಗಿ ವಿದೇಶಾಂಗ ಸಚಿವರ ಸಭೆ ಜರುಗಿತು. ವಿಶ್ವದ ಶ್ರೀಮಂತರಾಷ್ಟ್ರಗಳ ೮ರ ಗುಂಪಿನ ದೇಶಗಳ ಶೃಂಗಸಭೆ ರಷ್ಯಾದ ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ ಜರುಗಿದ ಸಂದರ್ಭದಲ್ಲಿ ಭಾರತ, ರಷ್ಯಾ, ಚೀಣಾಗಳ ನಾಯಕರ ಶೃಂಗಸಭೆ ಜರುಗಿತು. ಈ ಬಗೆಯ ಸಮಾಲೋಚನೆಗಳು ನಡೆದಿದ್ದರೂ ಸಾಂಸ್ಥಿಕವಾಗಿ ರೂಪುಗೊಂಡು ಕಾರ್ಯನಿರ್ವಹಣೆಯಾಗಿಲ್ಲ. ಹಾಗಿದ್ದರೂ ಇದರ ಮುಂದುವರಿಕೆಯಾಗಿ ಈ ವರ್ಷದ ಮೇ ೧೬ರಂದು ರಷ್ಯಾದ ಯಕಾತೆರಿನ್‌ಬರ್ಗ್ ಎಂಬಲ್ಲಿ ಜರುಗಿದ ಭಾರತ, ರಷ್ಯಾ, ಚೀಣಾ, ಬ್ರೆಜಿಲ್ ದೇಶಗಳ ವಿದೇಶಾಂಗ ಸಚಿವರ ಸಮಾವೇಶ ಹಾಗೂ ಅದು ಅನುಮೋದಿಸಿರುವ ಜಂಟಿ ಪ್ರಕಟಣೆ ಗಮನ ಸೆಳೆಯುವಂಥದ್ದಾಗಿದೆ. ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಇದೊಂದು ಮಹತ್ವಪೂರ್ಣ ಬೆಳವಣಿಗೆ ಎನ್ನಬಹುದು. ಈ ನಾಲ್ಕು ದೇಶಗಳ ವಿದೇಶಾಂಗ ಸಚಿವರುಗಳು ವಿಶ್ವಸಂಸ್ಥೆಯ ಮಹಾಸಭೆಯ ಸಂದರ್ಭದಲ್ಲಿ ಎರಡು ಬಾರಿ ಕಲೆತು ಸಮಾಲೋಚನೆ ನಡೆಸಿದ್ದರೂ ಯಕಾತೆರಿನ್‌ಬರ್ಗ್ ಸಭೆ ವಿಶೇಷವಾದ್ದಾಗಿದೆ.

ಶ್ರೀಮಂತ ರಾಷ್ಟ್ರಗಳು ತರುವ ಒತ್ತಡಗಳೇನೇ ಇದ್ದರೂ ಈ ನಾಲ್ಕು ರಾಷ್ಟ್ರಗಳು ಪರಸ್ಪರ ಸಹಕಾರದಿಂದ ಒಂದುಗೂಡಿ ವ್ಯವಹರಿಸಿದರೆ ೮ರ ಗುಂಪಿನ ರಾಷ್ಟ್ರಗಳ ಜೊತೆ ಸಮರ್ಪಕವಾಗಿ ವ್ಯವಹಾರ ನಡೆಸುವ ಸಾಧ್ಯತೆ ಇದೆ. ಪ್ರಪಂಚದ ಜನಸಂಖ್ಯೆಯಲ್ಲಿ ಶೇ.೪೦ರಷ್ಟನ್ನು ಪ್ರತಿನಿಧಿಸುವ ಈ ರಾಷ್ಟ್ರಗಳ ನಿವ್ವಳ ಉತ್ಪನ್ನ ೮ರ ಗುಂಪಿನ ದೇಶಗಳ ಅರ್ಧದಷ್ಟು, ಮುಂದಿನ ಹತ್ತು ಹನ್ನೆರಡು ವರ್ಷಗಳಲ್ಲಿ ಈ ಚತುರಾಷ್ಟ್ರಗಳು ಅವನ್ನು ಹಿಂದಕ್ಕೆ ಹಾಕುವ ನಿರೀಕ್ಷೆ ಇದೆ. ಹಾಗಾಗಿ, ಜಾಗತಿಕ ಆರ್ಥಿಕ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸುವ ಸಾಧ್ಯತೆ ಇದೆ. ಯೆಕಾತೆರಿನಬರ್ಗ್ ಸಭೆಯ ನಂತರ ನೀಡಲಾಗಿರುವ ಜಂಟಿ ಪ್ರಕಟಣೆಯಲ್ಲಿ ಅಂತಾರಾಷ್ಟ್ರೀಯ ವ್ಯವಸ್ಥೆಯನ್ನು ಹೆಚ್ಚು ಪ್ರಜಾಪ್ರಭುತ್ವಗೊಳಿಸುವ ಗುರಿಯನ್ನು ಒತ್ತಿ ಹೇಳಲಾಗಿದೆ. ಎಲ್ಲ ದೇಶಗಳ ಹಿತಾಸಕ್ತಿಗಳನ್ನು ಪರಿಗಣನೆಗೆ ತೆಗೆದುಕೊಂಡು ವ್ಯವಹರಿಸಿದಾಗ ಮಾತ್ರವೇ ಬಡತನ, ಹಸಿವು ಮತ್ತು ರೋಗ ನಿವಾರಣೆಯಂಥ ಜಾಗತಿಕ ಸಮಸ್ಯೆಗಳನ್ನು ಎದುರಿಸಿ ಅರ್ಥ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲು ಸಾಧ್ಯ ಎಂದು ಅದು ಹೇಳಿದೆ. ಸಮಾವೇಶದಲ್ಲಿ ಭಾಗವಹಿಸಿದ್ದ ಭಾರತದ ವಿದೇಶಾಂಗ ಸಚಿವ ಪ್ರಣವ್ ಮುಖರ್ಜಿ ಇದು ಪರಸ್ಪರ ಪೂರಕ ಆರ್ಥಿಕಗಳ ಒಂದು ಅಪೂರ್ವ ಸಂಯೋಗ, ಜಾಗತಿಕ, ರಾಜಕೀಯ ಹಾಗೂ ಆರ್ಥಿಕ ಸಂಘಟನೆಗಳಲ್ಲಿ ಸುಧಾರಣೆಗಳನ್ನು ತರಲು ಸಮರ್ಥವಾಗಿರುವ ಒಕ್ಕೂಟ ಎಂದು ಬಣ್ಣಿಸಿದ್ದಾರೆ. ಬ್ರೆಜಿಲ್‌ನ ವಿದೇಶಾಂಗ ಸಚಿವರ ಪ್ರಕಾರ ಈಗಿನ ಜಾಗತಿಕ ವ್ಯವಸ್ಥೆಯಲ್ಲಿ ಚತುರಾಷ್ಟ್ರಗಳು ಬದಲಾವಣೆಗಳನ್ನು ತರಬಲ್ಲವು. ಮುಂದಿನ ದಿನಗಳಲ್ಲಿ ಈ ದಿಶೆಯಲ್ಲಿ ಕಾರ್ಯ ವೆಸಗಿದಲ್ಲಿ ಅಂತಾರಾಷ್ಟ್ರೀಯ ರಾಜಕೀಯ ಮತ್ತು ವಿತ್ತೀಯ ಸಂಸ್ಥೆಗಳಲ್ಲಿ ಬದಲಾವಣೆಗಳನ್ನು ನಿರೀಕ್ಷಿಸಬಹುದಾಗಿದೆ.

ಇಂದಿನ ಏಕಶಕ್ತಿ ಕೇಂದ್ರಿತ ಜಾಗತಿಕ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರಲು, ಪರ್ಯಾಯವನ್ನು ರೂಪಿಸಲು ಪ್ರಯತ್ನಗಳು ಜರುಗುತ್ತಿವೆ. ದಕ್ಷಿಣ ಅಮೆರಿಕಾದ ದೇಶಗಳು ಯಶಸ್ವಿಯಾಗಿ ಅಮೆರಿಕಾ ಆಯೋಜಿಸಿದ್ದ ಮುಕ್ತ ಮಾರುಕಟ್ಟೆ ಪ್ರಸ್ತಾಪವನ್ನು ಮೂಲೆಗುಂಪಾಗಿಸಿವೆ. ವೆನೆಜುಯೇಲ ಹಾಗೂ ಇತರ ದೇಶಗಳಲ್ಲಿ ಈಚೆಗೆ ಎಡಪಕ್ಷಗಳು ಅಧಿಕಾರ ಗ್ರಹಣ ಮಾಡಿರುವುದು ಶುಭ ಸೂಚನೆ. ಈ ಭೂಭಾಗದ ಬೆಳವಣಿಗೆಗಳು ಅಮೆರಿಕಾಗೆ ತಲೆನೋವಾಗಿ ಪರಿಣಮಿಸಿದೆ. ಆರ್ಥಿಕ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಸಹಕಾರಕ್ಕಾಗಿ ರೂಪುಗೊಂಡಿರುವ ಷಾಂಘಾಯ್ ಸಹಕಾರ ಸಂಸ್ಥೆ ಇನ್ನೊಂದು ಪ್ರಾದೇಶಿಕ ಸಂಘಟನೆ. ಮಧ್ಯ ಏಶಿಯದ ನಾಲ್ಕು ದೇಶಗಳು, ಚೀಣಾ ಮತ್ತು ರಷ್ಯಾವನ್ನು ಸದಸ್ಯರಾಷ್ಟ್ರಗಳನ್ನಾಗಿ ಹೊಂದಿರುವ ಈ ಸಂಸ್ಥೆಯ ಸಮಾವೇಶದಲ್ಲಿ ಭಾರತ ವೀಕ್ಷಕನಾಗಿ ಭಾಗವಹಿಸಿತ್ತು. ಈಚೆಗೆ ಭಾರತ ಈ ಗುಂಪಿನ ಪೂರ್ಣಸದಸ್ಯನಾಗುವ ಇಂಗಿತ ವ್ಯಕ್ತಗೊಳಿಸಿದೆ. ಇದಲ್ಲದೆ ರಷ್ಯಾದ ಉಪಕ್ರಮದ ಮೇರೆಗೆ ಭಾರತ, ರಷ್ಯಾ, ಚೀಣಾ, ಬ್ರೆಜಿಲ್, ದಕ್ಷಿಣ ಆಫ್ರಿಕಾ ಮತ್ತು ಮೆಕ್ಸಿಕೊ ದೇಶಗಳ ವಿದೇಶಾಂಗ ಹಾಗೂ ಹಣಕಾಸಿನ ಸಚಿವರ ಅನೌಪಚಾರಿಕ ಸಮಾವೇಶವೂ ಜರುಗಿದೆ. ಹಾಗೆಯೇ ಭಾರತ, ಬ್ರೆಜಿಲ್, ದಕ್ಷಿಣ ಆಫ್ರಿಕಾಗಳ ನಡುವೆ ಪ್ರತ್ಯೇಕವಾಗಿ ಸಮಾಲೋಚನೆಗಳು ನಡೆಯುತ್ತಿವೆ. ಈ ಎಲ್ಲ ಗುಂಪುಗಳ ಏಕೈಕ ಗುರಿ ಇಂದಿನ ಜಾಗತಿಕ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರುವುದು, ಅಂತಾರಾಷ್ಟ್ರೀಯ ಸಂಘಟನೆಗಳನ್ನು ಹೆಚ್ಚು ಪ್ರಜಾಪ್ರಭುತ್ವಗೊಳಿಸಿ, ಶ್ರೀಮಂತರಾಷ್ಟ್ರಗಳ ಏಕಸ್ವಾಮ್ಯವನ್ನು ಮುರಿಯುವುದು ಆಗಿದೆ. ಇವೆಲ್ಲ ಗುಂಪುಗಳು ಒತ್ತಡಗಳಿಗೆ ಮಣಿಯದೆ, ಪರಸ್ಪರ ಸಹಕಾರಕ್ಕೆ ಒತ್ತುಕೊಟ್ಟು, ಒಂದುಗೂಡಿ ವ್ಯವಹರಿಸಿದರೆ ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಬದಲಾವಣೆ ತರುವುದು ದುಸ್ಸಾಧ್ಯವೇನಲ್ಲ. ಈ ಪ್ರಯತ್ನಗಳು ಯಶಸ್ವಿಗೊಳ್ಳಲಿ ಎನ್ನುವುದೇ ಎಲ್ಲ ಜನಪರಶಕ್ತಿಗಳ ಹಾರೈಕೆ. ಪರ್ಯಾಯ ವ್ಯವಸ್ಥೆಯ ಕಾರ್ಯ ಸಾಧನೆಯ ಮಾರ್ಗ ಕಠಿಣವಾದ್ದಾಗಿದ್ದರೂ ಇಂದಿನ ಪರಿಸ್ಥಿತಿಯಲ್ಲಿ ಅತ್ಯವಶ್ಯಕವಾಗಿ ನಡೆಯಬೇಕಾದ ಕಾರ್ಯ. ಅದು ಸಫಲಗೊಂಡಾಗಲೇ ನಿಜವಾದ ಸಮಾನ ಸಂಬಂಧಗಳ ಸ್ಥಾಪನೆ ಸಾಧ್ಯವಾಗುವುದು.

ಸೀಯಾರ್ಕೆ
'ಚೌಬೀನ', ೪೮೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫

# ನನ್ನ ಜನಗಳು



**ವಾ**ಡಿಕೆಯ ಮಾತಿನಲ್ಲಿ ಜನ ಎಂಬುದನ್ನು ಜಾತಿ ಸೂಚಕ ಅರ್ಥದಲ್ಲೂ ಬಳಸುತ್ತಾರೆ. ಇದೇ ಪದವನ್ನು ಸಾಮಾನ್ಯೀಕರಿಸಿ ಸಮೂಹ/ಗುಂಪು ಸೂಚಿಯಾಗಿ ಬಳಸುವಾಗ ಸ್ಥಳೀಯ ಹಾಗೂ ವಿಶ್ವಸ್ಥ ನೆಲೆಗಳಲ್ಲಿ ಇದರ ಭಾವಸಂಬಂಧ ಕುಗ್ಗುವ ಮತ್ತು ಹಿಗ್ಗುವ ಸಾಧ್ಯತೆಗಳಿಗೆ ಒಳಗಾಗುತ್ತದೆ. ಬಹುವಚನ ಸೂಚಕವಾದ ಈ ಪದ ಕೆಲವು ಬಾರಿ ಏಕವಚನ ಸೂಚಿಯಾಗಿಯೂ ಬಳಕೆಯಾಗುತ್ತದೆ. ಅವ ಒಳ್ಳೆ ಜನ, ಆ ಜನ ಸರಿಯಿಲ್ಲ ಮಾರಾಯ – ಇತ್ಯಾದಿ. ವಿಚಿತ್ರವೆಂದರೆ, ಸಂದರ್ಭವಶದಲ್ಲಿ ಈ ಪದ ಕಟ್ಟಿಕೊಡುವ ಸಂಬಂಧಗಳ ಆಪ್ತತೆ ಮತ್ತು ಅಂತರದ ಪರಿ ಬೆರಗು ಹುಟ್ಟಿಸುತ್ತದೆ. ಇವನಾರವ ಇವ ನಮ್ಮವ ಒಳಗಿನವ ಹೊರಗಿನವ ಇತ್ಯಾದಿ ಸಂಬಂಧಗಳ ಕಾಡುವಿಕೆಯ ಹಿನ್ನೆಲೆಯಲ್ಲಿ ವ್ಯಕ್ತಿ ಹಾಗೂ ಸಮಷ್ಟಿಯ ಸಂಬಂಧಗಳು ಬಿಚ್ಚಿಕೊಳ್ಳುತ್ತವೆ. ವರ್ಣ ಹಾಗೂ ವರ್ಗ ತಾರತಮ್ಯಗಳ ಪಾರಮ್ಯದಲ್ಲಿ ನರಳುತ್ತಿರುವ ನಮ್ಮ ಸಾಮಾಜಿಕ ಸಂದರ್ಭದಲ್ಲಿ ಈ ಕಾಡುವ ಅಸ್ಮಿತೆ ವ್ಯಕ್ತಿಯ ಸಾಮಾಜಿಕ ಬದ್ಧತೆಯನ್ನು ಮನಗಾಣಿಸುವ ನಿಕಷವೂ ಆಗುತ್ತದೆ; ಅಲ್ಲದೆ, ವ್ಯಕ್ತಿಯ ಭಾವನೆ ಆಲೋಚನೆಗಳ ಪೂರ್ವಾಪರಗಳನ್ನು ಬಿಂಬಿಸುವ ಕನ್ನಡಿಯೂ ಆಗುತ್ತದೆ. ಈ ಎಲ್ಲ ವಿಚಿತ್ರ ಸೂಕ್ಷ್ಮಗಳನ್ನು ಒಳಗೊಂಡೂ **ಜನಶಬ್ದಮದು ನಪುಂಸಕ** – ಎಂಬ ಮಾತು ಇದೆ. ಇದೇ ಸಂದರ್ಭದಲ್ಲಿ **ಜನಸಾಗರಮದು ಉತ್ತೇಜಕಂ** – ಎಂಬ ಮಾತೂ ಮನನೀಯವಾದುದು. ಈ ಎರಡೂ ಹೇಳಿಕೆಗಳು ಸಮೂಹಪ್ರಜ್ಞೆಯ ವರ್ತನಾವ್ಯಾಪಾರದ ಪರಿಯನ್ನು ಗ್ರಹಿಸಿದಂತೆ ಮೂಡಿಬಂದ ಅಭಿಪ್ರಾಯಗಳು. ಈ ಎರಡೂ ಅಭಿಪ್ರಾಯಗಳು ಸುಳ್ಳುಗಳಲ್ಲ ಹಾಗೆಯೇ ಎರಡೂ ಆತ್ಯಂತಿಕ ಸತ್ಯಗಳೂ ಅಲ್ಲ; ಕೇವಲ ಸಂದರ್ಭವಶವರ್ತಿ ಪ್ರತಿಕ್ರಿಯೆಗಳು. ಇಷ್ಟಾಗಿಯೂ ಜನ ಸಮೂಹ ಒಂದು ಅಪರಿಮಿತ ಶಕ್ತಿ.

ಇಂಡಿಯಾದ ಸಂದರ್ಭದಲ್ಲಿ ಜನ ಎಂಬುದು ಒಂದಲ್ಲ; ಅದು ಬಹುತ್ವಗಳ ನೆಲೆಯಲ್ಲಿ ವಿಸ್ತರಿಸಿಕೊಂಡಿರುವ ಹಲವು. ವರ್ಣ ಹಾಗೂ ವರ್ಗ ದೃಷ್ಟಿಗಳು ಈ ಬಹುತ್ವಕ್ಕೆ ಕಾರಣವಾಗಿರುವಂತೆಯೇ ಭಾಷೆ, ಪ್ರದೇಶ, ಕಸುಬು, ಆಚಾರ, ವಿಚಾರ, ವೇಷವಿನ್ಯಾಸ ಇತ್ಯಾದಿಗಳು ಕೂಡ ಬಹುತ್ವಗಳ ಅಸ್ಮಿತೆಗಳಿಗೆ ದ್ರವ್ಯಾಂಶಗಳಾಗಿವೆ. ಆದರೆ, ಪರಸ್ಪರ ಸಂಯೋಗಕ್ಕಿಂತ ವಿಯೋಗದಲ್ಲಿ ಅವುಗಳ ಘರ್ಷಣೆ – ಸಹಕಾರ ಸ್ವಭಾವಗಳು ಸಂರಚಿತವಾಗಿವೆ. ಇಂಥ ವಿಯೋಗ ರಚನೆಯನ್ನು ಭಗ್ನಗೊಳಿಸಿ ಎಲ್ಲ ಸಮುದಾಯಗಳನ್ನು ಸಂಯೋಗ ಭಾವದಲ್ಲಿ ಒಂದುಗೂಡಿಸುವುದೆಂದರೆ ಅದು ಸುಲಭದ ಕೆಲಸವಲ್ಲ. ಈ ಸಂಯೋಗ ಭಾವವನ್ನು ಈ ನೆಲದ ಬದುಕಾಗಿಸಲು ಹಲವು ಚೇತನಗಳು ಶ್ರಮಿಸಿವೆ. ಇಡೀ ಜೀವಿತವನ್ನೇ ಇದಕ್ಕಾಗಿ ಮುಡುಪಿಟ್ಟಂತೆ ಹೋರಾಡಿವೆ. ಆ ಹೋರಾಟದ ಹಾದಿ ಪ್ರಾಣಕ್ಕೂ ಎರವು ತಂದ ಕುತ್ತಿನ ಹಾದಿ. ಹೀಗಾಗಿ ಇಂಥ ಹೋರಾಟಗಳು ನಮ್ಮ ನಡುವೆ ಮಹಾ ಪ್ರಯಾಣಗಳಾಗಿವೆಯೇ ಹೊರತು ಪರಮ ಪರಿಣಾಮಕಾರಿಗಳಾಗಿಲ್ಲ.

**ಇವನಾರವ**

ಕವಿ ಸಿದ್ದಲಿಂಗಯ್ಯ **ನನ್ನ ಜನಗಳು** ಕವನದಲ್ಲಿ ಸೈಜುಗಲ್ಲು ಹೊತ್ತೋರು ಶೋಷಣೆಗೆ ಒಳಗಾದೋರು ನನ್ನ ಜನಗಳು ಎಂದು ಹೇಳುತ್ತಾ ಹಸಿವು ಅವಮಾನ ಹಾಗೂ ಶ್ರಮದ ನೆಲೆಯಲ್ಲಿನ ಎಲ್ಲ ಸಮುದಾಯಗಳನ್ನೂ ವ್ಯಾಪಿಸಿಕೊಂಡಂತೆ ನನ್ನ ಜನಗಳನ್ನು ತಬ್ಬಿಕೊಂಡರು. ಹೀಗೆ ತಮ್ಮ ನಿಲುವನ್ನು ನಿರ್ದಿಷ್ಟಪಡಿಸಿಕೊಂಡರು. ಇದು ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧಿಕೃತತೆಯನ್ನು ಒಳಗೊಂಡ ಕವನ. ನನಗೆ ಈ ಕವನ ಓದುವಾಗಲೆಲ್ಲ ಥಟ್ಟನೆ ಬಸವಣ್ಣನವರ **ಇವನಾರವ** ವಚನ ನೆನಪಾಗುತ್ತದೆ.

ಸಿದ್ಧಲಿಂಗಯ್ಯನವರಿಗೆ ನನ್ನ ಜನಗಳು ಯಾರು ಅನ್ನುವುದನ್ನು ಹೆಮ್ಮೆಯಿಂದ ಅಭಿಮಾನದಿಂದ ನೈತಿಕ ಕೆಚ್ಚಿನಿಂದ ಹೇಳಲು ಸಾಧ್ಯವಾದಂತೆ ಬಸವಣ್ಣನವರಿಗೆ ಯಾಕೆ ಸಾಧ್ಯವಾಗಲಿಲ್ಲ? ಅವರ ಐಡೆಂಟಿಟಿ ಅನ್ನೋದು ದ್ವಂದ್ವ ಅನುಮಾನ ಆತಂಕ ತಳಮಳ ಹಿಂಜರಿಕೆ ಮೊದಲಾದ ಭಾವಸಂದಿಗ್ಧಗಳಿಗೆ ಸಿಲುಕಿದ ಒದ್ದಾಟದಲ್ಲಿ ವ್ಯಕ್ತವಾಗಲು ಕಾರಣವೇನು ? ಇದು ಮುಖ್ಯ ಪ್ರಶ್ನೆ. ಎಲ್ಲರಿಗೂ ಗೊತ್ತಿರುವ ಹಾಗೆ ಬಸವಣ್ಣ ತನ್ನ ಜನಗಳು ಯಾರು ಅನ್ನುವುದನ್ನು ಕಂಡುಕೊಳ್ಳಲು ಅನಿವಾರ್ಯವಾಗಿ ತನ್ನ ಹುಟ್ಟನ್ನು ಅಪವರ್ಣೀಕರಣಕ್ಕೆ ಅಪವರ್ಗೀಕರಣಕ್ಕೆ ಒಳಗುಮಾಡಬೇಕಾಯಿತು. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟದ ಹೊರೆಯಿಂದ ಬಿಡುಗಡೆಗೊಳ್ಳಲು ಅವರು ಪಡಿಪಾಟಲು ಅನುಭವಿಸಬೇಕಾಯಿತು. ಇದಕ್ಕೇ ಮತ್ತೆ ಮತ್ತೆ ಅವರು ಇವನಾರವ ಇವನಾರವನೆಂದಿನಿಸದಿರಯ್ಯ ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯ ನಿಮ್ಮ ಮನೆಯ ಮಗನೆಂದೆನಿಸಯ್ಯ ಎಂದು ಹಲುಬಿದ್ದಾರೆ. ನಿಮ್ಮ ಮನೆ ಎಂದರೆ ಕಾಯಕ ಜೀವಿಗಳ ಕಲ್ಯಾಣ ರಾಜ್ಯದ ಜಂಗಮ ದೈವವಾದ ಕೂಡಲಸಂಗಮನ ಮನೆ. ಅವಮಾನದ ನರಕದಲ್ಲಿ ನೊಂದ, ಹಸಿವಿನ ಬೇಗುದಿಯಲ್ಲಿ ಬೆಂದ ಎಲ್ಲ ಶ್ರಮಜೀವಿಗಳ ಕೂಡಲಸಂಗಮದ ತಾಣ ಕಲ್ಯಾಣ. ಅವರೆಲ್ಲರ ಭಾವ ಬಾವುಣಿಕೆಯ ಅಸ್ಮಿತೆಯ ತಾಣ ಆ ಮಹಾಮನೆ. ಅಂಥ ಮಹಾಮನೆಯ ಮಗನೆಂದೆನಿಸಿಕೊಳ್ಳುವ ನೈತಿಕ ಅಧಿಕಾರಕ್ಕೆ ಪ್ರಾಯಶ್ಚಿತ್ತ ಭಾವದಲ್ಲಿ ಬೇಡುತ್ತಾರೆ ಬಸವಣ್ಣ. ಈ ಭಾವದಲ್ಲೇ ತನ್ನ ಹುಟ್ಟನ್ನು ನಿರಾಕರಿಸಿ, ಹೊಸ ಹುಟ್ಟನ್ನು ಪಡೆಯುವ ಪವಿತ್ರೀಕರಣದ ಮಾತನಾಡುತ್ತಾರೆ.

*ಚೆನ್ನಯ್ಯನ ಮನೆಯ ದಾಸಿಯ ಮಗನು*
*ಕಕ್ಕಯ್ಯನ ಮನೆಯ ದಾಸಿಯ ಮಗಳು*
*ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ ಸಂಗವ ಮಾಡಿದರು*
*ಇವರಿಬ್ಬರಿಗೆ ಹುಟ್ಟಿದ ಮಗ ನಾನು*
*ಕೂಡಲ ಸಂಗಮದೇವ ಸಾಕ್ಷಿಯಾಗಿ.*

ಕಾಯಕದ ಸಂದರ್ಭದಲ್ಲಿ ಜೀವಗಳು ಆಕರ್ಷಿತವಾಗಿ ಕೂಡಿದ್ದರ ಫಲ **ನಾನು** ಎನ್ನುವಲ್ಲಿ ತಮ್ಮ ಹುಟ್ಟಿನ ಮೂಲದ ಪಾಪಪ್ರಜ್ಞೆಯನ್ನು ಕಳೆದುಕೊಂಡು ಕೂಡಲ ಸಂಗಮ ಸಾಕ್ಷಿಯಲ್ಲಿನ ಸಂಗದ ಶಿಶುವೆನ್ನುವ ಪಾವಿತ್ರ್ಯತೆಯ ಐಡೆಂಟಿಟಿಯಲ್ಲಿ ತಮ್ಮ ಆತ್ಮ ಪ್ರತ್ಯಯವನ್ನು ಬೆಳಗಿಸಿಕೊಳ್ಳುತ್ತಿದ್ದಾರೆ. ಈ ಭಾವ ಎಷ್ಟು ತೀವ್ರತರದಲ್ಲಿ ಮುಂದುರಿಯುತ್ತದೆಂದರೆ,

*ಅಪ್ಪನು ನಮ್ಮ ಮಾದಾರ ಚನ್ನಯ್ಯ*
*ಬೊಪ್ಪನು ನಮ್ಮ ಡೋಹರ ಕಕ್ಕಯ್ಯ*
*ಚಿಕ್ಕಯ್ಯ ನಮ್ಮಯ್ಯ ಕಾಣಯ್ಯ*
*ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ*
*ಎನ್ನನೇತಕ್ಕರಿಯಿರಿ ಕೂಡಲಸಂಗಯ್ಯ ?*

*ಅಯ್ಯಾ ನಿಮ್ಮ ವಂಶವಳಿಯಲು ಒಬ್ಬ ತೊತ್ತಿನ ಮಗ ಹುಟ್ಟಿದ*
*ಆತನ ತೊತ್ತಿನ ಮಗ ನಾನಯ್ಯ*
*ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯ*
*ಕೂಡಲಸಂಗಮ ದೇವಯ್ಯ*
*ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ ಎನ್ನ ತೊತ್ತುತನಕ್ಕೆ ಕೇಡಿಲ್ಲ.*

ಇಲ್ಲಿ ಸಾಮಾಜಿಕವಾಗಿ ಇದ್ದ ಹಲವು ಸ್ಥಾಪಿತ ನೀತಿ ಶ್ರೇಷ್ಠತೆಗಳನ್ನು ತಿರಸ್ಕರಿಸಿ, ನಿಜವಾದ ಜನ ಸಂವೇದನೆಯ ಮೌಲ್ಯ ಸಂದೇಶಗಳನ್ನು ಪ್ರತಿಪಾದಿಸುತ್ತಿರುವುದು ಕಂಡುಬರುತ್ತಿದೆ. ಶ್ರಮಕ್ಕೆ ದೊರೆತ ಮಾನ್ಯತೆ ಶ್ರಮದ ಸಂದರ್ಭದಲ್ಲಿನ ವ್ಯಕ್ತಿ ಸಂಬಂಧಗಳ ಸಂಲಗ್ನಕ್ಕೆ ದೊರೆತ ಪುರಸ್ಕಾರ. ಇವು ಇಲ್ಲಿ ವ್ಯಕ್ತಿಯನ್ನು ಗೌರವ ಭಾಜನಕ್ಕೆ ಪಾತ್ರವಾಗಿಸಿದ ಮೂಲಾಂಶಗಳಾಗಿವೆ. ಹೀಗೆ ಅಪವರ್ಣೀಕರಣ ಮತ್ತು ಅಪವರ್ಗೀಕರಣ ಭಾವದಲ್ಲಿ ತಮ್ಮ ವ್ಯಕ್ತಿತ್ವದ ನೈತಿಕತೆಯನ್ನು ಸಾಧಿಸಿಕೊಳ್ಳಬೇಕಾದ ಅನಿವಾರ್ಯತೆ ಬಸವಣ್ಣನವರಿಗೆ ಇತ್ತು. ಇದು ಬಸವಣ್ಣನವರೊಬ್ಬರ ಪರದಾಟವಲ್ಲ. ವರ್ಣತತ್ವದ ಹುಸಿಶ್ರೇಷ್ಠತೆಯ ಅಹಂಕಾರದಿಂದ ಕೆಳಗಿಳಿದು ಬದುಕನ್ನು ನೋಡುವ ಯಾವುದೇ ಸೂಕ್ಷ್ಮಜ್ಞನ ಒಳಗುದಿ ಇದು. ಮಾನವೀಯ ತುಡಿತದ ತಾಯಿಯ ಅಂತಃಕರಣದ ಭಾವಸ್ಪಂದದಲ್ಲಿನ ನಮ್ಮ ಸುತ್ತಲಿನ ಸಾಮಾಜಿಕ ಸನ್ನಿವೇಶವನ್ನು ಪರಿಭಾವಿಸುವ ಯಾವುದೇ ಮೇಲುಸ್ತರದ ಮನಸ್ಸು ಅನಿವಾರ್ಯವಾಗಿ ಒಳಗಾಗಬೇಕಾಗಿರುವ ಪ್ರಾಯಶ್ಚಿತ್ತ ವಿಧಿ ಇದು. ಗಾಂಧಿ ಈ ವಿಧಿಗೆ ಒಳಗಾಗಿ ಹೊಸ ಮನುಷ್ಯರಾದರು. ಮಹಾತ್ಮರಾದರು. ಬಸವಣ್ಣನವರ ಈ ಸ್ಥಿತ್ಯಂತರ ಗತಿಯನ್ನು ಕುರಿತೇ ಒಂದು ಮಾತು ಪ್ರಚಲಿತವಿದೆ. ಬಸವಣ್ಣ ಬ್ರಾಹ್ಮಣ್ಯವನ್ನು ಬಿಟ್ಟರೂ ಬ್ರಾಹ್ಮಣ್ಯ ಬಸವಣ್ಣನನ್ನು ಬಿಡಲಿಲ್ಲ – ಎಂಬುದೇ ಆ ಆರೋಪ. ಆದರೆ, ಬಸವಣ್ಣನವರ ವಚನಗಳನ್ನು ಪರಿಭಾವಿಸಿದಾಗ ಈ ಮಾತು ಸುಳ್ಳೆನಿಸುತ್ತದೆ. ಆದರೆ, ಇಲ್ಲಿ ಒಂದು ಸತ್ಯ ಢಾಳಾಗಿ ಗೋಚರಿಸುತ್ತದೆ. ಅದೆಂದರೆ ಅಂದಿನಿಂದ ಇಂದಿನವರೆಗೂ ಈ ಶ್ರೇಣೀಕರಣದ ಗೋಡೆಗಳನ್ನು ಎಷ್ಟೇ ದಾಟಿದರೂ ಆ ದಾಟಿದ ಭಾವಸ್ಥಿತಿಗಳನ್ನು ಅನುಮಾನಿಸುವ ಗುಮಾನಿಯಿಂದ ನೋಡುವ ಒಂದು ಸ್ಥಿತಿ ನಮ್ಮ ನಡುವೆ ಇರುವ ಕ್ರೂರ ವಾಸ್ತವ. ಇಂಥ ಕ್ರೂರ ವಾಸ್ತವದ ನಡುವೆ ಎಷ್ಟೋ ವೇಳೆ ನಂಬಿಕೆಗಳೇ ಕುಸಿದುಹೋಗುವ ಅಪಾಯಗಳಿರುತ್ತವೆ. ಇದಕ್ಕೆ ಕಾರಣ ವಿಚಿತ್ರ ರೀತಿಯಲ್ಲಿ ಮನಸ್ಸುಗಳನ್ನು ಛಿದ್ರೀಕರಿಸಿರುವ ಈ ಸಾಮಾಜಿಕ ಸ್ಥಿತಿ. ಸಾಹಿತ್ಯಿಕ ಸಾಂಸ್ಕೃತಿಕ ಆಧ್ಯಾತ್ಮಿಕ ಮನಸ್ಸುಗಳು ಮಾತ್ರ ಇಂಥ ಬಿರುಕುಗಳಿಂದ ಅಪಾಯಗಳಿಂದ ಸಮುದಾಯಗಳನ್ನು ಮನಸ್ಸುಗಳನ್ನು ಸಂರಕ್ಷಿಸಬಲ್ಲುವು. ಛಿದ್ರಗೊಂಡಿರುವುದನ್ನು ಒಂದುಗೂಡಿಸಬಲ್ಲುವು.

**ಪ್ರೊ|| ಎಸ್. ಜಿ. ಸಿದ್ಧರಾಮಯ್ಯ**
ನಂ. ಎಸ್-೧೨೩, ದೀಪ್ತಿ ಅಪಾರ್ಟ್‌ಮೆಂಟ್ - ಎಫ್-೨, ಕಿರ್ಲೋಸ್ಕರ್ ಕಾಲನಿ, ೧ನೇ ಕ್ರಾಸ್,
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

